ಶ್ರೀ ಪ್ರಸನ್ನ ವೆಂಕಟದಾಸಾರ್ಯ ವಿರಚಿತ

# ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ

(ನಾಮಗಳ ಸಂದರ್ಭಸಹಿತ ಅರ್ಥವಿವರಣೆ - ಕನ್ನಡದ ಪ್ರಪ್ರಥಮ ವಿಷ್ಣು ಸಹಸ್ರನಾಮ)

## ಶ್ರೀ ಪ್ರಸನ್ನ ವೆಂಕಟದಾಸರ ಸಮಗ್ರ ಕೃತಿಗಳಲ್ಲಿ ಆಧ್ಯಾತ್ಮಿಕ ಒಳನೋಟ

ಸಂಪುಟ - ೧





ಡಾ. ವ್ಹಿ.ಬಿ. ಕುಲಕರ್ಣಿ

ಶ್ರೀ ಪ್ರಸನ್ನ ವೆಂಕಟ ದಾಸರ ಸಮಗ್ರ ಕೃತಿಗಳಲ್ಲಿಯ
ಆಧ್ಯಾತ್ಮಿಕ ಒಳನೋಟ

## ಸಂಪುಟ – ೧

# ಶ್ರೀ ಪ್ರಸನ್ನವೆಂಕಟ ದಾಸರ ಕೃತಿ
# "ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ"

(ನಾಮಗಳ ಸಂದರ್ಭ ಸಹಿತ – ಅರ್ಥವಿವರಣೆ)
(ಈ ಕೃತಿ "ಶ್ರೀಪ್ರಸನ್ನವೆಂಕಟ ದಾಸಾರ್ಯ ವಿರಚಿತ ಕನ್ನಡದ ಪ್ರಪ್ರಥಮ
ಶ್ರೀವಿಷ್ಣು ಸಹಸ್ರನಾಮ")

ಲೇಖಕರು
**ಡಾ|| ವ್ಹಿ.ಬಿ. ಕುಲಕರ್ಣಿ**



**ಶ್ರೀ ಪ್ರಸನ್ನ ವೆಂಕಟ ಪ್ರಕಾಶನ**
# ೧೫, "ಮಂತ್ರಾಲಯ" (ಪ್ರಶಾಂತಿ ನಗರ), ೯ನೇ "ಬಿ" ಮುಖ್ಯರಸ್ತೆ
೧೭ನೇ ಅಡ್ಡರಸ್ತೆ, ಇಸ್ರೋ ಲೇಔಟ್, ಬೆಂಗಳೂರು – ೫೬೦೦೭೮
ದೂರವಾಣಿ : ೦೮೦–೨೬೬೬೫೩೮, ಮೊಬೈಲ್ : 9448011954
Email : rsk9651@yahoo.com/subhasbk@gmail.com
trust@prasannavenkatadasaru.org
website : www.prasannavenkatadasaru.org

SHRI PRASANNA VENKAT DASARA KRATIGALLAIYA ADHYTMIK VALLANOTA - SAMPUT-1, KRATI - SAMASTANAM SHATGANA CHARAN PADYAMALA" - with meaning of every word and comentary there on

*Written By :* **Dr. V.B. Kulkarani**

*Published by :* **Sri Prasanna Venkata Publications**

No. 15, "Mantralaya" (Prashantinagar)

9th 'B' Main Road, 17th Cross

ISRO Layout Bangalore - 560078



Pages : xii + 196 = 208

Copies : 1,000

Used Paper : 70 GSM Maplitho

Cover Page : V.raj

*Copies Available at :*

1. Shrimati : **REKHA KAKHANDAKI**
   No15, 'Mantralaya' Prashantinagar
   9th 'B' Main Road, 17th Cross
   ISRO Layout Bangalore - 560078
   Phone : 080-26665398 Mob : 9448011954
   Email : rsk9651@yahoo.com/subhasbk@gmail.com
   trust@prasannavenkata dasaru.org

2. Dhruvacharya. kakhandaki
   No. 35; 'C' Block
   Sector - 3
   Navangar Bagalkot

ಮುದ್ರಣ :




23, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - 18
ದೂರವಾಣಿ : 26604835



# ನಿವೇದನೆ

ಹರಿಕರುಣೆಯ ಕಾಲಸನ್ನಿಹಿತವಾದಂತೆ ಪೂರ್ವಜನ್ಮದ ಸುಕೃತವೂ ಫಲಿಸಿ ಬರುವದು. ವಿದ್ಯೆಯ ಅಲ್ಪತೆಯನ್ನೂ ನಡೆನುಡಿಗಳ ಹಾಗೂ ಆಚಾರವಿಚಾರಗಳ ಪಾವಿತ್ರ್ಯತೆಯನ್ನು ಲೆಕ್ಕಿಸದೆ ಘನಕರುಣಾಳುವಾದ ನನ್ನ ಕುಲದೇವತೆ ತಿರುಪತಿಯ– ಶ್ರೀ **ವೆಂಕಟೇಶನ** ಪ್ರೇರಣೆಯಂತೆ ತವಕ ಹೆಚ್ಚಾಗಿ ಸರ್ವಪ್ರೇರಕನ ಹಾಗೂ ಸರ್ವಕರ್ತಾರನ ಈ ಸೇವಾ ಕಾರ್ಯಕ್ಕೆ ನನ್ನನ್ನು ತೊಡಗಿಸಿಕೊಂಡೆ.

ಪ್ರಸನ್ನೀಕೃತ ಜಗದೊಡೆಯನಿಂದಲೇ ತನ್ನ ಜಿಹ್ವಾಕಮಲ–ದಳದ ಮೇಲೆ **"ಪ್ರಸನ್ನ ವೆಂಕಟ"** ನೆಂಬ ನಾಮಾಂಕಿತವನ್ನು ಪಡೆದ ದಾಸಶ್ರೇಷ್ಠರು – ಸಂಸ್ಕೃತ ಹಾಗೂ ಕನ್ನಡ ಭಾಷೆಗಳೆರಡರಲ್ಲೂ ಪಂಡಿತೋತ್ತಮರು. ಇವರ ನುಡಿಯು ಕೃಷ್ಣೆಯ ಆಳವನ್ನೂ ತುಂಗೆ ಹಾಗೂ ಭದ್ರೆಯರ ಅಬ್ಬರವನ್ನು ಘಟಪ್ರಭೆ ಹಾಗೂ ಮಲಪ್ರಭೆಗಳ ಸೆಳೆತವನ್ನು ಕೂಡಿಕೊಂಡಿದೆ. ಅಂಥ ಪ್ರವಾಹದಲ್ಲಿ ಈ ಜಾಡಲು ಅಂಬಿಗ–ಜಗದಂಬಾ–ರಮಣನ ಕೃಪೆ ಇದ್ದಿರಬೇಕು.

ಐದಾರು ತಲೆಮಾರುಗಳು ಸಂದು ಹೋದರೂ ಮೂಲತಃ ಕಾಖಂಡಕಿಯವರಾಗಿದ್ದು ಬಾಗಲಕೋಟೆ ಹಾಗೂ ಬದಾಮಿಯಲ್ಲಿ ವಾಸಿಸುತ್ತಿದ್ದು ಉತ್ತರ ಕರ್ನಾಟಕದಲ್ಲೆಲ್ಲ ಸಂಚರಿಸುತ್ತಿದ್ದ ಈ ದಾಸರ ಕೃತಿಗಳು ಹರಿದಾಸ ಬಳಗಕ್ಕೆ ಹೆಚ್ಚಾಗಿ ಪರಿಚಯವಾಗದಿರಲು ಆ ಕೃತಿಗಳ ಗಡಚುತನವೇ ಮೂಲಕಾರಣ. ಇತ್ತೀಚಿನ ತಲೆಮಾರಿನ ಜನರಲ್ಲಿಯ ಸಂಸ್ಕೃತ ಭಾಷೆಯ ಜ್ಞಾನ ಮಾಂದ್ಯತ್ವವೂ ಇದಕ್ಕೆ ಪೂರಕವಾಗ ತೊಡಗಿತು. ಇನ್ನೇನು? ಕಾಲ ಪ್ರವಾಹದಲ್ಲಿ ಇವರ ಅಮರ ಕೃತಿಗಳು ತೇಲಿ ಹೋಗುವವು ಎನ್ನುವಂತಹ ಪರಿಸ್ಥಿತಿಯಲ್ಲಿ ದೈವ ಬಲದಿಂದ ನನ್ನ ವಿದ್ಯಾಗುರುಗಳಾದ–ಶ್ರೀಮಾನ್–ಎ.ಟಿ. ಪಾಟೀಲರು ತಮ್ಮ ಹಾಗೂ ತಮ್ಮ ಮಾರ್ಗದರ್ಶಕರಾದ, ವಿದ್ಯಾರತ್ನ ಪಂಚಮುಖಿ ರಾಘವೇಂದ್ರಾಚಾರ್ಯರ ಸ್ವಂತ ಜಿಲ್ಲೆಯವರೆಂಬ ಆತ್ಮೀಯ ಗೌರವದಿಂದ "ಶ್ರೀ–ಪ್ರ–ಸ–ನ್ನ–ವೆಂ–ಕ–ಟ–ದಾ–ಸ–ರು ಮತ್ತು ಅವರ ಕೃ–ತಿ–ಗ–ಳು" ಎಂಬ ವಿಷಯವನ್ನಾಯ್ದುಕೊಂಡು ವಿಮರ್ಶಾತ್ಮಕ ಪ್ರಬಂಧ ರಚಿಸಿ, ಮುಂಬಯಿ ವಿಶ್ವವಿದ್ಯಾಲಯದಿಂದ ಸನ್ 1949ರಲ್ಲಿ ಪಿ.ಎಚ್.ಡಿ. ಪದವಿಯನ್ನು ಪಡೆದರು.

ಪ್ರಬಂಧ ಲೇಖಕರು, ಜಮಖಂಡಿಯಲ್ಲಿ ಹಾಯಸ್ಕೂಲ ಶಿಕ್ಷಕರಾಗಿದ್ದರು ಆಗರ್ಭ ಸಿರಿವಂತರಾಗಿರದ್ದರಿಂದ, ಸೇವೆಯ ಬಿಡುವಿಗೆ ಹೆಚ್ಚು ಕಾಲಾವಕಾಶ ದೊರೆಯದ್ದರಿಂದ, ದಾಸರ ಕೃತಿಗಳು ನಶಿಸಿ ಹೋಗುವಂತಹ ಸಂದಿಗ್ಧ ಪರಿಸ್ಥಿತಿಯಲ್ಲಿದ್ದುದರಿಂದ, ಕೃತಿಗಳ ಗಡಚುತನದಿಂದ, ಉಚ್ಚವರ್ಣೀಯ ಜನರ ಮಡಿವಂತಿಕೆಯಿಂದ–ಜನಸಾಮಾನ್ಯರ ಕೈ–ಬಾಯಿಗಳಿಗೆ ಸೇರದೆ ಇದ್ದುದರಿಂದ, ಮನೆತನದ ಆಸ್ತಿಯ ವ್ಯಾಜ್ಯದಿಂದ ಮೂಲಕೃತಿಗಳೆಲ್ಲ ಪ್ರಕೃತಿಯ ಪ್ರಕೋಪಕ್ಕೊಳಗಾಗಿ ಹಾಳಾದ್ದರಿಂದ, ಹುರಿದ ಕಡಲೆಗಳೆಂದು ಭಾವಿಸಿ ಕಲ್ಲು ಕಡಲೆಗಳನ್ನು ಕಚ್ಚಿದಂತಾಗಿ ಬಹಳ ಪರಿಶ್ರಮವಹಿಸಿ, ಪ್ರಬಂಧವನ್ನೇನೋ ಬರೆದು ಕೊಟ್ಟರೂ. ಅದರಲ್ಲಿ ಲೋಪದೋಷಗಳು ಉಳಿದುಕೊಂಡವಾದರೂ, ಕನ್ನಡ ನಾಡಿನ ದ್ವೈತ–ಮತ ಹರಿದಾಸವೆಂಬಾಗಸದಲ್ಲಿ, ಅವರ ಹಂಬಲದಂತೆ ಹುಣ್ಣಿಮೆಯ ಚಂದ್ರನಾಗುವ ಸದವಕಾಶ ಒದಗಿ ಬರಲಿಲ್ಲವಾದರೂ ಸ್ವಯಂಪ್ರಕಾಶಮಾನವಾದ **ಧ್ರುವ** ಚುಕ್ಕೆಯಾಗಿ ಮಿನುಗುತ್ತಿರುವದು ಚಿರ ಸತ್ಯಸಂಗತಿ.

ಮಂತ್ರ ಜಪಕ್ಕಿದ್ದಂತೆ ನಿಬಂಧನೆಗಳು ನಾಮಜಪಕ್ಕಿಲ್ಲ. ನಾಮಜಪವನ್ನು ಯಾರೂ, ಯಾವಕಾಲಕ್ಕೂ, ಯಾವ ಸ್ಥಳದಲ್ಲೂ, ಯಾವ ಪರಿಸರದಲ್ಲೂ, ಎಂಥ ಸ್ಥಿತಿಯಲ್ಲೂ

ಮಾಡಬಹುದೆಂಬ ಧಾರ್ಮಿಕ ಸಡಲಿಕೆಯಿಂದ ಸಹಜವಾಗಿಯೇ ನನ್ನ ಮನ ಅತ್ತ ಹರಿಯಿತು. ಬರಬರುತ್ತ ಅರ್ಥವನ್ನರಿಯದೆ ಈ ನಾಮ ಜಪವನ್ನುಚ್ಚರಿಸುವ ಶುಕ ಪಾಠಬೇಡವೆನಿಸಿ ಅರ್ಥದ ಕಡೆಗೆ ಗಮನ ಹರಿಸಿದಾಗ ನನ್ನಲ್ಲಿಯ ಸಂಸ್ಕೃತ ಭಾಷೆಯ ಜ್ಞಾನದ ಕೊರತೆ ಎದ್ದು ಕಾಡಹತ್ತಿತು. ಅದರಿಂದ ಕನ್ನಡ ಹರಿದಾಸರ ಕೃತಿಗಳ ಸವಿ ಸವಿಯಲೆಂದು ಹವಣಿಸಿ ಶ್ರೀ–ಪ್ರ–ಸ–ನ್ನ–ವೆಂ–ಕ–ಟ–ದಾಸರ **"ಸಮಸ್ತ ನಾಮ ಮಣಿಗಣ ಷಟ್‌ಚರಣ ಪದ್ಯಮಾಲೆ"**ಯನ್ನು ಮೆಲುಕಾಡಿಸತೊಡಗಿದೆ. ಇದೂ ಸಹ ಸಂಸ್ಕೃತದ ವಿಷ್ಣು ಸಹಸ್ರನಾಮದಷ್ಟೇ ಗಡುಚೆನಿಸತೊಡಗಿತು. ಆದರೂ ಇದರಲ್ಲಿ ಒಂದು ಬಗೆಯ ವಿಶೇಷ ವೈಶಿಷ್ಟ್ಯವನ್ನು ಕಂಡುಕೊಂಡೆ. ಭೀಷ್ಮಾಚಾರ್ಯರು ಶರಶಯ್ಯೆಯ ಮೇಲೆ ಮಲಗಿಕೊಂಡು ಹೇಳಿದ. ಶ್ರೀ ವಿಷ್ಣು ಸಹಸ್ರನಾಮವು ಗುಣವಾಚಕವಾಗಿದ್ದರೆ ಶ್ರೀಪ್ರಸನ್ನ ವೆಂಕಟದಾಸರು ಹೇಳಿದ ಶ್ರೀವಿಷ್ಣು ವಾಚಕ. ದೇವರ ನಾಮುಗಳು ಕ್ರಿಯಾವಾಚಕಗಳಾಗಿವೆ. ಶ್ರೀಹರಿಯ ಗುಣ–ಕ್ರಿಯೆಗಳಿಗೆ ಅಭೇದವಿದೆ. ಆದರೂ ಇದೊಂದು ಹೊಸಬಗೆಯೆನಿಸಿ ಆಳವಾಗಿ ಅಭ್ಯಸಿಸಬಯಸಿ, ಮೂಲ ಕೃತಿಯನ್ನು ಬೆಳಕಿಗೆ ತಂದ ಗ್ರಂಥ ಕರ್ತೃಗಳಾದ ನನ್ನ ವಿದ್ಯಾಗುರುಗಳ ಅಪ್ಪಣೆ ಹಾಗೂ ಆಶೀರ್ವಾದ ಪಡೆದುಕೊಂಡು ಈ ಪದ್ಯಮಾಲೆಯಲ್ಲಿಯ ಶ್ರೀಹರಿಯ ನಾಮಗಳ ಅರ್ಥದ ಟಿಪ್ಪಣಿ ಮಾಡಿಕೊಳ್ಳ ಹತ್ತಿದೆ. ಇದರ ನೆಪದಿಂದ ಹಲವಾರು ವೈದಿಕ ಗ್ರಂಥಗಳ ಹಾಗೂ ಮಧ್ವಶಾಸ್ತ್ರ ಸಂಪನ್ನರ ಪರಿಚಯ ಮಾಡಿಕೊಂಡು, ಅವರಿಂದ ಸುಜ್ಞಾನದ ಸುಧಾಪಾನದ ಸದವಕಾಶ ದೊರೆಯಿತಾದರೂ ನಾನು ಕೈಕೊಂಡ ಈ ಕಾರ್ಯವೂ ಅಪೂರ್ಣವಾಗಿಯೇ ಉಳಿದಿದೆ. ಅನಂತ ಕಲ್ಯಾಣ ಗುಣಪರಿಪೂರ್ಣನಾದ **ಶ್ರೀಹರಿ**ಯನ್ನು ಜಗನ್ಮಾತೆಯಾದ ಶ್ರೀಲಕ್ಷ್ಮೀದೇವಿಯೇ ಸಂಪೂರ್ಣವಾಗಿ ಅರಿಯದಿದ್ದಾಗ ನನ್ನಂತಹ ಹುಲು ಮನುಜನ ಪಾಡೇನು?

ಈ ಪದ್ಯದಲ್ಲಿ ಶ್ರೀವ್ಯಾಸಗ್ರಥಿತ ಶ್ರೀವಿಷ್ಣು ಸಹಸ್ರನಾಮ ಸ್ತೋತ್ರದಲ್ಲಿ ಇದ್ದಂತೆ ಸಹಸ್ರನಾಮಗಳು ಹೊರಡುವುದಿಲ್ಲವಾದರೂ ಸಮೀಪದ ಹೆಚ್ಚಿನ ಅಂಕಿಯನ್ನೇ ನಿರ್ದೇಶಿಸಬೇಕೆಂಬ ಪ್ರಘಾತವಿದ್ದುದರಿಂದ ನಾನು ಇದಕ್ಕೆ – ಶ್ರೀಪ್ರಸನ್ನ ವೆಂಕಟದಾಸಾರ್ಯ ವಿರಚಿತ – **"ಶ್ರೀವಿಷ್ಣು ಸಹಸ್ರ ನಾಮ ಸ್ತೋತ್ರ"** – ವೆಂದೇ ಹೆಸರಿಸಲಡ್ಡಿಯಿಲ್ಲವೆಂದೇ ನನ್ನ ಅನಿಸಿಕೆ.

ಉಡುಪಿಯ ಶ್ರೀಪಲಿಮಾರು ಹಾಗೂ ಭಂಡಾರಕೇರಿ ಈ ಉಭಯ ಮಠಗಳ ಪೀಠಾಧೀಶರಾದ – ಶ್ರೀ. ಶ್ರೀ. ವಿದ್ಯಾಮಾನ್ಯತೀರ್ಥರು, ತಮ್ಮ ಮಠದ ಪಂಡಿತ ಶಿಷ್ಯರಾದ ಶ್ರೀ ಸಗ್ರಿರಾಘವೇಂದ್ರ ಉಪಾಧ್ಯಾಯರಿಂದ ಶ್ರೀವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ ಬರೆಸಿದ ಟೀಕಾಗ್ರಂಥವನ್ನು ಈ ಕೃತಿಯಲ್ಲಿ ಹೇರಳವಾಗಿ ಬಳಸಿಕೊಂಡಿದ್ದೇನೆ.

ಶ್ರೀಮಾನ್ ಪಂಡಿತ ವೇದಮೂರ್ತಿ– ದಾಮೋದರಾಚಾರ್ಯ ಉಮರ್ಜಿ, ಬೆಳಗಾಂವ; ಇವರು ಈ ಕೃತಿಯ ಬರಹ ತಾವೇ ನನ್ನ ಕೈಹಿಡಿದು ಬರೆಸಿದಂತೆ– ಮಾಡಿದ ನೆರವನ್ನು ಎಷ್ಟು ನೆನೆಸಿಕೊಂಡರೂ ಅಲ್ಪವೇ ಸರಿ.

ಪಂಡಿತರು ಪರಾಮರ್ಶಿಸಿ, ಸಲಹೆ ಸೂಚನೆಗಳನ್ನು ನೀಡಿ ಕೃತಿಯ ಘನತೆಯನ್ನು ಹೆಚ್ಚಿಸಬೇಕಾಗಿ ಕೋರಿಕೆ.

**ಬಲಕುಂದಿ**

**ಹರಿದಾಸರ ಅಡಿದಾಳು**
**ಡಾ.ವ್ಹಿ.ಬಿ. ಕುಲಕರ್ಣಿ ಆರ್.ಎಂ.ಪಿ.**
**ಬಲಕುಂದಿ – 587125**



# ಓದುಗರಿಗೊಂದು ಕೈದೀವಟಿಗೆ

**ಶ್ರೀ ಪ್ರಸನ್ನ ವೆಂಕಟದಾಸರ** ಜೀವಿತ ಕಾಲದಲ್ಲಿ ಕನ್ನಡ ಜನತೆಯ ಸಂಸ್ಕೃತ ಭಾಷೆಯ ವ್ಯಾಮೋಹದ ಪ್ರವಾಹ ಇಳಿದು ಹೋಗಿತ್ತಾದರೂ ಶಿಷ್ಟಸಾಂಪ್ರದಾಯಸ್ಥರು ಮಾತ್ರ ಸಂಸ್ಕೃತ–ದೇವನಾಗರಿ ಲಿಪಿ–ಯನ್ನೇ ಕನ್ನಡ ಭಾಷೆಗೂ ಬಳಸುತ್ತಿದ್ದರು. ರಾಜಕೀಯವಾಗಿಯೂ ಇಡೀ ಭಾರತದಲ್ಲಿ ಪೇಶ್ವೆಯರು ಅತೀವ ಉರ್ಜಿತಾವಸ್ಥೆಯಲ್ಲಿದ್ದು, ಅವರ ತಾಯ್ನುಡಿಯಾದ ಮರಾಠಿ ಭಾಷೆಯ ಲಿಪಿಯಾದರೂ ದೇವನಾಗರಿಯಾದ್ದರಿಂದಲೂ ಕನ್ನಡ ಭಾಷೆಗೆ ದೇವನಾಗರಿ ಲಿಪಿಯನ್ನು ಬಳಸುವದು ಕರ್ನಾಟಕದಲ್ಲಿ ಮೆಚ್ಚುಗೆಯ ಹಾಗೂ ದೊಡ್ಡಸ್ಥಿಕೆಯ ವಿಷಯವಾಗಿತ್ತು.

ದಾಸರ ಈ ಪದ್ಯದ ಪಲ್ಲವಿಯಲ್ಲಿ (೧) **ಪ್ರಭುತ್ವ**–ಸುರದ್ರುಮ, (೨) **ಸಾಮರ್ಥ್ಯ**–ನಾರಸಿಂಹ (೩) **ಯಶಸ್ಸು**–ಮುರ–ಹರ– (೪) **ಸ್ವರೂಪ ಸೌಂದರ್ಯ**–ವಾರಿಜಾಕ್ಷ (೫) **ಜ್ಞಾನ**–ಶ್ರುತಿ ವಿನುತ (೬) **ವಿಜ್ಞಾನ**–ಮುಕುಂದ (ಮುಕ್ತಿದಾಯಕ; ಈ ಆರು ಗುಣಗಳಿಂದ ಅತ್ಯಧಿಕವಾಗಿಯೂ ಶಾಶ್ವತವಾಗಿಯೂ ಉಳ್ಳವನಾಗಿ–**ಭಗ**–ಎನಿಸಿ; ಈ ಆರೂ ಗುಣಗಳಿಂದ ಸುಖಸಾರ ಗ್ರಹಿಕೆ ಸರ್ವೇಶನಾಗಿರುವಂಥ ಶ್ರೀರಮಾವಲ್ಲಭನೆಂದು ಹಾಡಿ ಪದ್ಯಾರಂಭದಲ್ಲಿ ಜಗನ್ಮಾತಾ–ಪಿತೃಗಳಾದ ಶ್ರೀಲಕ್ಷ್ಮೀನಾರಾಯಣರನ್ನು ಸ್ತುತಿಸಿದ್ದಾರೆ.

ನುಡಿ ೧ ಹಾಗೂ ೨ರಲ್ಲಿ ಭಗವಂತನ ಗುಣಗಾನ ಮಾಡಿದ್ದಾರೆ. ನುಡಿ ೩ ರಲ್ಲಿ ರಾಮಾವತಾರವನ್ನೂ ೪ ಮತ್ತು ೫ರಲ್ಲಿ ಕೃಷ್ಣಾವತಾರವನ್ನು ಸ್ತುತಿಸಿದ್ದಾರೆ. ನುಡಿ ೬ ರಿಂದ ೧೩ ಈ ನುಡಿಗಳಲ್ಲಿ ಶ್ರೀಹರಿಯ ಲೀಲಾಯುಕ್ತ ಕ್ರಿಯಾವಿಶೇಷಗಳ ಗುಣವರ್ಣನೆ ಮಾಡಿರುವರು.

ಸಂಸ್ಕೃತ ಭಾಷೆಯಲ್ಲಿ, ಸ್ವರಗಳು–ಅಕಾರ೨; ಇ–ಕಾರ೨; ಉ–ಕಾರ೨; ಎ–ಕಾರ೨; ಹೀಗೆ ಒಟ್ಟು ಹತ್ತು ಸ್ವರಗಳು, ಮತ್ತು ಅಂ–ಅನುಸ್ವಾರ೧; ಅಃ–ವಿಸರ್ಗ೧, ಹೀಗೆ ಒಟ್ಟಿಗೆ ಹನ್ನೆರಡು, ಒಂದೊಂದು ವ್ಯಂಜನಕ್ಕೆ ಕೂಡಿಕೊಂಡು ಒಂದು ಬಳ್ಳಿಗೆ ಹನ್ನೆರಡು ಅಕ್ಷರಗಳಾಗುವವು. ಇವುಗಳಲ್ಲಿ ಋ, ೠ ಹಾಗೂ ಲುಲೂ ಗಳು ಸೇರಿರುವುದಿಲ್ಲ; ಇವುಗಳ ಬಳಕೆ ಆಗಾಗಲೇ ಶಿಥಿಲವಾಗಿತ್ತು.

ವರ್ಗೀಯ ವ್ಯಂಜನಗಳು – ಪ್ರತಿ ವರ್ಗಕ್ಕೆ ೫ ರಂತೆ ೫ ವರ್ಗಗಳ ವ್ಯಂಜನಗಳು – ೨೫ ಹಾಗೂ ಅವರ್ಗೀಯ ವ್ಯಂಜನ–ಗಳಾದ ಯ,ರ,ಲ,ವ,ಶ,ಷ,ಸ,ಹ,ಳ ಹಾಗೂ ಕ್ಷ ಈ ದ್ವಿತ್ವಾಕ್ಷರ ಕೂಡಿ ಒಟ್ಟಿಗೆ ೩೫ ಅಕ್ಷರಗಳಾಗುವವು. ಈ ಮೂವತ್ತೈದು ಅಕ್ಷರಗಳಲ್ಲಿ ಙ, ಞ ಹಾಗೂ ಣ ಕಾರಗಳು ಬಂದಿರುವದಿಲ್ಲ; ಹಾಗೂ ಟ,ಠ,ಗಳಿಗೆ ಒಂದೇ ನುಡಿ ಮತ್ತು ಡ,ಢ,ಗಳಿಗೆ ಒಂದೇ ನುಡಿ ಬಳಸಿದ್ದರಿಂದ ಒಟ್ಟಿಗೆ ೩೦ ನುಡಿಗಳು, ಹಾಗೂ ಸ್ವರಗಳಿಗೊಂದು ನುಡಿ ಮತ್ತು ವರ್ಗೀಯ ಹಾಗೂ ಅವರ್ಗೀಯ ವ್ಯಂಜನಗಳ ಬಗ್ಗೆ ಎರಡು ನುಡಿಗಳು ಹೀಗೆ ಒಟ್ಟಿಗೆ ೩೩ ನುಡಿಗಳಲ್ಲಿ ಸಂಪೂರ್ಣ ಕನ್ನಡದ ಬಳ್ಳಿಯಲ್ಲಿಯೇ ಶ್ರೀಹರಿಯ

ನಾಮೋಚ್ಚಾರಣೆಯಾಗುವಂತೆ ಈ ಪದ್ಯದಲ್ಲಿ ಹೆಣೆದಿದ್ದಾರೆ. ಅಪರೂಪಕ್ಕಾಗಿ ಅಲ್ಲೊಂದು ಇಲ್ಲೊಂದು ಬಳ್ಳಿಯಲ್ಲಿಯ ಒಂದೆರಡು ಅಕ್ಷರಗಳು ಉಳಿದಿವೆ. ಇದನ್ನು ವೈಯ್ಯಾಕರಣಿಗಳು ಎತ್ತಿ ತೋರಿಸಿ ಹೊಗಳಿದರೆ, ವೇದಾಂತಿಗಳು ಬೇರೆ ರೀತಿಯಾಗಿ–ಕೆಳಗಿನಂತೆ–ಕಂಡುಕೊಂಡು ನಲಿ–ದಾಡಿರುವರು.

**"ಓಂ"** ಕಾರವು ಎಂಟು ಅಕ್ಷರಗಳಿಂದ ಕೂಡಿದೆ. ಅವು ಕ್ರಮವಾಗಿ (೧) ಅಕಾರ (೨) ಉಕಾರ (೩) ಮಕಾರ (೪) ನಾದ (೫) ಬಿಂದು (೬) ಘೋಷ (೭)ಶಾಂತ (೮) ಅತಿಶಾಂತಗಳೆಂದು ಹೇಳಲಾಗುತ್ತದೆ. ಈ ಅಕ್ಷರಗಳಿಂದ ಪ್ರತಿಪಾದ್ಯ ಭಗವದ್ರೂಪಗಳು–ವಿಶ್ವ, ತೈಜಸ, ಪ್ರಾಜ್ಞ, ತುರಿಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ–ವೆಂಬವುಗಳಾಗಿವೆ. ಈ ಎಂಟು ಭಗವದ್ರೂಪಗಳಿಂದ ಐವತ್ತು ರೂಪಗಳು ಅಭಿವ್ಯಕ್ತವಾದವು. ಇವುಗಳನ್ನು ಅ–ಕಾರಾದಿ ಐವತ್ತು ವರ್ಣಗಳು ಪ್ರತಿಪಾದಿಸುತ್ತವೆ. ಇನ್ನು **"ಕ್ಷ"** ಕಾರವು ಶ್ರೀನರಹರಿಯ ರೂಪವನ್ನು ಪ್ರತಿಪಾದಿಸುತ್ತದೆ. ಓಂಕಾರಾತರ್ಗತ. ಅಷ್ಟಾಕ್ಷರಗಳಿಂದ ಅಭಿವ್ಯಕ್ತವಾದ ಅಜಾದಿ ಭಗವದ್ರೂಪಗಳನ್ನು ಮುಂದಿನ ಪುಟದಲ್ಲಿ ವಿಷದಪಡಿಸಿದೆ.

ಹೀಗೆ ಪ್ರಣವದ ಎಂಟು ಅಕ್ಷರಗಳಿಂದ ಅರ್ಥವನ್ನು **"ಓಂ ನಮೋ ನಾರಾಯಣಾಯ"** ಎಂಬ ನಾರಾಯಣಾಷ್ಟಾಕ್ಷರ ಮಂತ್ರದ ವರ್ಣಗಳನ್ನು ಹೇಳುತ್ತದೆ. ಹೀಗೆ, **"ಓಂ"** ಕಾರವು ಸರ್ವವಾಗಾತ್ಮಕ; ಸರ್ವಶಬ್ದಾರ್ಥಗಳನ್ನೊಳಗೊಂಡಿದೆ. **ಭೂಃ, ಭುವಃ, ಸ್ವಃ**– ಎಂಬ ವ್ಯಾಹೃತಿಗಳು ಓಂಕಾರದ ವ್ಯಾಖ್ಯಾನವನ್ನು ಮಾಡುತ್ತವೆ. ಈ ವ್ಯಾಹೃತಿಗಳ ವ್ಯಾಖ್ಯಾನವನ್ನು ಮೂರು ಪಾದಗಳಿಂದಲೂ ೨೪ ಅಕ್ಷರಗಳಿಂದಲೂ ಕೂಡಿದ ಗಾಯಿತ್ರಿ ಮಂತ್ರವು ಮಾಡುತ್ತದೆ. ಗಾಯತ್ರ್ಯರ್ಥದ ವ್ಯಾಖ್ಯಾನವನ್ನು ಮೂರು ವರ್ಗಗಳಿಂದ ಕೂಡಿದ ಪುರುಷ ಸೂಕ್ತವು ಮಾಡುತ್ತದೆ. ಪುರುಷ ಸೂಕ್ತದ ವ್ಯಾಖ್ಯಾನವೇ ಸಕಲ ವೇದಗಳು. ಈ ರೀತಿ ಪುರುಷಸೂಕ್ತವು ಸಕಲವೇದ ರಾಶಿಯ ಸಂಗ್ರಹವಾಗಿರುವದರಿಂದ ಎಲ್ಲಕ್ಕಿಂತಲೂ ಹೆಚ್ಚಾಗಿ ಶ್ರೀಹರಿಯ ಗುಣಗಳನ್ನು ಪ್ರತಿಪಾದನೆ ಮಾಡುತ್ತದೆ. ಪುರುಷ ಸೂಕ್ತಕ್ಕೆ ಮುಖ್ಯಾಧಿಕಾರಿಗಳು ಬ್ರಹ್ಮವಾಯುಗಳು, ಇತರರು ತಾರತಮ್ಯಾನುಸಾರ ಪುರುಷ ಸೂಕ್ತದ ಅರ್ಥವನ್ನು ತಿಳಿಯುತ್ತಾರೆ.

ವೇದಾದಿ ಅಧ್ಯಯನಕ್ಕೆ ಅನರ್ಹರಾದ ಸ್ತ್ರೀ–ಬಾಲರೂ ಉಚ್ಚ ವರ್ಣದವರಲ್ಲದವರೂ, ಅಜ್ಞಾನ–ಅವಿದ್ಯೆ ಹಾಗೂ ಪೂರ್ವ ಕರ್ಮಫಲವಾಗಿ–ಅರ್ಹರಿದ್ದೂ ಅಧ್ಯಯನ ಮಾಡದೆ ಇರುವವರನ್ನೂ ಪರ್ಯಾಯ ನಾಮೋಚ್ಚಾರಣೆ ಮಾಡಿಸಿ, ಬೆಂಕಿಯು ತಿಳಿದೂ–ತಿಳಿಯದೆಯೂ ಮುಟ್ಟಿದರೆ ಸುಡುವಂತೆ–ತಮ್ಮ ಜೀವಿತದ ಪೂರ್ವ ಭಾಗ ನೆನೆದುಕೊಂಡು–ಅಂಥವರ ಪಾಪರಾಶಿಗೆನೇ ಕಿಚ್ಚುಕೊಟ್ಟು ಶ್ರೀಹರಿಯ ಕರುಣೆಗೆ ಪಾತ್ರಗೊಳಿಸುವಂಥ ತಮ್ಮ ಕೀರ್ತನೆಯ ೧೪, ೧೫ ಹಾಗೂ ೧೬ ಈ ಷಟ್ಪದಿಗಳಲ್ಲಿ ಅಜ–ಆನಂದಾದಿ ೫೧ ನಾಮಗಳನ್ನು ಪರ್ಯಾಯವಾಗಿ ಹಾಡಿ ಹಾಡಿಸಿ ಪತಿತರನ್ನು ಪಾವನಗೊಳಿಸುವಂತಹ ಮಹದುಪಕಾರ ಮಾಡಿದ್ದಾರೆ.

ದೇವರನಾಮ ಹೆಣಿಕೆಯಲ್ಲಿ, ಕನ್ನಡ–ಸಂಸ್ಕೃತ ಪದಗಳ ಎರಕೆ ಹೊಯ್ದಿದ್ದಾರೆ. ಉದಾಹರಣೆಗಾಗಿ – (೧) ಮೂಗ – (ಕನ್ನಡಶಬ್ದ)+ಸಂಭವ – (ಸಂಸ್ಕೃತ ಶಬ್ದ) =



**<u>ಮೂಗಸಂಭವ.</u>** ನಾಮ ಸಂಖ್ಯಾ – (೨) ದೋಹನ_(ಸಂಸ್ಕೃತ ಶಬ್ದ)+ಕಾರ್ಯಗ (ಕನ್ನಡ ಶಬ್ದ) = ದೋಹನ ಕಾರ್ಯಗ. ನಾಮಸಂಖ್ಯಾ – ಹಾಗೆಯೇ ದ್ವಿತ್ವಾಕ್ಷರಗಳ ಬಳಕೆಯಲ್ಲಿ ಮೂಲಾಕ್ಷರ ಹಾಗೂ ಅದಕ್ಕೆ ಒತ್ತುಕೊಟ್ಟ ಅಕ್ಷರ ಇವುಗಳ ಬಳಕೆ ಕನ್ನಡದ ವಿರುದ್ಧ ದೇವನಾಗರಿ ಲಿಪಿಯಲ್ಲಿ ಉಂಟು. ಉದಾಹರಣೆಗಾಗಿ–ಸ್ಥೂಲಕೃತ್ಯ–ಇಲ್ಲಿ ಕನ್ನಡದಲ್ಲಿ– **"ಸ"**– ಕಾರವೂ ಪೂರ್ಣವಿದ್ದು, **"ಥ"** – ಕಾರವು ಅರಕ್ಷರವಿದ್ದರೆ, ದೇವನಾಗರಿ ಲಿಪಿಯಲ್ಲಿ – **"ಸ"** ಕಾರವು ಅರಕ್ಷರವಿದ್ದು, **"ಥ"** – ಕಾರವು ಪೂರ್ಣವಿರುತ್ತದೆ. ಇದು ಭಾಷಾಭೇದ, ಹಾಗೂ ಲಿಪೀ ಭೇದ.

ಕನ್ನಡ ಸ್ವರಗಳಲ್ಲಿ, ಎಏಐ ಹಾಗೂ ಒ,ಓ,ಔ, ಹೀಗೆ ಎ,ಏ, ಹಾಗೂ ಒ,ಓಗಳಲ್ಲಿಯ ಹ್ರಸ್ವ–ದೀರ್ಘಗಳು ಸಂಸ್ಕೃತ ಹಾಗೂ ದೇವನಾಗರಿ ಲಿಪಿಯುಳ್ಳ ಮರಾಠಿಯಲ್ಲಿ ಇರದ ಪ್ರಯುಕ್ತ ಅವು ಪ್ರತಿ ಬಳ್ಳಿಯಲ್ಲಿ ಹ್ರಸ್ವ–ದೀರ್ಘಗಳಾಗಿ ಎರಡಾವರ್ತಿ ಸೇರಿಕೊಂಡಿರುವುದಿಲ್ಲ. ಕನ್ನಡದಲ್ಲಿ ಅವುಗಳು ಸ್ವತಂತ್ರವಾಗಿ ಗುರುತಿಸಲ್ಪಡುವದಿಲ್ಲ. ಓದುಗರೇ ತಮ್ಮ ಜ್ಞಾನಬಲ ಹಾಗೂ ಗುರುಗಳ ಸಹಾಯ ಬಲಗಳ ಮೇರೆಗೆ ಉಚ್ಚಾರಗಳಿಂದ ಅವುಗಳನ್ನು ಪ್ರತ್ಯೇಕಿಸಲ್ಪಡಬೇಕಾಗುವದು. ಅದರಿಂದ ಪ್ರತಿಬಳ್ಳಿಯಲ್ಲಿ – ಕನ್ನಡದಲ್ಲಿ ಇದ್ದಂತೆ ಹದಿನಾಲ್ಕು ಅಕ್ಷರಗಳನ್ನು ಉಪಯೋಗಿಸದೆ, ಹನ್ನೆರಡನ್ನೇ ಬಳಸಿದ್ದು ಕಂಡು ಬರುತ್ತದೆ. ಈ ವಿಷಯಕ್ಕೆ ನುಡಿ ೧೪ರಿಂದ ೪೬ರವರೆಗೆ (ಎರಡನ್ನೂ ಸೇರಿ) ಒಟ್ಟಿಗೆ ೩೩ ನುಡಿಗಳಲ್ಲಿ ಶ್ರೀಹರಿಯನ್ನು ಕೊಂಡಾಡಿದ್ದಾರೆ.

ಅಂಕಿಗಳು ೧ರಿಂದ ೧೦ರವರೆಗೆ ಹತ್ತು ನುಡಿಗಳು, ಶತಕ್ಕೆ ಒಂದು ನುಡಿ, ಹೀಗೆ ೪೭ರಿಂದ ೫೭ರವರೆಗೆ (ಎರಡನ್ನು ಒಳಗೊಂಡು) ಒಟ್ಟು ಹನ್ನೊಂದು ನುಡಿಗಳಲ್ಲಿ ಅಂಕಿಗಳಲ್ಲಿಯೇ ಶ್ರೀ ಹರಿಯಸ್ತವನ ಮಾಡಿದ್ದಾರೆ.

ನುಡಿ ೫೮ರಿಂದ ೬೨ರವರೆಗೆ ಐದು ನುಡಿಗಳಲ್ಲಿ ಪೃಥ್ವಿ, ಜಲ, ಅಗ್ನಿ, ವಾಯು ಹಾಗೂ ಆಕಾಶ ಈ ಪಂಚಮಹಾಭೂತಗಳಿಂದಲೇನೇ ಶ್ರೀಹರಿಯಸ್ತವನ ಮಾಡಿ, ನುಡಿ೪೩ರಲ್ಲಿ **"ಶಬ್ದ"** ವೆಂಬುದೊಂದನ್ನೇ ಉಪಯೋಗಿಸಿ ದೇವರನಾಮ ಹೆಣೆದಿದ್ದಾರೆ.

ನುಡಿ ೬೪ ರಲ್ಲಿ ದ್ವಾದಶರಾಶಿ ನಾಮಗಳಲ್ಲಿಯೂ, ನುಡಿ ೬೫ ಇವುಗಳಲ್ಲಿ ಇಪ್ಪತ್ತೇಳು ನಕ್ಷತ್ರಗಳಲ್ಲಿಯೂ ಶ್ರೀಹರಿಯ ವಿಶ್ವವಿಭೂತಿಯನ್ನೇ ಎತ್ತಿತೋರಿದ್ದಾರೆ.

ನುಡಿ ೬೭, ೬೮ ಹಾಗೂ ೬೯ರಲ್ಲಿ ಶ್ರೀಹರಿಯ ಅವತಾರಗಳಸ್ತುತಿ, ಹಾಗೂ ನುಡಿ ೭೦ರಲ್ಲಿ ಗುರುಸ್ತವನ ಮಾಡಿದ್ದಾರೆ. ನುಡಿ ೭೧ರಲ್ಲಿ ತಮ್ಮ ಆರಾಧ್ಯ ದೇವತೆಯಾದ **<u>ಶ್ರೀಪ್ರಸನ್ನ ವೆಂಕಟೇಶ ದೇವರ</u>** ಪ್ರಸನ್ನತೆಯನ್ನು ಕೊಂಡಾಡಿ ಕೊನೆಗೆ **ಕೃಷ್ಣಾರ್ಪಣ**–ವೆಂದಿದ್ದಾರೆ.

ಆದರೆ ನಮ್ಮ ದುರ್ದೈವದಿಂದ ೫೨ನೇ ನುಡಿಯ ಕೊನೆಯ ಪಾದ ಶಿಥಿಲವಾಗಿದೆ. ಹಾಗೂ ೫೩ನೇ ನುಡಿ ಸಂಪೂರ್ಣವಾಗಿ ದೊರೆತೇ ಇಲ್ಲ. ಕೇವಲ ನ್ಯೂನತೆಯನ್ನು ತುಂಬುವ ಉದ್ದೇಶದಿಂದ ವೇದಮೂರ್ತಿ ಶ್ರೀವಮಾನ್ ದಾಮೋದರಾಚಾರ್ಯ ಉಮರ್ಜಿಯವರು ತಮ್ಮ ಸ್ವಂತ ಕಲ್ಪನೆಯಿಂದ ಈ ನುಡಿಯನ್ನು ಬರೆದುಕೊಟ್ಟಿದ್ದಾರೆ. ಏನೇ ಆದರೂ ದಾಸರ ನುಡಿಯ ಬಗ್ಗೆ ಶೋಧ ಆಗಬೇಕಿದೆ.

**– ಡಾ॥ ವ್ಹಿ.ಬಿ. ಕುಲಕರ್ಣಿ**

# ಮುನ್ನುಡಿಯೆಂಬ ಹೊನ್ನುಡಿ

ದಾಸಚತುಷ್ಟಯದ ನಂತರ ಹರಿದಾಸ ಸಾಹಿತ್ಯದ ಬಾನಿನಲ್ಲಿ ಕಾಮನಬಿಲ್ಲಿನಂತೆ ಕಂಗೊಳಿಸಿದವರು, ಅತ್ಯಂತ ಸತ್ವಪೂರ್ಣವಾದ ಮಹತ್ವದ ಸಾಹಿತ್ಯವನ್ನು ಕೊಟ್ಟವರು ಪ್ರಸನ್ನವೆಂಟಕದಾಸರು. ವಿಜಯದಾಸರಂತಹ ಅಪರೋಕ್ಷಜ್ಞಾನಿಗಳೇ ಕಾಕಂಬಿ ಸಾಹಿತ್ಯವೆಂದು ಪ್ರಸನ್ನವೆಂಕಟ ಸಾಹಿತ್ಯವನ್ನು ಗೌರವಿಸುತ್ತಿದ್ದರು ಎಂಬ ಮಾತೂ ಇದೆ. ಅವರ ಬಿಡೆನೋ 'ನಿನ್ನಂಘ್ರಿ ಶ್ರೀನಿವಾಸ' ಹಾಡನ್ನು ಹೇಳದಿರುವ ಭಜನಾ ಮಂಡಳಿಯಿಲ್ಲ, ಸವಿದಿರುವ ಹರಿದಾಸ ಸಾಹಿತ್ಯಾಸಕ್ತರಿಲ್ಲ. ಅವರ ಒಂದೊಂದು ಹಾಡುಗಳೂ, ಹಾಡುಹಕ್ಕಿಯ ಹೆಗಲೇರಿ ಬಂದ ಪವಿತ್ರ ಸಾಹಿತ್ಯಕೃತಿಗಳು.

ವಿಷ್ಣುಸಹಸ್ರನಾಮದಂತೆಯೇ ಪರಮಾತ್ಮನ ನಾಮಮಹಿಮೆಯ ಕನ್ನಡ ಪದ್ಯಮಾಲೆಯಾಗಿ ಪ್ರಸನ್ನವೆಂಕಟದಾಸರು 'ಸಮಸ್ತ ನಾಮ ಮಣಿಗಣ ಷಟ್ ಚರಣ ಪದ್ಯಮಾಲಾ' ರಚಿಸಿದ್ದಾರೆ. ಮೊದಲಿಂದ ಕಡೆಯವರೆಗೆ ವಿಷ್ಣು ನಾಮದ ಮೆರವಣಿಗೆಯನ್ನು ಕನ್ನಡದ ವರ್ಣರಂಜಿತ ವೇಷಭೂಷಣಗಳ ಮೂಲಕ ದಾಸರು ಇಲ್ಲಿ ಮೂಡಿಸಿದ್ದಾರೆ. ಕನ್ನಡದಲ್ಲಿ ದಾಸರಿಗಿದ್ದ ಪ್ರಭುತ್ವ ಹಾಗೂ ಸಂಸ್ಕೃತದಲ್ಲಿ ಅವರಿಗಿದ್ದ ಪಾಂಡಿತ್ಯಗಳ ಅತ್ಯದ್ಭುತ ಸಹಸ್ಪಂದನವಾಗಿ ಈ ಕೃತಿ ಮೂಡಿ ಬಂದಿದೆ. ಪ್ರಸನ್ನತೆ, ಹಾಗೂ ದಿವ್ಯತೇಜಸ್ಸು ಈ ಗ್ರಂಥದ ವೈಶಿಷ್ಟ್ಯ. ಭಾಷಾ ಸೊಬಗು ಇದರ ತೋರಣವಾದರೆ ನಾಮ ಸಂಪದ ಇದರ ಹೂರಣ, ಪರಮಾತ್ಮನ ನಾಮ, ರೂಪ, ಗುಣ, ಕ್ರಿಯೆಗಳು ಬೇರೆಯಲ್ಲ, ಅವು ಸಾಕ್ಷಾತ್ ಪರಮಾತ್ಮನೇ ಎಂದ ಮಧ್ವಾಚಾರ್ಯರ ಮಾತಿನಿಂದಾಗಿ ಈ ಕೃತಿ ಮತ್ತಷ್ಟು ವಿಶಿಷ್ಟವಾಗುತ್ತದೆ.

ಪ್ರಸನ್ನವೆಂಕಟದಾಸರಂತಹ ಶ್ರೇಷ್ಠಹರಿದಾಸರ ಎಲ್ಲ ಕೃತಿಗಳನ್ನು ಕುರಿತು ಸಮಗ್ರ ವಿಶ್ಲೇಷಣೆ ಶತಮಾನಗಳೇ ಉರುಳಿದರೂ ಇನ್ನು ನಡೆದಿಲ್ಲವೆಂಬುದು ಬೇಸರದ ಸಂಗತಿ.  ಆದರೂ ಶ್ರೀ ಪ್ರಸನ್ನವೆಂಕಟ ಪ್ರಕಾಶನ ವತಿಯಿಂದ ಪ್ರಸಿದ್ಧ ಸಾಹಿತಿಗಳಾದ ಶ್ರೀಮತಿ ರೇಖಾ ಕಾಖಂಡಕಿ ಹಾಗೂ ಪ್ರಸನ್ನವೆಂಕಟ ಕಲ್ಚರಲ್ ಮತ್ತು ಚೆರಿಟೇಬಲ್ ಟ್ರಸ್ಟ (ರಿ.)ನ ಡಾ॥ ಸುಭಾಷ್ ಕಾಖಂಡಕಿಯುವರ ಹೃತ್ಪೂರ್ವಕ ಪ್ರಯತ್ನದಿಂದಾಗಿ ಈ ಕೆಲಸ ಗುಣಾತ್ಮಕವಾಗಿ ಪ್ರಾರಂಭವಾಗಿದೆಯೆಂಬುದು ಸಂತೋಷದ ಸಂಗತಿ. ಪ್ರಸನ್ನವೆಂಟಕದಾಸರ ಸಮಗ್ರ ಕೃತಿಗಳ ಆಧ್ಯಾತ್ಮಿಕ ಒಳನೋಟವನ್ನು ಅರ್ಥೈಸಿ, ಜನಮನದೆದುರು ತೆರೆದಿಡುವ ಅವರ ಬೃಹತ್ ಯೋಜನೆಯ ಪ್ರಥಮ ಸಂಪುಟವಾಗಿ ಈ ಕೃತಿ ಹೊರಬರುತ್ತಿದೆ. ಅದಕ್ಕಾಗಿ ಕಾಖಂಡಕಿ ದಂಪತಿಗಳಿಗೆ ಹೃದಯ ತುಂಬಿದ ಅಭಿನಂದನೆಗಳು.

ಭೀಷ್ಮಾಚಾರ್ಯರು ಕೃಷ್ಣನನ್ನು ಎದುರಿಗೆ ಕೂಡಿಸಿಕೊಂಡು ಅವನ ಒಂದೊಂದೇ ಗುಣಗಳನ್ನು ಸಾವಿರ ನಾಮದ ಮೂಲಕ ಮಾಡಿದ ಬಣ್ಣನೆ ಯುಗಯುಗಗಳಲ್ಲಿ ಸಿದ್ಧಪ್ರಸಿದ್ಧವಾಯಿತು. ಅದು ಪಾವನಕ್ಕೆ ಪಾವನ. ಮಂಗಳಕ್ಕೆ ಮಂಗಳ, ಪವಿತ್ರಕ್ಕೆ ಪವಿತ್ರವಾಗಿ, ಲಕ್ಷ ಲಕ್ಷ ಪವಿತ್ರಾತ್ಮರ ದಾರಿದೀವಿಗೆಯಾಯಿತು. ಅಂಥದೇ ಸಾಧ್ಯತೆಯಿರುವ ಇನ್ನೊಂದು ದಿಕ್ಸೂಚಿಯೆಂದರೆ ಪ್ರಸನ್ನವೆಂಕಟದಾಸರ ಈ ಕೃತಿ. ಇಲ್ಲಿ ದಾಸರು ಪರಮಾತ್ಮನ ನಾಮಗಳನ್ನು ಕ್ರಿಯಾವಾಚಕವಾಗಿ ಅರಳಿಸಿದ್ದಾರೆ. ಉದಾಹರಣೆಗೆ ದೂಷಣಾಂತಕ ಎಂದಿರುವ ದಾಸರು ಖರದೂಷಣರನ್ನು ಸಂಹಾರಮಾಡಿದ ವಿಕ್ರಮಿ ಆ ಪರಮಾತ್ಮ ಎನ್ನುತ್ತಾರೆ. ಬಲಾನುಜಭರಿತ



ಎಂದಿದ್ದಾರೆ. ಬಲರಾಮನು ಪ್ರಲಂಬಾಸುರನನ್ನು ಕೊಂದ ಪ್ರಸಂಗ ಭಾವಿಸಿ, ಇಂತಹ ಬಲಿಷ್ಠಸೋದರನಾದ ಬಲರಾಮನಿಂದ ಪ್ರೇಮಭರಿತನಾದಂತಹ ಶ್ರೀಕೃಷ್ಣ ಎನ್ನುತ್ತಾರೆ. ಗಲರವ ಎಂದು ಭಗವಂತನನ್ನು ಕರೆಯುವ ದಾಸರು ಕಂಠದಲ್ಲಿ ರವ ಎಂದರೆ ವೇದಗಳನ್ನೇ ಉಸಿರಾಡುತ್ತಿರುವ ಹಯಗ್ರೀವಾವತಾರದ ನಮನ ಮಾಡಿದ್ದಾರೆ.

ದಾಸರು ಎಷ್ಟು ಅದ್ಭುತವಾಗಿ ರಚನೆಮಾಡಿದ್ದಾರೋ, ಅಷ್ಟೇ ಅಪೂರ್ವವಾಗಿ ಇದರ ಅರ್ಥವಿಶ್ಲೇಷಣೆ, ಪೌರಾಣಿಕ ಹಿನ್ನೆಲೆ ಹಾಗೂ ನಾಮಗಳ ಧರ್ಮ ಮತ್ತು ಮರ್ಮಗಳನ್ನು ಲೇಖಕರಾದ ಡಾ. ವ್ಹಿ.ಬಿ. ಕುಲಕರ್ಣಿಯವರು ಈ ಕೃತಿಯಲ್ಲಿ ಮೂಡಿಸಿದ್ದಾರೆ. ಪ್ರಸನ್ನವೆಂಕಟದಾಸರ ಬಗ್ಗೆ ಪ್ರೌಢ ಪ್ರಬಂಧಬರೆದು ೧೯೪೯ರಲ್ಲೇ ಪಿ.ಎಚ್.ಡಿ ಪಡೆದ ಡಾ.ಎ.ಟಿ. ಪಾಟೀಲರ ನೇರ ಶಿಷ್ಯರಾದ ಕುಲಕರ್ಣಿಯವರು ಆ ಪರಂಪರೆಯನ್ನು ಸಾರ್ಥಕವಾಗಿ ಮುಂದುವರೆಸಿದ್ದಾರೆ. ಇಂತಹ ಸಮರ್ಥ ಅರ್ಥವಿಶ್ಲೇಷಣೆ ಮಾಡುವುದರ ಮೂಲಕ ಡಾ. ವ್ಹಿ.ಬಿ. ಕುಲಕರ್ಣಿಯವರು ಪ್ರಸನ್ನವೆಂಕಟದಾಸರಿಗೆ ಶತಮಾನ ಸೇವೆ ಸಲ್ಲಿಸಿದ್ದಾರೆ.

ಪ್ರಸನ್ನವೆಂಕಟದಾಸರ ಈ ಕೃತಿಯ ನಾಮಗಳಲ್ಲಿ ಹಾಗೂ ಒಟ್ಟಾರೆ ಅವರ ಹಾಡುಗಳಲ್ಲಿ ತಪಸ್ಸಿದೆ, ದೇವಗಾಂಧಾರದ ಗಂಧವಿದೆ. ಶತಮಾನಗಳ ಋತುಮಾನಗಳ ಜೋಗುಳದ ದೇವಭಾವವಿದೆ. ಛಂದಬಂಧವಿದೆ. ಮಾತು ಭಾವಲಯಗಳ ಲಗ್ನವಿದೆ. ರೂಪವೇ, ನಾಮವಾಗಿ, ಅದೇ ಸಾಕ್ಷಾತ್ಕಾರದ ದಾರಿಯಾಗುವಂತಹ ಉಜ್ವಲಪ್ರಭೆಯಿದೆ. ತತ್ವದ ಬೇರಲ್ಲಿ ಹೊರಟ ಕಾವ್ಯಕಾಂಡದಿಂದ ನಾಮಪುಷ್ಪಗಳನ್ನು ಅರಳಿಸುವ ವ್ಯವಸಾಯವಿದೆ. ದಾಸರ ಸೃಷ್ಟಿಗೆ, ಕುಲಕರ್ಣಿಯವರ ದೃಷ್ಟಿಸೇರಿ  ಪ್ರಸನ್ನವೆಂಕಟಪ್ರಕಾಶನದಿಂದ ಕನ್ನಡ ಸಹೃದಯರಿಗೆ ಈ ಕೃತಿಯ ಮೂಲಕ ಮಧುವೃಷ್ಟಿಯಾಗಿದೆ. ದಾಸರ ಹಾಡುಗಳಲ್ಲಿ ಇರುವ ಪ್ರಸ್ಫುರಕ ದೀಪ್ತಿ ಝಗಮಗಿಸಿ, ಭಾಷೆಯನ್ನು ಭಕ್ತಿ ಕುಂಡದಲ್ಲಿ ಅದ್ದಿ ತೆಗೆದಂತಹ ಬೆಳಕಿನ ಹೊಳೆ, ಜ್ಞಾನದ ಸೆಲೆ, ಭಕ್ತಿಯ ನೆಲೆ, ಹಾಗೂ ಕಾವ್ಯದ ಕಲೆಯಾಗಿ ಹೊಮ್ಮುವ ಪ್ರಸನ್ನವೆಂಕಟಸಾಹಿತ್ಯದ ಪರಿ ಇಡೀ ಕನ್ನಡ ಕಾವ್ಯ ಪ್ರಪಂಚದಲ್ಲೇ ಅನನ್ಯ.

ಪ್ರಸನ್ನವೆಂಕಟದಾಸರ ಎಲ್ಲ ಹಾಡುಗಳನ್ನು ಒಮ್ಮೆ ಓದಿ ನೋಡಿ, ಲಾಸ್ಯ ಗರಿಗೆದರಿ ಅಲ್ಲಿ ನರ್ತಿಸುತ್ತದೆ. ಇಂದ್ರಚಾಪದಿ ಬರೆದ ರಂಗೋಲಿಯಂತೆ ಅದು ಶೋಭಿಸುತ್ತದೆ. ಆ ಪಾದಪಲ್ಲವದಲ್ಲಿ ಜ್ಞಾನ ಸಾಗರದ ಅಲೆ ಲಹರಿಲಹರಿ ಹರಡಿಕೊಳ್ಳುತ್ತದೆ. ತತ್ವ ಮೂಲಬೇರುಗಳ ಗಟ್ಟಿತನ ನೀಡಿ ಆತ್ಮಶಕ್ತಿಯನ್ನು ಅದು ಪ್ರಚೋದಿಸುತ್ತದೆ. ತಾಳಮೇಳಗಳ ನಾದಧ್ವನಿಯಾಗಿ, ಹರಿಯುವ ಈ ಭಕ್ತಿಗಂಗಾ ಅನುಭವ, ಅನುಭಾವ, ಅನುಭೂತಿಗಳ ಎತ್ತರಕ್ಕೆ ಸಾಮಾನ್ಯ ಓದುಗಳನ್ನು ಕರೆದೊಯ್ಯುಬಲ್ಲ ಸಾಮರ್ಥ್ಯ ಹೊಂದಿದೆ. ಅವರ ಹಾಡುಗಳನ್ನು ಓದುತ್ತಾ ಹೋದಂತೆ ಗಂಗಾಸ್ನಾನದ ಅನುಭಾವವನ್ನು ಅವು ನೀಡುತ್ತವೆ. ಅಷ್ಟು ಆಹ್ಲಾದ, ಅಪ್ಯಾಯ, ಶುದ್ಧ, ನಿರ್ಮಲ ಹಾಗೂ ಪವಿತ್ರ ಅವು. ಮೈಮನಸ್ಸು ಪಾಪಗಳನ್ನು ತೊಳೆದು ಬಿಡುತ್ತವೆ.

ಅಂತಹ ಶ್ರೇಷ್ಠ ಉತ್ಕೃಷ್ಟ ಕಾವ್ಯ ಶ್ರೀಮಂತಿಕೆಯ ಹರಿದಾಸ ಧೀಮಂತರಾದ ಪ್ರಸನ್ನವೆಂಕಟದಾಸರಿಗೆ ಕೆಲವೇ ಮಂದಿ ಸೇವೆ ಸಲ್ಲಿಸುತ್ತಿದ್ದಾರೆ. ಭಕ್ತಿಗಾಯನ ರತ್ನರಾದ ಶ್ರೀ ಅನಂತ ಕುಲಕರ್ಣಿ ಹಾಗೂ ಡಾ॥ ಸುಭಾಷ್ ಕಾಖಂಡಕಿ, ರೇಖಾ ಕಾಖಂಡಕಿ ಹಾಗೂ ಜ್ಞಾನವೃದ್ಧರೂ ಆದ ಲೇಖಕ ಡಾ॥ ವ್ಹಿ.ಬಿ. ಕುಲಕರ್ಣಿ ಇವರುಗಳು ಈ ಸೇವಾಸಾಲಿನ ಮುಂಚೂಣಿಯಲ್ಲಿದ್ದಾರೆ. ಇವರೆಲ್ಲರಿಗೂ ನನ್ನ ಅಭಿಮಾನದ ಗೌರವ, ಭಕ್ತಿಪೂರ್ವಕ ಅಭಿನಂದನೆಗಳು.

**ವಿದ್ಯಾವಾಚಸ್ಪತಿ ಡಾ॥ ಅರಳುಮಲ್ಲಿಗೆ ಪಾರ್ಥಸಾರಥಿ**

# ಪ್ರಕಾಶಕರ ಮಾತು

ಶ್ರೀಪ್ರಸನ್ನವೆಂಕಟ ದಾಸರಿಂದ ನಿರಂತರವಾಗಿ ಹರಿದುಬಂದ ಹಲವಾರು ವೈಶಿಷ್ಟ್ಯಪೂರ್ಣ ಕೀರ್ತನೆಗಳಲ್ಲಿ ಶ್ರೇಷ್ಠವಾದ ಕೃತಿ. "ಸಮಗ್ರ ನಾಮ ಷಟ್‌ಚರಣ ಪದ್ಯಮಾಲಾ". ಈಗ ಲಭ್ಯವಾಗಿದ್ದ ಎಲ್ಲ ಕೃತಿಗಳ ಒಳತಿರುಳು. ಅಧ್ಯಾತ್ಮಿಕ ಒಳನೋಟ. ಅರ್ಥಗಳ, ತತ್ವಗಳ ಸಿದ್ಧಾಂತಗಳ ಒಳಗಿನ ಅರ್ಥ ಸೌಂದರ್ಯವನ್ನು ಅರಿತರೇ ಮಾತ್ರ ದಾಸರ ಅಂತರಂಗವನ್ನು ತಲುಪಿದ ಧನ್ಯಭಾವ ನಮ್ಮದಾಗುತ್ತದೆ.

ಈ ನಿಟ್ಟಿನಲ್ಲಿ ಇಂಥ ಕಾರ್ಯಕ್ಕೆ ದಾಸರ ಪ್ರೇರಣೆಯಂತೆ ಈ ಕಾರ್ಯದಲ್ಲಿ ತೊಡಗಿದ್ದು, ನಮ್ಮ – ನಿಮ್ಮೆಲ್ಲರ ಸಂಸ್ಥೆಗಳಾದ ಶ್ರೀಪ್ರಸನ್ನವೆಂಕಟ ಪ್ರಕಾಶನ, ಮತ್ತು ಶ್ರೀಪ್ರಸನ್ನವೆಂಕಟ ಕಲ್ಚರಲ್ ಆಂಡ್ ಚಾರಿಟೇಬಲ್ ಟ್ರಸ್ಟ್ (ರಿ) ಬೆಂಗಳೂರು. ನಮ್ಮ ಯೋಜನೆ ಪ್ರಕಾರ. ಈ ಪ್ರಕಟಣೆಯಲ್ಲಿ ಮೊದಲ ಕುಸುಮವಾಗಿ ಬಂದ **"ಶ್ರೀಪ್ರಸನ್ನ ವೆಂಕಟ ವಿಜಯ"** ಈಗ ಎರಡನೇ ಕುಸುಮವಾಗಿ ಪ್ರಕಟವಾಗಿ ಬಂದ ಅವರ ವಿಶೇಷ ಕೃತಿಯಾದ **"ಸಮಸ್ತ ನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ"**. ಈ ಕೃತಿಯ ಅಂತರಂಗದ ಒಳಅರ್ಥ. ಆಧ್ಯಾತ್ಮದ ತಿರುಳನ್ನು ಬಿಡಿಸಿಟ್ಟವರು ಡಾ॥ ವ್ಹಿ.ಬಿ. ಕುಲಕರ್ಣಿಯವರು. ಇದೊಂದು ವಿಶಿಷ್ಟವಾದ ಕೃತಿ.

ಮುಂದೆಯೂ ದಾಸರ ಎಲ್ಲರ ಕೃತಿಗಳನ್ನು ಇದೇ ರೀತಿಯಾಗಿ ದಾಸರ ಭಕ್ತವೃಂದಕ್ಕೆ, ದಾಸಸಾಹಿತ್ಯ ಅಸಕ್ತರಿಗೆ ತಲುಪಿಸುವ ಉದ್ದೇಶ ನಮ್ಮದು. ಅದಕ್ಕೆ ಎಲ್ಲ ವಿದ್ವಾಂಸರ, ಪಂಡಿತರ ಮತ್ತು ಸಮಸ್ತ ದಾಸರ ಭಕ್ತರ ಸಹಾಯಹಸ್ತ ನಮಗೆ ಬೇಕು.

ಇನ್ನು ಇದನ್ನು ಆಳವಾಗಿ ಅಧ್ಯಯನ ಮಾಡಿ ವಿಶಿಷ್ಟ ರೀತಿಯಿಂದ ನಮ್ಮ ಮುಂದಿಟ್ಟ ಡಾ॥ ವ್ಹಿ.ಬಿ. ಕುಲಕರ್ಣಿಯವರಿಗೆ ಹಾಗೂ ನಮ್ಮ ವಿನಂತಿಯನ್ನು ಮನ್ನಿಸಿ ವಿದ್ವತ್ ಪೂರಕವಾದ ಮುನ್ನುಡಿಯನ್ನು ಬರೆದುಕೊಟ್ಟ ಅಂತರ್ ರಾಷ್ಟ್ರ ಖ್ಯಾತಿಯ ದಾಸಸಾಹಿತ್ಯ ವಿದ್ವಾಂಸರಾದ ವಿದ್ಯಾವಾಚಸ್ಪತಿ ಡಾ॥ ಅರಳುಮಲ್ಲಿಗೆ ಪಾರ್ಥಸಾರಥಿಯವರಿಗೂ ನಮ್ಮ ಅನಂತ ಕೃತಜ್ಞತೆಗಳು. ಈ ಗ್ರಂಥಕ್ಕೆ ಅನುಗ್ರಹ ಸಂದೇಶ ಬರೆದುಕೊಟ್ಟು ಈ ದಾಸರ ಜ್ಞಾನಕಾರ್ಯವು ನಿರಂತರ ನಡೆಯಲು ಆಶೀರ್ವದಿಸಿದ ನಮ್ಮ ನಿಮ್ಮೆಲ್ಲರ ಗುರುಗಳಾದ ಪರಮಪೂಜ್ಯ ಶ್ರೀ ೧೦೮ – ಶ್ರೀ ಸತ್ಯಾತ್ಮ ತೀರ್ಥ ಶ್ರೀಪಾದಂಗಳವರಿಗೆ ನಮ್ಮ ಭಕ್ತಿಪೂರ್ವಕ ಅನಂತ ವಂದನೆಗಳು. ಹಾಗೂ ಈ ಗ್ರಂಥ ಪ್ರಕಟಣೆಗೆ ಧನಸಹಾಯ ಮಾಡಿದ ಬಾಗಲಕೋಟೆ ಅವರೇ ಆದ ದಿ॥ ಶ್ರೀರಾಮಾಚಾರ್ಯ ತಾಳಿಕೋಟೆ ಅವರ ಮಗ ಶ್ರೀ ಅನಿಲ ತಾಳಿಕೋಟಿ ಅವರಿಗೂ ಹಾಗೂ ದಿ॥ ಶ್ರೀ ಮಧ್ವರಾವ ಕುಲಕರ್ಣಿ (ಬೊಮ್ಮಣಗಿ) ಅವರ ಮಗ ಶ್ರೀವಸಂತ ಕುಲಕರ್ಣಿ ಕೊಲ್ಲಾಪುರ ಅವರಿಗೂ ಅನಂತ ಕೃತಜ್ಞತೆಗಳು.ಈ ಕೃತಿಯ ಹಸ್ತಪ್ರತಿಯನ್ನು ನಮ್ಮ ಸಂಸ್ಥೆಗೆ ಒದಗಿಸಲು ಕಾರಣರಾದ ಶ್ರೀ ಧ್ರುವಾಚಾರ್ಯ ಕಾಖಂಡಕಿ ಹಾಗೂ ಶ್ರೀಪ್ರಲ್ಹಾದ ಜೆ. ಕಾಖಂಡಕಿ ಅವರಿಗೂ ಮತ್ತು ಅಲ್ಪಸಮಯದಲ್ಲೇ ಡಿ.ಟಿ.ಪಿ ಕರಡು ತಿದ್ದುಪಡಿ ಮಾಡಿಕೊಟ್ಟ ಡಾ॥ ವ್ಹಿ.ಬಿ.ಕುಲಕರ್ಣಿ ಅವರ ಪುತ್ರಿ ಶ್ರೀಮತಿ ಮಾಧುರಿ ಕುಲಕರ್ಣಿ ಅವರಿಗೂ ಕೃತಜ್ಞತೆಗಳು. ಸುಂದರವಾಗಿ ಮುದ್ರಿಸಿದ ವಿಶ್ವಾಸ್ ಪ್ರಿಂಟ್ಸ್ ಹಾಗೂ ಮುಖಪುಟ ವಿನ್ಯಾಸಿಗೊಳಿಸಿದ ವಿ.ರಾಜ್ ಅವರಿಗೂ ನಮ್ಮ ಕೃತಜ್ಞತೆಗಳು.

**ಶ್ರೀಪ್ರಸನ್ನವೆಂಕಟ ಪ್ರಕಾಶನ ಮತ್ತು ಶ್ರೀಪ್ರಸನ್ನವೆಂಕಟ ಕಲ್ಚರಲ್**
**ಆಂಡ್ ಚೇರಿಟೇಬಲ್ ಟ್ರಸ್ಟ್ (ರಿ) ಪರವಾಗಿ**
**ಶ್ರೀಮತಿ ರೇಖಾ ಕಾಖಂಡಕಿ, ಡಾ॥ ಸುಭಾಸ ಕಾಖಂಡಕಿ**



**– ಶ್ರೀ –**

# ಶ್ರೀ ಪ್ರಸನ್ನ ವೆಂಕಟದಾಸರ
# "ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲಾ"

**ರಾಗ : ನಾಟಿ ಭಾಮಿನಿ ಷಟ್ಪದಿ ತಾಳ : ತ್ರಿಪುಟ**

ಶ್ರೀರಮಾವರ ಶ್ರುತಿವಿನುತ ಸುಖ ।
ಸಾರಗ್ರಹಕೆ ಸರ್ವೇಶ ಸುರದ್ರುಮ ।
ವಾರಿಜಾಕ್ಷ ಮುಕುಂದ ಮುರಹರ ನಾರಸಿಂಹ ನಮೋ ॥ ಪಲ್ಲ ॥

ಗರುಡಗಮನ ಗುಡಾಳಕಾಖಿಳ – ।
ಶರಣಜನ ಸುರಧೇನು ಸುರಮಣಿ ।
ಕರುಣಸಾಗರ ಕಾಮಿತಾರ್ಥದ ದುರಿತಾಗಜಸಿಂಹ ॥
ಸರಸಿಜಾಸನ ಸೇವ್ಯ ಮುಕ್ತಾ – ।

ಭರಣನಮಿತ ಸುರೇಶ ನಿಶಾಚರ – ।
ಹರಣಶೀಲ ಸದಾಗಮಜ್ಞೇಯಾದಿಪುರುಷ ನಮೋ ॥ ೧ ॥

ವಿಶ್ವಗರ್ಭ ವಿಚಿತ್ರ ಚರಿತ್ರ ಶು – ।
ಭಾಶ್ವವದನ ವಿಶಾಲ, ವಿಕ್ರಯ ।
ಶಶ್ವದೇಕ ಸುವ್ಯಾಪ್ತ ಜ್ಞಾನಾನಂದ ಬಲಪೂರ್ಣ ॥
ನಶ್ವರೇಶ್ವರ ಸವಿತರೇಶ್ವರ ।
ಈಶ್ವರೇಶ್ವರ ವೇದಗೋಚರ ।
ಸುಸ್ವಭಾವ, ನವಾಂಬುದಾಂಗ ಕೃಪಾಳು ಕೃಷ್ಣ ನಮೋ ॥ ೨ ॥

ಜನಪ ಮುನಿನುತ ತಾಟಕಾಂತಕ ।
ಜನಕಜಾವರ ಲಕ್ಷ್ಮಣಾಗ್ರಜ ।
ಜನಕವಾಗ್ವರ ಇಂದ್ರಪೂಜಿತ ಸೂರ್ಯಸುತಪಾಲಾ ॥
ದಿನಪ ಕುಲಪತಿ ದೀನವತ್ಸಲ ।
ವನಧಿಬಂಧ, ವಿಹಾರ ದಶಶಿರ – ।
ಹನನ ಕಾರಣ ಭರತಪಾಲಕ ರಾಮರಾಜ ನಮೋ ॥ ೩ ॥

ಪೂತನಾಂತಕ ಶಕಜಮಾರಕ ।
ವಾತಚಕ್ರಾನಿಷ್ಟಹರ ನವ – ।
ನೀತಪ್ರಿಯ ದಧಿಸಾರ ಭೋಜಕ ಗೋಪವಧುಲೋಲ ॥
ಸೀತಕರ ಕುಲತಿಲಕ ಶ್ರುತಿ ವಿ – ।
ಖ್ಯಾತ ಕರಿಚಾಣೂರ, ಬಕಹರ ।
ಮಾತುಳಾಂತಕ ಪಾರ್ಥಸ್ಥಾಪಕ ಕೌರವಾಂತನಮೋ ॥ ೪ ॥

ಚಕ್ರ, ಶಂಖ, ಗದಾಬ್ಜಧರ ತ್ರಿ – ।
ವಿಕ್ರಮಾಚ್ಯುತ ವರಹ ವಾಮನ ।
ನಕ್ರಶಿಕ್ಷಕ ನಾಗರಕ್ಷಕ ನಿತ್ಯತೃಪ್ತ ಹರೇ ॥
ಶಕ್ರ ಗಿರಿಜಾರ್ಚಿತ ಪದಾಬ್ಜ ತ್ರಿ – ।
ವಕ್ರ ವಧು ಸೌಂದರ್ಯದಾಯಕ ।
ಅಕ್ರೂರಾಭಿಷ್ಟದ ವಿದುರಉದ್ಧವ ವರೇಣ್ಯ ನಮೋ ॥ ೫ ॥

ಮಧುಮಥನ ಕೈಟಭವಿದಾರಣ ।
ಕುಧರವರ ಅನಂತವರ್ಣಾ – ।
ಭಿದ ಜನಾರ್ದನ ಸಾಮಗಾಯನವೇದ್ಯ ಅನವೇದ್ಯ ॥
ವಿಧಿ, ನಿಷೇದಾಲಿಪ್ತ ಸತತವಿ – ।
ಬುಧನಿಯಾಮಕ ನಿರ್ಭಯಾತ್ಮ ತ್ರಿ – ।
ವಿಧಜನಾಶ್ರಯ ಕುಶಶಯನ ಸಾರಂಗಪಾಣಿ ನಮೋ ॥ ೬ ॥

ವಾಸುದೇವ ಕುಭಾಷ ವಾಹಕ ।
ವಾಸುವೀಯ ಕಪಿಲ ಋಷಭ ಮಹಿ – ।
ದಾಸ ಯಜ್ಞ ದತ್ತಾತ್ರೇಯ ನಾರಾಯಣ ನಿರಾಮಯ ಭೋ ॥
ಶ್ರೀ ಸನಾತನ ಸಕಲಭುವನನಿ – ।
ವಾಸ ಸಂಕರುಷಣ ಸದಾಸ್ಮಿತ – ।
ಹಾಸ ಸೋಮದಿವಾಕರೇಕ್ಷಣ ಸ್ವಪ್ರಕಾಶ ನಮೋ ॥ ೭ ॥

ಶೇಷಶಯನ ಜಗಚ್ಚರಾಚರ – ।
ಪೋಷಕಾಧಾರಕ ಸ್ವಜನಹೃದ್ – ।
ಭೂಷಣಾಪರಿಚ್ಛಿನ್ನ ಅಪ್ರೇಯಾದಿಶೃತಿವಕ್ತ ॥
ಘೋಷವರ್ಣ ಸಂಪೂರ್ಣವಾಚ್ಯಾ – ।
ಶೇಷ, ದೋಷವಿದೂರ ಖಳಜನ – ।
ಭೀಷಣಾಪ್ರಾಕೃತ ಅನುಪಮ ಪರಮಪುರುಷ ನಮೋ ॥ ೮ ॥



ಇಹದ್ಭಯ, ಕ್ಷಯಕರ ಗುಣತ್ರಯ – ।
ರಹಿತ ವೃದ್ಧಿಹ್ರಾಸವರ್ಜಿತ ।
ವಿಹಗ ವಿಶ್ವ – ತೈಜಸ – ಪ್ರಾಜ್ಞ, ಅವಸ್ಥಾತ್ರಯದಾತಾ ॥
ಅಹಿತನಾಶ ಪರೇಶ ಗಹನಾತ್ – ।
ಗಹನ ಅವ್ಯಯ ಅತಿಶಯಾದ್ಭುತ ।
ಬಹುಳ, ಜೀವಾಂತರೀಯ ಅಂತರ್ಬಹಿಃ ಸ್ವತಂತ್ರ ನಮೋ ॥ ೯ ॥

ಪೂರ್ಣಕಾಮಾಂಬೋಧಿ ಶ್ರೀವಟ – ।
ಪರ್ಣತಲ್ಪ ಪರಾತ್ಪರಾ ಪ್ರತಿ – ।
ವರ್ಣ, ನಿಗಮಾಗಮ ಅತರ್ಕ್ಯಾನಂತ ಸದ್ಗುಣನಿಧೆ ॥
ನಿರ್ಣಯಾತೀತಾನಿರುದ್ಧ ಸು – ।
ಖಾರ್ಣವಾಚ್ಯುತ ಸೌಖ್ಯಾಕರ ನವ – ।
ತೀರ್ಣವಿಗ್ರಹ ಪದ್ಮನಾಭ ಉದಾರಲೀಲ ನಮೋ ॥ ೧೦ ॥

ಮೋಕ್ಷವಲ್ಲಭ ಭವ ಮಲಘ್ನ ಮು – ।
ಮುಕ್ಷುವರದ ಮುನೀಂದ್ರ, ಸುಮನೋ – ।
ಧ್ಯಕ್ಷ ದಾಮೋದರ ದಯಾಪರ ಜಿತದಿತಜ ಸಮರ ॥
ಭಿಕ್ಷುಕಾನ್ವಯಪ್ರಿಯ ಸಮಾಧಿಕಾ – ।
ಪೇಕ್ಷ ಸೃಷ್ಟ್ಯಾದ್ಯಷ್ಟ ಕಾರಣ ।
ದಕ್ಷಾಧ್ವರ ಪರಬ್ರಹ್ಮನಿವಹಾದ್ಭಿನ್ನರೂಪ ನಮೋ ॥ ೧೧ ॥

ಕಂಠಕೌಸ್ತುಭ, ಭೂಷಣಾಂಶಾಽ – ।
ಕುಂಠಿತಾತ್ಮೈಶ್ವರ್ಯ ಅಶುಭವಿ – ।
ಲುಂಠಿಕಾಧೋಕ್ಷಜ ಉಪೇಂದ್ರ ಶ್ರೀ ಶ್ರೀಶ ಅನಿರುದ್ಧ ॥
ಕುಂಠಿತ+ಜನನಮರಣ ಶಿರಿವೈ – ।
ಕುಂಠ ಪದ್ಮಾಮ್ಲಾನ ತುಲಸೀ ।
ಕಂಠ ಮಾಲಾನ್ವಿತಸುಗಂಧ ಜ್ಞಾನಕೋಶ ನಮೋ ॥ ೧೨ ॥

ನಿರ್ಜರೇಷ್ಟದ ನೀತಫಲದ ಕು – ।
ದುರ್ಜನಾರ್ದಕ ದೂಷಣಾಂತಕ ।
ನಿರ್ಜಿತಾಖಿಳ, ಸುಜನಪಾಲಕ ನಿಶಾಚರೌಘ ಹರ ॥
ವರ್ಜಿತಕಲುಷ ನಿತ್ಯವಿಬುಧರ – ।
ಉರ್ಜಿತತರ ಚಾರಿತ್ರ ವಿಮಲಗು – ।
ಣಾರ್ಜಿತೋದಧಿ ಉಪದ್ಧ್ವಜ ವೈರಾಗ್ಯ ಪುರುಷ ನಮೋ ॥ ೧೩ ॥



ಅಪುಶಯನ ಆದ್ಯಪ್ತ ಇಷ್ವಜ –।
ನ ಪರಗತಿಪ್ರದ ಈ ಶವರನುತ ।
ಉಪಮವಿರಹಿತ ಊರ್ಧ್ವಗಪ್ರಿಯ ಋಜುರ್ಭಿನೃಪಧರ ॥
ಉಪತದುಷ್ಕೃತ ಈಖಮೋದಕ ।
ಚಪಲ ಏಕಾನೇಕ ವಿಗ್ರಹ ।
ಸ್ವಪರಐಶ್ವ ಯೋರ್ಜ ಔದಾರ್ಯ ಸಹಸ್ರ ನಮೋ ॥ ೧೪ ॥
(ಈ ನುಡಿಯಲ್ಲಿ – ಅಂ, ಅಃ ಅಕ್ಷರಮಾಲೆಗಳು ಉಳಿದಿವೆ)

ಕರುಣನಿಧಿ ಖಳಹಗೆಯರಾದ ಪ ।

ಘರ ಘರಾದಿ ಸಮ್ಯಜ್ ಜ್ಞಾನಾತ್ಮಕ, ಸು –।
ಚರಿತ ಪ್ರಾಕೃತಛವಿರಹಿತ ಜನಪಾ ಝಷ ಋಷಭಾ ॥
ಞರುಜಗತ್ಪರ್ಯಜನ ಕಮಠ ಡ –।
ಮರಢರೇಢ್ಯನೇ ಗೂಢಗುಣಚಿತ್ ।
ಪರಕುಧರಧಿ ಕೋಚ್ಚಾರಜಾರಗ ದನಹಸೂಧನದ ನಮೋ ॥ ೧೫ ॥
(ಈ ನುಡಿಯಲ್ಲಿ – ಥ – ಅಕ್ಷರಮಾಲೆ ಉಳಿದಿದೆ)

ನರಸಖಾಮಿತ ಪಶುಪ ಫಣಿಮದ –।
ಹರ ಬಲಾನುಜಭರಿತ ವಿಕ್ರಮ –।
ಮರುತ ಕಾಂಗೆಯರಘ್ನ ನೆರಲೇಶ್ವರ ಲಕ್ಷ್ಮೀಶಾ ॥
ವರದರಾಜ ಶಶಿವದನ ಷಕೃಷ –।
ನಿರತ ಸರ್ವಭುಕ್ ನುಜ್ಞ ಹವ್ಯೇ –।
ಶ್ವರ ಸ್ವತೃಪ್ತ ಸ್ವಪೂರ್ಣ ಲಕ್ಷ್ಮೀಧರ ಯಜ್ಞಾಂಗ ನಮೋ ॥ ೧೬ ॥
(ಈ ನುಡಿಯಲ್ಲಿ – ಳ – ಅಕ್ಷರಮಾಲೆ ಉಳಿದಿದೆ)

ಕಪಟ ನಾಟಕ ಕಾಲಕಿತವಭ –।
ಯಪರಿಹರ ಕೀಚಕರಿಪು ಪ್ರಿಯ ।
ಕುಪುರುಷಾಂತಕ ಕೂದಕೇಶನೆ ಕೈವಲ್ಯಕೇಶ ॥
ವಿಪುಲಕೋಶನೆ ಕೌಶಿಕ ಮುನೀಂದ್ರ ಮ –।
ಖ ಪರಿಪೋಷಕ ಕಂಬುಕಂಧರ ।
ತಪನ ಕೋಟಿಪ್ರಕಾಶ ಕಶ್ಯಪಸುತ ಸುರೇಂದ್ರನಮೋ ॥ ೧೭ ॥
(ಈ ನುಡಿಯಲ್ಲಿ – ಕಃ – ಅಕ್ಷರಮಾಲೆ ಉಳಿದಿದೆ)

ಖರವಿದಾರಕ ಖಾದಿ ಪಂಚಕ –।
ಭರದಖಿಳಗುರೋ ವೃಜಸಖೀಮನೋ –।
ಹರ ಸುಖುರಪುಟ ಶೋಭಿತ ಖಡ್ಗಖೂರ್ಚ ಇಷುಪಾಣಿ ॥



ಸುರಸಖೇಳನ ಪರಸುಖೈಕಶ –।
ರೀರ ವಿಶಿಷ್ಟ ಸುಖೋದಯಾಂಕುರ ।
ವರಸು ಖೌದಾಖಂಡ ಪರಶೋ ದುಃಖಹರಣ ನಮೋ ॥ ೧೮ ॥
(ಈ ನುಡಿಯಲ್ಲಿ –ಖಃ– ಅಕ್ಷರಮಾಲೆ ಉಳಿದಿದೆ)

ಗಗನನಾಭಾಗಾದ ಚರಿತ ಗಿ –।
ರಿಗಣಸೇವ್ಯ ಸುಗೀತಪ್ರಿಯ ಗು –।
ಪ್ತಗುಣ ಗೂಢಧೀ ಗೇಹತ್ರಯಯುತ ಗೈದಿಹ ಗೋಗೋಪ್ತ ॥
ಸ್ವಗತ ಗಲರವ ಗವ್ವರಾಂಕಿತ ।
ಸ್ವಗಹನೋತ್ತರ ಶುಭ ಸುಖಕರ ।
ಸುಗಮಸೂಕ್ಷ್ಮ ಸುದುರ್ಗಮಾಲಯ ವಿಜಿತರೋಷ ನಮೋ ॥ ೧೯ ॥
(ಈ ನುಡಿಯಲ್ಲಿ – ಗಃ – ಅಕ್ಷರಮಾಲೆ ಉಳಿದಿದೆ)

ಘಟಶ್ರವಣ ಘಾತಕ ಲಘಿಮಯುಕ್ ।
ಚಟುಲಗಾತ್ರಾಘೀಜನ ಹರಣ –।
ಪಟು ರಘುದ್ವಯ ಪಿಶಿತಭೋಜಕ ಘೂಕಖದ್ಯೋತ ॥
ಕರಿಣೌಘೇಂಟಮಾನ ಖಳಸಂ –।
ಕಟನಿವಾರಕ ಘೋರರೋಧಕರ ।
ನಟಕಾಘೌಘ ವಿದಾರ ಘಂಟಾಚಾಪ ದೀರ್ಘ ನಮೋ ॥ ೨೦ ॥
(ಈ ನುಡಿಯಲ್ಲಿ –ಘೈ–ಘಃ– ಅಕ್ಷರಮಾಲೆ ಉಳಿದಿವೆ)

ಚಕ್ಷುಷಾಲಯ ಚಾರುಗಣ ಸ್ಯತ್ –।
ಕುಕ್ಷೇ ಚೀರದ್ವಯಾ, ಚುತೇತರ –।
ರಕ್ಷ ಚೂಡಾಚೇಷ್ಟ ಚೈದ್ಯಹರಾದ್ಯ ಚೋರಾರೇ ॥
ರಿಕ್ಷ ಜಾತಾ ವರ ಚೌರಾಕಿತಿ –।
ಲಕ್ಷ ಪ್ರತಿಮಾಧ್ಯಕ್ಷ ಚಂದನ ।
ವೃಕ್ಷವನಸೃಗ್ಧರ ಋಚಃಸ್ವನಪ್ರಿಯ ಪುರುಷ ನಮೋ ॥ ೨೧ ॥
(ಈ ನುಡಿಯಲ್ಲಿ –ಚಿ–ಚೆ– ಅಕ್ಷರಮಾಲೆ ಉಳಿದಿವೆ)

ಛತ್ರಛಾಯೋಚ್ಛಿ ಪ ಜ–।

ಗತ್ ಶಿಕ್ಷಕ ಮುರನೃಪಛೇದಿನಿ –।
ರ್ವಛೈಕ ಚರ ನಮೋದ್ರೇಕ ಮಾಂದ್ಯಹರಾ ॥
ಶತ್ರುಭಿಛೌರ್ಯ ಭೂಷಿತ ।
ಸತ್ರಭೂಕ್‌ಛಂದೋಮಯಾತ್ಮಕ ।
ಪುತ್ರ ಪೌತ್ರ ಪ್ರಪೌತ್ರ ಶೋಭಿತ ಸ್ವಚ್ಛವರ್ಣ ನಮೋ ॥ ೨೨ ॥
(ಈ ನುಡಿಯಲ್ಲಿ – ಛೀ, ಛೂ, ಛೋ, ಛಃ– ಅಕ್ಷರಮಾಲೆ ಉಳಿದಿವೆ)

ಜಯತರಾನನ ಜಾಡ್ಯಹರ ಜಿತ – ।
ಭಯನಿಚಯ ಜೀವೌಘಹರ ಕ್ಷಯ – ।
ಜೀರ್ಯಜಾಸುರ ಜನಕನುತ ಸುರಜೇಷ್ಠ ಜೈನದಿಹನ್ ॥
ಲಯ ಜಲಾಶ್ರಯ ಜೋತಿರ್ಮಯತನೋ – ।
ವ್ಯಯ ವೃಔಕಸ ವಂದ್ಯ ಜಂಬುನಿ – ।
ಲಯ ಕುವಲಯಾಯುಜ ಆನಂದ ಬಲಗ ನಮೋ ॥ ೨೩ ॥
(ಈ ನುಡಿಯಲ್ಲಿ **–ಜು–ಜೂ–ಜಃ–** ಅಕ್ಷರಮಾಲೆ ಉಳಿದಿವೆ)

ಝಡತಿಚರ ಝಂರ್ಝಾಮರುಚ್ಚರ ।
ಉಡುಪಚರ ಝಿಲ್ಲಿಕ ವನೇಚರ ।
ಔಷಧೀಚರ ಝೀರಿಕಸುರ–ಝುಂಟಾವಲಯ ಝೂಣಿಚರ ॥
ಒಡನೆ ಝೇಂಕರಿಸುತಲಿ ಝೈುಡಿಯು ।
ದಡದಿ ಝೋಂಡಿಯೋಳ್ಚರಿಸಿ ಝೌಂಕರಿ – ।
ಸ್ಯೊಡಲಿನೊಳು ಝುಂಕಾರಪೂರ್ಣ ಝುಷಪತಿಯೇ ನಮೋ ॥ ೨೪ ॥
(ಇದರಲ್ಲಿ –ಝು– ಅಕ್ಷರಮಾಲೆ ಉಳಿದಿದೆ)

ಪಟಲಹೈಮಕಟಾಹಭಂಜಕ – ।
ನಿಟಿಲದೃಕ್ ಟೀಕಾರ್ಥಸುಪ್ರಿಯ – ।
ಕಟುಮತಿಘ್ನ ಭವೇಢ್ಯ ಟಂಕಾನ್ವಿತ ಕರಾಬ್ಜೇಶಾ ॥
ಜಠರ ನೃಪ ಸುಕುಠಾರ ಧರಸತ್ ।
ಕಠಿಣಕರ ಸುಕಠೋರ ಯೋಧನ ।
ಮಠವಿಕಾರ ಶಠೌಂಘಸಂಹರ ನೃಹರೇಭ್ಯಗುಜ ನಮೋ ॥ ೨೫ ॥
(ಈ ನುಡಿಯಲ್ಲಿ (೧) **ಟೂ,ಟೆ,ಟೈ,ಟೋ,ಟೇ,ಟಃ_ಹಾಗೂ** (೨)
**ಠೀ,ಠು,ಠೂ,ಠೆ,ಠೈ,ಠೇ,ಠಂ,ಠಃ_** ಅಕ್ಷರಮಾಲೆ **ಉಳಿದಿವೆ)**

ಕುಂಡ ಲೀಶ ಷಡಾಸ್ಯ ಸನ್ನುತ – ।
ಪಂಡಿತಾರ್ಚಿತ ಪಂಡುರಾಂಬಕ – ।
ಮಂಡಲೇಶ ಬಿಡೌಜನುತ ನೃವಿಡಂಬನ ಚರಿತ್ರ ॥
ಪಂಢರಾಪುರ ರಾಜ ವಿಠಲಾ ।
ಖಂಡಮತಿ ಪಾಖಂಡ ದೂಷಕ ।
ಷಂಡಾಮರಕ ಪ್ರಭುಘ್ನ ಮುನಿ ಪುಂಡರೀಕವರದ ನಮೋ ॥ ೨೬ ॥
(ಈ ನುಡಿಯಲ್ಲಿ (೧) **ಡೀ, ಡೂ, ಡೆ, ಡೈ, ಡೋ, ಡಃ;** ಹಾಗೂ
(೨) **ಢ** _ ಒಂದನ್ನು ಬಿಟ್ಟು ಎಲ್ಲಾ ಅಕ್ಷರಮಾಲೆಗಳು ಉಳಿದಿವೆ)

ಪ್ರಣತಪ್ರಿಯ ಪ್ರಣಾಯಪ್ರಿಯ ವಿಪ್ರ – ।



ಪ್ರಣಿತಪ್ರಿಯ ವಾಣೀಧವ ಪ್ರಿಯ – ।
ಅಣುಮಹತ್ ರಮಾದೇವಿಪ್ರಾಣದೇವರು ಗಣೇಶಪ್ರಿಯ ॥
ಕ್ಷಣ ಕ್ಷಣೈಕ ಸುವ್ಯಕ್ತ ಧಾರಣ – ।
ನೃಣ ಗಣೌತ್ವಾಟಣ ರಣೌಘಾಂ – ।
ಗಣ ಭಯೋಚ್ಚಾಚಣ ಗುಣಾಂಕ ಶರಣ್ಯ ಸುಖದ ನಮೋ ॥ ೨೭ ॥
(ಈ ನುಡಿಯಲ್ಲಿ **–ಣೂ,ಣಃ–** ಅಕ್ಷರಮಾಲೆಗಳು ಉಳಿದಿವೆ)

ಸತ್ಯವೃತ ಸತ್ವಾತ್ಮಕಾಗಮಾಢ್ಯ ।
ತತ್ವೇಶ ಸುರರು ತಿಲಮಾತ್ರಾರ್ಪಕೇಷ್ಟದ ।
ಮಿಥ್ಯ ದೂಷಕ ತೀರ್ಥಶ್ರವ ತುರ್ಯಾತ್ಮಾ ತೂರ್ಣಪ್ರಿಯ ॥
ನಿತ್ಯ ತೇಜನ ತೈತ್ತಿರಿಯ ಶ್ರುತಿ – ।
ಸ್ತುತ್ಯ ತೋಯಾಯುನ ಧೃತೌಷಧ – ।
ಪಥ್ಯತಾಂತ್ರಿಕ ಪರಮಚೇತಃ ಪರಮಕಾಲ ನಮೋ ॥ ೨೮ ॥

ಪ್ರಥಮ ಪುರುಷ ಪೃಥಾತ್ಮಜಾನೃಪ – ।
ಮಥಿತ ವೀರ್ಯ ರಥೀಂದ್ರ ಪರಿಚರ ।
ಪೃಥುವಿಪೂಜಿತ ಸ್ಥೂಲಕೃತ್ಯ ಯಥೇಚ್ಛ ಸ್ಥೈರ್ಯಮತೇ ॥
ಪಥಿಕ ಸದನ ಯಥೋಕ್ತ ಫಲದ ವಿ – ।
ಪಥರಥೌಘಪ ಸುರಥಚರಣ ಕು – ।
ಪಥದೂರಗ ಬ್ರಹ್ಮಸ್ತಂಭಾಂತಸ್ಥಸ್ವಸ್ಥಃ ನಮೋ ॥ ೨೯ ॥
(ಈ ನುಡಿಯಲ್ಲಿ **–ಥಂ–** ಅಕ್ಷರಮಾಲೆ ಉಳಿದಿದೆ ದೇವನಾಗರಿಯಲ್ಲಿ **ಸ್ಥೂ ಸ್ಥೈ**
**ಸ್ಥಃ** ಹೀಗೆ ಬರವಣಿಗೆ ಬರುವದರಿಂದ **ಥೂ,ಥೈ** ಹಾಗೂ **ಥಃ**ಗಳು
ಬಂದಂತಾಗಿವೆ)

ದಹರ ವ್ಯೋಮಗ ದಾತೃದಾಂತ ಹೃದ್ – ।
ಗುಹಸದನ ಕರ್ತ ತುಹಿನಬಿಂಬಗ ।
ಅಹೋಘ ದೀರ್ಘಮಯೂಖ ದುರ್ಗಾವ್ಯಾಕೃತಾಂಬರಗಾ ॥
ಸ್ವಹಿಗ ದೂರಗ ದೇವದೈತ್ಯರಗ ।
ದೋಹನ ಕಾರ್ಯಗ ದೌತ್ಯಕರ್ಮಗ ।
ದ್ರೂಹಿಣದೇಹ್ಯಗ ದಂಡಕಾರಗ ದರ್ಪಕಸಹ ನಮೋ ॥ ೩೦ ॥
(ಈ ನುಡಿಯಲ್ಲಿ – **ದಿ, ದಃ** – ಅಕ್ಷರಮಾಲೆ ಉಳಿದಿವೆ)

ಧರ್ಮನಿಚಯಪ ಧಾತುಸಮೂಹಪ ।
ಕರ್ಮಧಿಷಣಪ ಧೀರ ಪ್ರಜ್ಞಪ ।
ನರ್ಮವಾಗ್ಮಿಪ ಧುನಿಕದಂಬಪ ಧೂರ್ಜಚಾಂಕಿತಪ ॥
ಚರ್ಮಖಡ್ಗಪ ಧೇನುವಿಪ್ರಪ ।

ವರ್ಮ **ಧೈ**ರ್ಯಾಂಕಿತಪಾಧೋಕ್ಷಜ ।
ನಿರ್ಮಲಾತ್ಮ **ಧೌ**ಮ್ಯರ್ಗಪ ಧ್ವನಿಪ ಜನಪ ನಮೋ ॥ ೩೧ ॥
(ಈ ನುಡಿಯಲ್ಲಿ –**ಧಂ, ಧಃ**– ಅಕ್ಷರಮಾಲೆ ಉಳಿದಿವೆ)

**ನ**ಗವಿಧೃತಕರ **ನಾ**ಗಗರ್ವಹನ್ ।
**ನಿ**ಗಮರಿಪುನಾಶಕ **ನೀ**ತಪ್ರಭು ।
ಸುಗಣಸೇವ್ಯ **ನು**ತಜನಮಂದಾರ **ನೂ**ತನಾಬ್ಜಾಂಘ್ರೀ ॥
ಯುಗಯುಗಾಂತರ**ನೇ**ಮನ್ನೈಷ್ಟಿಕ ।
ಸುಗುಣ**ನೋ**ದಧೆ ಸೌಗನಂದಕ ।
ವಿಗತ ಸ್ನೇಹವಿಮನಷ್ಟ ಜಗದೋಧರಣಶೀಲ ನಮೋ ॥ ೩೨ ॥
(ಈ ನುಡಿಯಲ್ಲಿ –**ನೌ** ಹಾಗೂ **ನಃ**– ಅಕ್ಷರಮಾಲೆ ಉಳಿದಿವೆ)

**ಪ**ವನ ಮತ ಪರ **ಪಾ**ಕಭಿತ್ತಂ ।
ಸ್ತವನನಿರತ **ಪಿ**ನಾಕಿಮೋಹಕ ।
ಸುವಧು **ಪೀ**ಯೂಷಧರ ಸು**ಪು**ಷ್ಟವಿಹಾಸ **ಪೂ**ರ್ಣಪ್ರಭಾ ॥
ಕವಿವರದ ಜೈಮಿನಿ ಸುಮಂತ **ಪೈ**–।
ಲ ವೈಶಂಪಾಯನ ಶುಕವಿ**ಪೋ**ಷಕ ಪೌರಾ – ।
ಣ ವಿರಚಕ **ಪಂ**ಚರಾತ್ರ ಭಾರತ ಸೂತ್ರಕರ್ತ ನಮೋ ॥ ೩೩ ॥
(ಈ ನುಡಿಯಲ್ಲಿ –**ಪೇ** ಹಾಗೂ **ಪಃ**– ಅಕ್ಷರಮಾಲೆ ಉಳಿದಿವೆ)

**ಫ**ಲಿತಸದ್ರಸ **ಫಾ**ಲಲೇಖಕ ।
ಲಲಿತ **ಸ್ಫಿ**ತಾತ್ಮಕ **ಸ್ಫು**ಟಿಥವ್ಯ– ।
ಜ್ಜಲ ಮರುತ್ವಯಃ **ಫೇ**ನಭುಕ್ವತೆ ವಿ**ಸ್ಫೋ**ಟಕ ಕಚಾಹ ॥
**ಬ**ಲಬಲದ **ಬಾ**ಣಘ್ನ **ಬಿ**ಲಗಿರಿ
ನಿಲಯ ಮುನಿ ಹೃನ್ನಿಲಯ **ಬು**ಧ ಮಂ – ।
ಡಲ ವಿರಾಜಿತ **ಬೋ**ಧಯುತ **ಬಂ**ಧಮೋಕ್ಷರಕ ನಮೋ ॥ ೩೪ ॥
(ಈ ನುಡಿಯಲ್ಲಿ (೧) **ಫೀ, ಫೂ, ಫೈ, ಫೇ, ಫಂ, ಫಃ**
(೨) **ಬೀ, ಬೂ, ಬೆ, ಬೈ, ಬೇ, ಬಃ** – ಅಕ್ಷರಮಾಲೆ ಉಳಿದಿವೆ)

**ಭ**ದ್ರಪದ **ಭಾ**ವುಕಭಿಷಗ್ವರ ।
ರುದ್ರ **ಭೀ**ಕರ **ಭು**ಕ್ತಿದಾ ದಾ– ।
ರಿದ್ರ್ಯದೂರಕ **ಭೂ**ರಿಭೂತಿದ **ಭೇ**ದವಾದೀಶಾ ॥
ಹೃದ್ರುಜಹನ್ **ಭೈ**ಷ್ಮೀಶ **ಭೋ**ಜೇಶಾ – ।
ಘದ್ರಿ ಕುಲಿಶ ಕುಶಸ್ಥಳೋಕ ಸೋ – ।
ಪದ್ರವಾರ್ದಕ **ಭೌ**ಮವರಪ್ರದ **ಭಂ**ಗರಹಿತ ನಮೋ ॥ ೩೫ ॥
(ಈ ನುಡಿಯಲ್ಲಿ –**ಭಃ**– ಅಕ್ಷರಮಾಲೆ ಉಳಿದಿದೆ)



**ಮ**ಕರಧ್ವಜಜಿತತ**ಮಾ**ಸಖಾ**ಮಿ**ತಾ – ।
ಭಕುಲಜೀವನ**ಮೀ**ನ **ಮು**ರಲೀಧ – ।
ರಕರ **ಮೂ**ಲಕವೀಂದ್ರ **ಮೇ**ಧ್ಯಚರಿತ **ಮೈ**ದುನಪಾ ॥
ಸುಕರ**ಮೋ**ಹಕ **ಮೌ**ನಿಪೂಜಿತ – ।
ಚಕಿತಕರನುಜೇಂದ್ರ ಕರುಣಾಂ – ।
ಬಕ ಬಕಾಂತಕ **ಮಂ**ಜುಹಾಸ ಮಹಾಧಿರಾಜ ನಮೋ ॥ ೩೬ ॥

**ಯ**ಜ್ಞ ಭಿಕ್ಷುಕ ಯಜ್ಞರತ ಇಂ – ।
ದ್ರಾಜ್ಞಾ ದೂಷಕ ಈಷಣಾ**ಧೃ**ತ – ।
ಸುಜ್ಞರಾಡ್ಯುಗ **ಮೂ**ಗಸಂಭವ **ಯೂ**ಥಪೋತ್ತಂಸ ॥
ಅಜ್ಞಭಿದ್ಯೇಕೇಶ **ಮೌ**ನಿಗ – ।
ಣಜ್ಞ **ಯೌ**ವ್ವನಪುಂಸ **ಮಂ**ತ್ರಾ – ।
ರ್ಥಜ್ಞ ಪೋಷಕ ಕಿಂಕರೋಧೃತ ಕಾಮಕಾಷ್ಠ ನಮೋ ॥ ೩೭ ॥
(ಈ ನುಡಿಯಲ್ಲಿ **ಯಾ,ಯೀ, ಯೀ, ಯು,ಯೆ, ಯೈ, ಯೋ, ಯಂ, ಯಃ**
ಅಕ್ಷರಮಾಲೆ ಉಳಿದಿವೆ)

**ರ**ಸಿಕರಾಜಿಪ **ರಾ**ಜ್ಯಚಕ್ರಪ ।
ವಸು ಪರಿಕ್ಷಪ ಕುಲಪರೀಕ್ಷಿಪ
ಪರರ ಪಾಂಥಪ **ರು**ಜಿಗುಣೌಘಪ**ರೂ**ಪ ಬಹುರೂಪಾ ॥
ಅಸುಪ **ರೇ**ತೋದ್ಭವಪ **ರೈ**ಗಪ ।
ರಸಪ **ರೋ**ರೌಪ್ಯನಗಪಪಾ ।
ಕುಸುಮ ಬಾಣಪ **ರಂ**ಗಾಕ್ಷೇತ್ರಪ **ರ**ಹಸ್ಯಪಾಲನಮೋ ॥ ೩೮ ॥
(ಈ ನುಡಿಯಲ್ಲಿ **ರಹ** = **ರಃ** ಅಂತಾ ಬಳಸಿದ್ದಾರೆ)

**ಲ**ವಜನಕ **ಲಾ**ಘವಕರಾಜ್ಞ **ಲಿ** – ।
ಪ್ತವಿಮಲ ಶ್ರೀಚಂದನಾಂಗ **ಲೀ**– ।
ಲಾವಿನೋದ ವನಚರಪಾವನ **ಲು**ಬ್ಧವಧು ಫಲ ಭೋಕ್ತಾ – ॥
ಮಲಾಭ ಬೋಧಕ ಭವಜಪಾಕ್ಷರ ।
ಅತೀಶ ಮೋಹಮದವಿರಹಿತ **ಲೋ**ಭ – ।
ಘ್ನ **ಲೌ**ಕಿಕ ಪ್ರವಹೇತ **ಲಂ**ಕೌಕ ಸಾರ್ದಕ ಲುಬ್ಧತುಷ್ಟ ನಮೋ ॥ ೩೯ ॥
(ಈ ನುಡಿಯಲ್ಲಿ – **ಲೂ, ಲೆ,ಲೈ** ಹಾಗೂ ಲಃ – ಉಳಿದಿವೆ)

**ವ**ಕ್ತೃವರ **ವಾ**ಲ್ಮೀಕಿ ಕೃತೀಶ ವಿ – ।
ವಿಕ್ತಮತಿ ಪರರೀಶ ಗತಿಪ್ರದ ।
ವ್ಯಕ್ತಸುಚರಿತ **ವೂ**ರ್ಧ್ವಪಟಪ್ರಸ್ಥಾಪ **ವೇ**ದ್ಯ ನಮೋ ॥

ರಿಕ್ತಭಯ **ವೈ**ದೇಹಿಮನೋಹರ ।
ತ್ಯಕ್ತಪ್ರುಕೃತ **ವೊಂ**ಪೇಷಧಾಕ್ಷಯಾ ।
ದ್ಯುಕ್ತಿವಾಚಕ **ವಂ**ದ್ಯವಂದಿತ ವಹಕವಾಹಕ ನಮೋ ॥ ೪೦ ॥
(ಈ ನುಡಿಯಲ್ಲಿ – **ವೀ, ವು, ವೌ** – ಅಕ್ಷರಮಾಲೆ ಉಳಿದಿವೆ)

**ಶ**ಮಯುತಾಗ್ರಣಿ **ಶಾ**ಮ ಶಿವಕರ ।
ಗಮನ **ಶೀ**ಘ್ರಗ **ಶು**ದ್ಧವಿದ್ಯೋ – ।
ದ್ಯಮ ಶುಚಿವ್ರುತ **ಶೂ**ರ್ಪನಖಿಮದಹರ್ತಾಶೇಷಸಹ ॥
ಶಮದಮಾಂಬುಧೆ **ಶೈ**ಲಗೃಹಸಂ – ।
ಯಮೀಗಣಾರ್ಚಿತ **ಶೋ**ಕತಾಪಪ್ರ – ।
ಶಮನ ಕೌಜಾರಮುತ ಮಹಾಪ್ರಭೋ **ಶಾಂ**ತಶಸ್ತ ನಮೋ ॥ ೪೧ ॥
(ಈ ನುಡಿಯಲ್ಲಿ – **ಶೌ ಶಃ** – ಅಕ್ಷರಮಾಲೆ ಉಳಿದಿವೆ)

**ಷ**ಡ್ವಿಭೂತೆ ನಿ**ಷಾ**ದಭಯಹರ ।
ಷಡ್ವಧೂಧವ ಋ**ಷಿ**ವಧೂಸಖ ।
ಶಾಡ್ವಲಚರ ಇಷ್ವೀಕ ಇ**ಷು**ಕಾಂಡ ಸವಿಹಾರಾ ॥
ಷಡ್ವಿಕಾರಾತೀತ ವಿಜಿತಾ – ।
ನಡ್ವೇಶ ಉಚಿತ ಸೌರಭೇಯಭೂ – ।
ವಿಡ್ವರಘ್ನ ವೃಕ್ಷಾಘ್ನ ಸ್ವರ್ಣನಿ**ಷಂ**ಗಚಾಪ ನಮೋ ॥ ೪೫ ॥
(ಈ ನುಡಿಯಲ್ಲಿ – **ಷೂ,ಷೆ, ಷೈ, ಷೋ, ಷೇ, ಷಃ** – ಅಕ್ಷರಮಾಲೆ ಉಳಿದಿವೆ.

**ಸ**ರಸಿಜಾನನ **ಸಾ**ಧ್ಯಸಿದ್ಧನಿ – ।
ಕರಕರಾರ್ಚಿತ ಶಿಕ್ಷಾರಕ್ಷಕ – ।
**ಸು**ರಹೃನ್ಮಂದಿರ **ಸೂ**ರಿ ಹೃದ್ಗುಹ**ಸೇ**ವ್ಯ ಸುರಮೌಳಿ ॥
ನಿರಜ**ಸೈಂ**ಧವ ಶಾಸ್ತ್ರ, **ಸ್ತೋ**ಮಾ – ।
ಭರಣತೋಷಕ **ಸೌ**ಮ್ಯರತ್ನಾ – ।
ಕರಗ ನಿರಂಜನ **ಸಂ**ಜಯೋತ್ಸವ **ಸ**ಹಜಶೂರ ನಮೋ ॥ ೪೩॥
(ಈ ನುಡಿಯಲ್ಲಿ –ಸೀ– ಇದೊಂದು ಅಕ್ಷರಮಾಲೆ ಮಾತ್ರ ಉಳಿದಿದೆ)

**ಹ**ಲಿಸಹಗ **ಹಾ**ರ್ದಿಕಮನೋಗತ – ।
ಫಲದ **ಹಿ**ರಣ್ಮಯವಸನ **ಹೀ**ರಾ – ।
ವಲಯ **ಹು**ತಭುಗ್ ಬಲದ **ಹೂಣಪವಿತ್ರ ಹೇ**ತ್ವಾರ್ಥಾ ॥
ಜಲಧಿ ಪುರಪತೆ **ಹೈ**ಮರಾಶಿದ ।
ಬಲದ **ಹೋ**ಮದ **ಹೌ**ತ್ರ ಭಾಗದ ।
ಸಲಲಿತೋದನ ಪರಮ**ಹಂ**ಸ ಸತ್ಕೂಲಹರುಷ ನಮೋ ॥ ೪೪ ॥
(ಈ ನುಡಿಯಲ್ಲಿ –ಹಃ– ಇದೊಂದು ಅಕ್ಷರಮಾಲೆ ಮಾತ್ರ ಉಳಿದಿದೆ)



ಪಳಲವಾಂತಕ**ಳಾ**ಢ್ಯಯಜ್ಞಾ – ।
ವಳಿಕೃತಾದರ ನಿರ್ವ**ಳೀ**ಕ ಅ – ।
ಖಿಳಕೃಪಾ**ಳು**ವರೇಣ್ಯ ಜೀವ ಜಿ**ಳೂ**ಕ ತೃಪ್ತಿಕರ ॥
ಸ್ಥಳ ಕ**ಳೇ**ವರ ಭರಿತ ಬ್ರಹ್ಮವೀ – ।
ಪುಳ ಕ**ಳೈ**ಕ್ಯ ತ**ಳೋ**ರ್ಧ್ವ ಮದವಿ ।
ವ್ಹಳ ಬ**ಳೌ**ಘನೆ ನಿಷ್ಕ**ಳಂ**ಕ ಕ**ಳಾ** ಪ್ರಪೂರ್ಣನಮೋ ॥ ೪೫ ॥
(ಈ ನುಡಿಯಲ್ಲಿ – **ಳೆ ಹಾಗೂ ಳಃ** – ಅಕ್ಷರಮಾಲೆಗಳು ಉಳಿದಿವೆ)

**ಕ್ಷ**ತವಿದೂರ **ಕ್ಷೌ**ರುಂಬುಬಂದಿತ ।
**ಕ್ಷಿ**ತಿ ಭರಹರ **ಕ್ಷೀ**ರನಿಧಿ ಗೃಹ ।
ಅತುಳ **ಕ್ಷು**ದ್ರಾರೆ **ಕ್ಷೂ**ರಾಯುದನೆ **ಕ್ಷೇ**ಮೈಶ್ವರ್ಯ – ॥
ಗತಿಗತೆ **ಕ್ಷೌ** ದೀಪ್ತೈಕ್ಯ **ಕ್ಷೋ**ಣಿ – ।
ಪತಿಪತೆ **ಕ್ಷೌ**ಮರಥ**ಕ್ಷಾಂ**ತಿಭ – ।
ರಿತನೃಗೋದ್ಧರ **ಕ್ಷ**ತ್ತಾವಲ್ಲಭ**ಕ್ಷ**ತ್ರಿಯವೇಶ ನಮೋ ॥ ೪೬ ॥
(ಈ ನುಡಿಯಲ್ಲಿ _ **ಕ್ಷೈ, ಕ್ಷಂ, ಕ್ಷಃ** – ಅಕ್ಷರಮಾಲೆಗಳು ಉಳಿದಿವೆ)

ಏಕರಾದ್ ವಿಶ್ವೇಕ–ಕಾರಕ ।
ಏಕವ್ಯಾಪಕ ಏಕಸ್ಥಾಪಕ ।
ಏಕಭೋಜಕ ಏಕಯೋಜಕ ಏಕಲೋಕಾತ್ಮ ॥
ಏಕಸೃಜ್‌ಭುವನೈಕವರ್ಧಕ ।
ಏಕಮಾರಕ **–ಏಕ–** ತಾರಕ ।
ಏಕಯಾಚಕ ಏಕಸೂಚಕ, ಏಕಪತ್ರ, ನಮೋ ॥ ೪೭ ॥

ದ್ವಯಕ್ರಿಯೇಶ್ವರ ದ್ವಯಪಥೇಶ್ವರ ।
ದ್ವಯಸುವಿಸ್ತಾರ ದ್ವಯವಿಗೋಚರ ।
ದ್ವಯನಿವಾರಕ ದ್ವಯಪ್ರದಾರಕ–ದ್ವಯಸಮಯಪೂರ್ಣ ॥
ದ್ವಯಪ್ರವಾಹಕ ದ್ವಯನಿಯಾಮಕ ।
ದ್ವಯನಿರಂತರ ದ್ವಯದ್ವಯೇತರ ।
ದ್ವಯಸುಬೋಧಕ ದ್ವಯಪ್ರಸಾದಕ ದ್ವಯಭಯಘ್ನನಮೋ ॥ ೪೮ ॥

ತ್ರಿಯುಗ ತ್ರಿವಿಗ್ರಹ ತ್ರಿಪದ ಕಾ – ಲ – ।
ತ್ರಯಗ ತ್ರಿದಿವಪ ತ್ರಿಪಥಗಾಪಿ – ತ್ರಿ – ।
ನಯನಾರಿಹನ್ ತ್ರಿಪುರಮೋಹಕ ತ್ರಯತ್ರಿಂಶತ್ ಸುರಪ ॥
ತ್ರಿಯುಗುದಿತ ತ್ರಿಗುಣೇಶ ಸಾಗರ ।
ತ್ರಿಯಪಪಂಚಕ ತ್ರಿವಿಧಭಾಷ್ಯನಿ_।
ಚಯರ ಚಕ ತ್ರಿದಶಾರ್ಚತ್ರಿಜಗದುದ್ಧರಣ ಮಾರ್ಗನಮೋ ॥ ೪೯ ॥

ಚತುರ್ವಿಧಾತ್ಮಾ ಚತುರ್ಭಜಾಂಕಿತ ।
ಚತುರ್ಮುಬಾದಿಪ ಚತುರ್ವಿಧಾರ್ಥದ ।
ಚತುರ್ವರ್ಣಾಶ್ರಮ ಚತುರ್ಮುಕ್ತಿ ಚತುಷ್ಟಯೇಶ್ವರತಾ॥
ಚತುಸ್ಸಮುದ್ರಗ ಚತುರತರಮತಿ ।
ಚತುರ್ವಿಧಾಯತ ಚತುರ್ಬಲಾಂಭುದಿ ।
ಚತುರ್ವೇದಾರ್ಥಿತಚರಣ ಚತುಶ್ಶಾಸ್ತ್ರಪೂಜ್ಯ ನಮೋ ॥ ೫೦ ॥

ಪಂಚಮುಖ ಮುಖಪಂಚ ಮುಖನುತ ।
ಪಂಚಜನರಿಪು ಪಂಚ ಮೋಕ್ಷದ ।
ಪಂಚಪಾಂಡವಪ್ರಾಣವರ ಪಂಚಾಕೃತವ್ರಾತ ॥
ಪಂಚಶರಪಿತ ಪಂಚವ್ಯೂಹ ಸು –।
ಪಂಚಭೇದಮತ ಪಂಚಪರ್ವಹ ।
ಪಂಚ ಕಾಲಜ್ಞಜ್ಞ ಸಂಭೃತ ಪಂಚಬಾಣ ನಮೋ ॥ ೫೧ ॥

ಷಟ್ಸಹೋದರ ಷಟ್ಚರಣಚರ
ಷಟ್‌ಪತ್ನಾನ್ಹನ್ ಷಡೂರ್ಮಿಹರ ।
ಷಟ್‌ಶಕ್ತಾತ್ಮಕ ಷಡ್ಗುಣೇಶ್ವರ ಷಡ್ಋತಪ್ರವಹ ॥
ಷಟ್ಕರಾಭಿದ ಷಟ್‌ಪರೋಕ್ಷದ ।
ಷಟ್ಕೃಗ ಷಟ್‌ಶಾಸ್ತ್ರಪ್ರಿಯ ತಮ –।
ಷಟ್ಕಸಹಗ********ನಮೋ ॥ ೫೨ ॥
(ಈ ನುಡಿಯಲ್ಲಿಯ ಕೊನೆಯ ಪಾದದ ಕೊನೆಯ ಎರಡು ನಾಮಗಳು ಮಾತ್ರ ದೊರೆತಿಲ್ಲ)

* ೫೩ನೇ ನುಡಿ ದೊರೆತಿಲ್ಲಾ.

ಅಷ್ಟಕಾರಣ ಶಿಷ್ಟಮಹಿಷೆಯ ।
ರಷ್ಟಕಾಶ್ರಮ ಅಷ್ಟಮದಹರ ।
ಅಷ್ಟಕಾಷ್ಟಗ ಅಷ್ಟಭೂತದಾವ್ಯಷ್ಟಸೃತ್ಯಹ ॥
ಅಷ್ಟದಳ ಅಕ್ಷೋಮುಜಹರ ।
ಅಷ್ಟನಾಗಪ ಅಷ್ಟಭುಜಧರ ।
ಅಷ್ಟಾಯುಧಸಂಭೃತಾಷೋಷಧ ತ್ರಿಭಾಂಗ ನಮೋ ॥ ೫೪ ॥

ನವಸುರತ್ನಾಭರಣಯುಕ–ತ್ರಿ–।
ರ್ನವಕಪ್ರಿಯ ನವದ್ವಾರಪುರಪ್ರಭೇಂ।
ನವಶಕ್ತ್ಯಾತ್ಮಕ ನವಗ್ರಹ ನವದಯಾಗುಣ ॥
ನವರಸೇಶ್ವರ ನವಪ್ರಜೇಶಪ ।
ನವನಿಧೀಶ ನವಾರ್ದನೆ ದಾ–।
ನವರಿಪುವೆ ನವಕೋಟ್ಯಮರರಿಂನಮಿತ ಚರಣ ನಮೋ ॥ ೫೫ ॥



ದಶಶತಾನನ ದಶಶತಾಂಬಕ –।
ದಶಶತಸುತೋರ್ದಂಡ ಧರಖಳ ।
ದಶದಶಾಭಿದ ದಶಶತಾಭಿದ ಖಗಾಮರಪ ॥
ದಶವರೂಥಜ ದಶಮುಖಘ್ನ ತ್ರಿ –।
ದಶಬಯಾಂತಕ ದಶಕಕುಭಹಸತ್–।
ದಶನ ದಶಮತಿಭಾಷ್ಯ ರತದರ್ಶನೀ ಶದ್ರಕ್ಷ ನಮೋ ॥ ೫೬ ॥

ಶತಸುಖಾರ್ಧಿತ ಶತಾಬ್ಧಿಶಯನಸು –।
ಶತಮಖಾರ್ಚಿತ ಶತಗೋಪೀಪತೆ ।
ಶತಸೋಮಪ ನೃಪಶತಕ ಸ್ಥಾಪಕ ಶತಶತಾಂಶಧರಾ ॥
ಶತಕುಂಜಹನ್ ಶತಕುಲೋದ್ಧರ ।
ಶತಾಯುಃಪ್ರದ ಶತಾಪರಾಧಪ ।
ಶತಸಹಸ್ರಾರ್ಕಾಭಿ ಶತಪತ್ರಾಕ್ಷಸುಖದ ನಮೋ ॥ ೫೭ ॥

ಕ್ಷಿತಿಪ್ಲವೋದ್ಧರ ಕ್ಷಿತಿಭೃಲೋದ್ಧರ ।
ಕ್ಷಿತಿತಲೋದ್ಧರ ಕ್ಷಿತಿಚಲನಕರ ।
ಕ್ಷಿತಿತ್ರಿಪದಧರಕ್ಷಿತಿ ಪಕ್ಷಯಕರಕ್ಷಿತಿಕನ್ಯಾಂಸಕರ ॥
ಕ್ಷಿತಿಜನಾಕರ ಕ್ಷಿತಿಖಳ ಮೋಹಕ ।
ಕ್ಷಿತಿಬರಾರ್ದಕ ಕ್ಷಿತಿಪಾಲನಕರ ।
ಕ್ಷಿತಿವಲಯಚರ ಕ್ಷಿತಿಜನೇತರ ಕ್ಷಿತಿ ಸುರೇಶನಮೋ ॥ ೫೮ ॥

ಅಂಬುಗಮನ ಪಯೋಂಬುಮಥನ ಲ –।
ಯಾಂಬು ತಳಗಾರುಣಾಂಬು ಸಟಬಾ –।
ಹ್ಯಾಂಬುಪ್ರವಾಹಕ ಅಂಬುಶೋಷಕ ಅಂಬುಧಿಮದಘ್ನ ॥
ಅಂಬುಗೃಹ ಮಹಾಂಬುಧೆ – ದ –।
ರ್ಮಾಂಬುಶ್ರೀಮತ್ ಅಂಬುಜೇಶ ಸು –।
ಧಾಂಬುಧಿ ಸಮಾನೋದರಾಂಬುದಗಾತ್ರಕಪಿತನಮೋ ॥ ೫೯ ॥

ಅಗ್ನಿಬಿಭ ಅಬ್ಧ್ಯಗ್ನಿ ಸಹಚರ ।
ಅಗ್ನಿಮಯ ಪ್ರಳಯಯಾಗ್ನಿಲೋಚನ ।
ಅಗ್ನಿ ಕಾರ್ಯಾಜ್ಞಾಗ್ನಿಪೂಜಿತ ಅಗ್ನಿಹೋತ್ರಯುತಾ ॥
ಅಗ್ನಿರುಧ ಅನ್ನಾಗ್ನಿ ಕೋಪನ ।
ಅಗ್ನಿಸ್ಥಾಪಕ ಅಗ್ನಿವ್ಯಾಪಕ –।
ಅಗ್ನಿವರ್ಧಕ ಅಗ್ನಿದೀಪಕ ಅಗ್ನಿವರ್ಣನಮೋ ॥ ೬೦ ॥

ವಾತಜನಕ ಚಕ್ರ ವಾತಸಮಭ್ರಮ ।
ವಾತಾಗ್ರಜ ನಾಸಿಕಜಲಯ –।
ವಾತಸಮಕ್ವಾಶಾಂಕ ವಾತಭ್ರಾತೃಹಿತಕರಣೌ ॥

ವಾತಸಖಿಗತವಾತಭವನುತ ।
ವಾತಸುತಮತ ವಾತರಶನಸು – ।
ವಾತಸಮ ಹರಿಗಮನ ಸೂತ್ರವಾತ ಜನಕ ನಮೋ ॥ ೬೧ ॥

ಅಂಬರಮಣಜಾರ್ಚಿತ ನವಾಂಬರ ।
ಅಂಬರಕ್ರೀಡಾಂಬರಾಳಕ – ।
ಸಂಭಜಿತಸ್ವಾಂಬರಭರಿತಪದಅಂಬಾರೇಣುಕನ್ ॥
ಅಂಬರಗವಂಕೇಂದ್ರ ದ್ವಾಂಬರಾಪಹರಾಂಬರ
ಅಂಬರಗ ಹಯಗಾಂಬರಪಂ ಪಾಂಬಕಸ ನಾಭಿನಮೋ ॥ ೬೨ ॥

ಶಬ್ದಬೋಧಕ ಶಬ್ದಕಾರಕ ।
ಶಬ್ದ ಘರ್ಘರ ಶಬ್ದಹೂಕರ ।
ಶಬ್ದಪಾರಗ ಶಬ್ದವೀರಗಂಭೀರ ಶಬ್ದಾಂಕಾ ॥
ಶಬ್ದಶೋಧಕ ಶಬ್ದದೂಷಕ ।
ಶಬ್ದಸ್ಥಾಪಕ ಶಬ್ದವಿಸ್ತೃತ ।
ಶಬ್ದಬ್ರಹ್ಮಾಜ್ಞೇಶ ಶಬ್ದಾತೀತಶಬ್ದ ನಮೋ ॥ ೬೩ ॥

**ವೃಷಭ**ಗೇಷ್ಟ**ಮಿಥುನ**ಮರ್ದಕ ।
ವಿಷಯ **ಕರ್ಕ**ಶ ಮೃತ್ಯು ಕರಿ**ಹರಿ** ।
ವಿಷರದನ **ಕನ್ಯಾ**ಪತಿಸಖ **ವೃಶ್ಚಿಕಾ**ಭಾಂಗಾ ॥
ವಿಷಪ**ಧನ**ಹರ **ಮಕರ**ಕುಂಡಲ ॥
ವಿಷ**ಕುಂಭ** ಸ್ತನಪಾನತತ್ಪರ ।
ವಿಷಯಸುಖಮಯ **ಮೀನ ಮೇಷಾ**ರೂಢ ವಿಷಯ ನಮೋ ॥ ೬೪ ॥

**ಅಶ್ವ**ರೂಪ ಮಹಾ**ಭರಣಿ** ಸಖ ।
ವಿಶ್ವ**ಕೃತ್ತಿಕಾ**ಯಂಗಿವರ**ರೋಹಿ** – ।
ಣೀಶ್ವರೋದ್ಭವ **ಮೃಗ**ಮದಾಂ**ಕಾರಿದ್ರ**ವಿಣಹರಣೌ ॥
ನಿಸ್ವಜನ **ಪುನರ್ವಸು**ದ ಗುರೋರ್ಗುರೋ – ।
ಹೀಶ್ವರಾಸನ ಪಿತೃಚಯಾರ್ಚಿತ ।
ಸ್ವಸ್ವಭಾಗ್ಯ ಸುಪೂರ್ಣಾಮೃತಮ**ಯೋರ್ತ್ತರಸು**ಹ**ಸ್ತ** ನಮೋ ॥ ೬೫ ॥

**ಚಿತ್ರ**ರಥಸಾತಿ ಶತದೂರ ಮ – ।
ರುತ್ತಾನುರಾಧಕೋದ್ಧರ ।
**ಗೋತ್ರೀ** ಸುಖಿರ ಮೂಲರಾಕ್ಷಸವಂದ್ಯ ಜಲರೂಪ ॥
ಶತ್ರುಶ್ರವಣಾಹಿತ ಧನಿಷ್ಠ ನ – ।
ಕ್ಷತ್ರಶತಪತಿಕುಲಜ ಮದ್ಯಪೂ – ।
ರ್ವೋತ್ತರಭಾದ್ರಪದೇಶ ರೇವತೀ ರಮಣೌಜನಮೋ ॥ ೬೬ ॥



ಕರಾರ್ಚಿತ ಕಿತವಹರ ಸತ್ಯ – ।
ವೃತಪ ಕ್ರೀಡಾಪದಕೂ ಧರಕೂ – ।
ಜಿತ ನಿಗಮವೇದ್ಯ ಗೋಖುರಮುಖ ಕೋಸಲ ಜವರಪಾ ॥
ಶ್ರುತಿಹರಾಹರ ಕಂಠರೇಖಾಂ – ।
ಕಿತ–ಕಶ್ಯಪಸುತ ಕರುಣಭಾಸಕ ।
ಶತಸುಬೋದ್ಧರ ಸಿತತರೋದರ ಶಫರಿರೂಪನಮೋ ॥ ೬೭ ॥

ಕಮಠಕಾಲಯ ಕಿಲ್ಬಿಷೋದರ।
ವಿಮಲ ಲೀಲಾಚೇಷ್ಟ ಕುಲಗಿರಿ – ।
ಭ್ರಮಣಕರ ಕುಧರೇಶ್ವರ ಕೇಶ್ವರೇಷ್ಟಕರ ॥
ಅಮಿತ ಕೈತವಾಷ್ಟ ಕೋಮಲ – ।
ವಿಮಲ ಜಠರಕಠಿಣವಪುಃಕೌ – ।
ರ್ಮ ಮಹತ್ಪೃತಿಪ್ರಿಯ ಕಂಠಲಂಬ ಕಚ್ಛಪಾತ್ಮ ನಮೋ ॥ ೬೮ ॥

ಕನಕಭವ ಕಾಪುರುಷ ಮಥನಕಿ – ।
ಚೆನಜಕೀರ್ತಿತಯಜ್ಞರು ಕುಶಮಯ– ।
ತನುಶ್ರೀಕುಧವ ಕೃಪಾಶೌಂಡಕೈಶೋರಕುಜವಂದ ॥
ಮನಸಮಸ್ವನ ರೋಬಘರ್ಘುರ ।
ಮನು ಸನಕ–ನುತ ಕಾತುಕಾಟಣ ।
ಕನಕಗಿರಿಚರ ಕಂಜಭವ ಕಷ್ಟಹರಣ ನಮೋ ॥ ೬೯ ॥

ಮಧ್ವವಲ್ಲಭ ಮಧ್ವತೀರ್ಥಗ ।
ಮಧ್ವಮತಪರ ಮಧ್ವಪತೇ ಮುನಿ – ।
ಮಧ್ವರಮಣ ಶ್ರೀಮಧ್ವಯತಿನುತ ಮಧ್ವಪುರಪಾ ॥
ಮಧ್ವಪೋಷಕ ಮಧ್ವಭಾಷಕ ।
ಮಧ್ವತೋಷಕ ಮಧ್ವಲಿಪುಹರ
ಮಧ್ವಕಾವದ ಮಧ್ವಹೃದ್ಗುಹ ಮಧ್ವವಿಭವನಮೋ ॥ ೭೦ ॥

ಪ್ರಸನ್ನಭವನ ಪ್ರಸನ್ನ ಭಾಷಣ ।
ಪ್ರಸನ್ನಕಾರ್ಯ ಪ್ರಸನ್ನಗುಣನಿಧೇ ।
ಪ್ರಸನ್ನನಾಮದ ಪ್ರಸನ್ನತೇಜದ ಪ್ರಸನ್ನತರ ಮೂರ್ತೇ
ಪ್ರಸನ್ನ ಪುರುಷ ಪ್ರಸನ್ನ ಸೋಂಕಿತ ।
ಪ್ರಸನ್ನಕಥನ ಪ್ರಸನ್ನ ಭೂಷಣ ।
ಪ್ರಸನ್ನಚರಿತ ಶ್ರೀಪ್ರಸನ್ನವೆಂಕಟಪ್ರನ್ನಕೃಷ್ಣನಮೋ ॥ ೭೦ ॥

– ಗುರುಮಧ್ವೇಕಾರ್ಪಣ ಮಸ್ತು

## ನಾಮಗಳ ಸಂದರ್ಭಸಹಿತ ಅರ್ಥವಿವರಣೆ

ಶ್ರೀರಮಾವರ ಶೃತಿವಿನುತ ಸುಖ ।
ಸಾರಗ್ರಹಕೆ ಸರ್ವೇಶ ಸುರದ್ರುಮ ।
ವಾರಿಜಾಕ್ಷ ಮುಕುಂದ ಮುರಹರ ನಾರಸಿಂಹ ನಮೋ ॥ ಪಲ್ಲ ॥

**೧. ಶ್ರೀರಮಾವರ**

ಶ್ರೀ ಸ್ತೋತ್ರಾರಂಭಕ್ಕೆ ಮಂಗಳವಾಚಕವಾಗಿ ಉಪಯೋಗಿಸಿದ್ದಾರೆ; ಸರ್ವಸಂಪನ್ನೆ. ರಮಾ=ಲಕ್ಷ್ಮೀದೇವಿ; ವರ=ಶ್ರೇಷ್ಠ, ವಲ್ಲಭ, (೧) ಪ್ರಭುತ್ವ (೨) ಸಾಮರ್ಥ್ಯ (೩) ಯಶಸ್ಸು (೪) ಸ್ವರೂಪ ಸೌಂದರ್ಯ (೫) ಜ್ಞಾನ (೬) ವಿಜ್ಞಾನ – ಈ ಷಡ್ಗುಣಗಳ ಪರಿಪೂರ್ಣತೆಯಿಂದ ಸಂಪನ್ನನಾದ ಶ್ರೀರಮಾ–ಲಕ್ಷ್ಮೀದೇವಿಯ ವಲ್ಲಭನಾದಂಥ–**ಶ್ರೀ ಹರಿಯು.**

**೨. ಶೃತಿ ವಿನುತ**

ಶೃತಿ = ವೇದ. ವಿ=ವಿಶೇಷವಾಗಿ, ನುತ=ಹೊಗಳಿಸಿಕೊಳ್ಳುವಂಥ. ಸಕಲ ವೇದೋಪನಿಷತ್ತುಗಳಿಂದ ವಿಶೇಷವಾಗಿ ಹೊಗಳಿಸಿಕೊಳ್ಳುವಂಥ **_ಶ್ರೀಹರಿಯು**

**೩. ಸುಖಸಾರಗ್ರಹಕ್ಕೆ ಸರ್ವೇಶ**

ಸುಖ+ಸಾರ+ಗ್ರಹಕೆ+ಸರ್ವೇಶ. ಸುಖ=ಸೌಖ್ಯ, ನೆಮ್ಮದಿ;ಸಾರ = ತಿರುಳು ಸುಖಸಾರಗ್ರಹ = ವಿಶೇಷವಾಗಿ ಸೌಖ್ಯವನ್ನೀಯುವಗ್ರಹ.

ಸರ್ವ = ಎಲ್ಲ, ಈಶ=ಒಡೆಯ

ವಿಶೇಷವಾಗಿ ಸೌಖ್ಯವನ್ನೀಯುವ ಎಲ್ಲ ಗ್ರಹಗಳಿಗೆ ಒಡೆಯನಾದಂಥ – **ಶ್ರೀಹರಿಯು.**

**೪. ಸುರದ್ರೂಮ**

ಸುರ=ದೇವ; ದ್ರುಮ = ಗಿಡ

ಬೇಡಿದ್ದನ್ನು ಕೊಡುವ–ಕಲ್ಪವೃಕ್ಷ ತೆರನಾದಂಥ – **ಶ್ರೀಹರಿಯು.**

**೫. ವಾರಿಜಾಕ್ಷ**

ವಾರಿ+ಜ+ಅಕ್ಷ ವಾರಿ=ನೀರು; ಜ=ಜನಿಸು– ಹುಟ್ಟು ವಾರಿಜ = ನೀರಿನಲ್ಲಿ ಹುಟ್ಟಿದ್ದು–ಕಮಲ ಅಕ್ಷ–ಕಣ್ಣು ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳಂಥ – ಶ್ರೀಹರಿಯು.

**೬. ಮುಕುಂದ**

**ಮುಕ್ತಿಂ ದದಾಲೇತಿ–ಮುಕುಂದಃ –।**[೧]

ಸುಜೀವಿಗಳಿಗೆ ಮುಕ್ತಿಯನ್ನು ಕೊಡುವಂಥ – **ಶ್ರೀ ಹರಿಯು.**

೧. ನಾಮ – ೫೧೪ – ವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಶ್ರೀಸತ್ಯಸಂದರ ಟೀಕೆ



**೭. ಮುರಹರ**

ಮುರ+ಹರ = ಮುರನೆಂಬ ರಕ್ಕಸನನ್ನು ಸಂಹರಿಸಿದವ

ಅದಿತಿಯ ಕರ್ಣಕುಂಡಲುಗಳನ್ನು ಮರಳಿ ಪಡೆಯಲು ಸತ್ಯಭಾಮೆಯನ್ನೊಡಗೂಡಿ ಗರುಡಾರೂಢನಾಗಿ ನರಕಾಸುರನಕೂಡ ಯುದ್ಧಕ್ಕೆ ಹೋದ ಕಾಲದಲ್ಲಿ ನರಕಾಸುರನ ಕೋಟೆಯ ಪ್ರವೇಶಕಾಲಕ್ಕೆ ತನ್ನನ್ನು ಎದುರಿಸಿ ತಡೆದಂಥ ಆತನ ಸೇನಾಪತಿಯಾದ **"ಮುರ"** ನೆಂಬ ರಕ್ಕಸನನ್ನು ಸಂಹರಿಸಿದಂಥ [೨] – **ಶ್ರೀ ಹರಿಯು.**

**೮. ನಾರಸಿಂಹ**

ನಡದ ಮೇಲ್ಭಾಗ ಸಿಂಹದ ಹಾಗೂ ಕೆಳಭಾಗ ಮಾನವನ ರೂಪುಧಾರಣ ಮಾಡಿದ–ಶ್ರೀಹರಿಯು. ಕೃತ–ಯುಗದ ಆಂಗಿರಸ ಸಂವತ್ಸರದ ವೈಶಾಖ ಶುದ್ಧ ೧೪, ಸ್ವಾತಿ ನಕ್ಷತ್ರ, ಪರಿಘನಾಮಯೋಗ, ಶನಿವಾರದಿನ, ಹಗಲು ೨೮ ಘಳಿಗೆಗೆ, ಆರ್ಭಟಿಸುತ್ತ ಪ್ರಕಟವಾದ–**"ನರಸಿಂಹ"**ನು ಹಿರಣ್ಯಕಶ್ಯಪನನ್ನು ಸಂಹರಿಸಿದನು.[೩]

ಶ್ರೀ ಹರಿಯ ದರ್ಶನಾಪೇಕ್ಷೆಗಳಾಗಿ ವೈಕುಂಠಕ್ಕೆ ಬಂದಂಥ ಸನಕ; ಸನಂದನಾದಿಗಳನ್ನು ದ್ವಾರಪಾಲಕರಾದ ಜಯ–ವಿಜಯರಿಂದ ತಡೆಯಲ್ಪಟ್ಟು, ಶ್ರೀ ಹರಿಯ ಸಾನ್ನಿಧ್ಯ ಹಾಗೂ ದರ್ಶನ, ನಮ್ಮಂತೆ ನಿಮಗೂ ತಪ್ಪಿಹೋಗಲೆಂದು ಅವರನ್ನು ಶಪಿಸಿ ಹೊರಟುಹೋದರು. ಬೇಗ ಮರಳಿ ವೈಕುಂಠಕ್ಕೆ ಬರಲಪೇಕ್ಷಿಸಿ, ಅವರು ತಮ್ಮ ಶಾಪ ವಿಮುಕ್ತಿಗಾಗಿ ಶ್ರೀಹರಿಯಲ್ಲಿಯೇ ವೈರಭಾವ ತಳೆದು ಪೃಥ್ವಿಯಲ್ಲಿ ಜನಿಸುವದಾಗಿಯೂ, ಪ್ರತಿ ಜನ್ಮದಲ್ಲಿಯೂ ಶ್ರೀಹರಿಯಿಂದಲೇ ಮರಣಹೊಂದುವಂತೆ, ಶ್ರೀಹರಿಯಲ್ಲಿ ಕೇಳಿಕೊಂಡರು.

ಜಯ–ವಿಜಯರು ಮೊದಲಸಲ ಹಿರಣ್ಯಾಕ್ಷ–ಹಿರಣ್ಯಕಶ್ಯಪುಗಳಾಗಿ ಜನಿಸಿದರು. ಶ್ರೀಹರಿಯು ಹಿರಣ್ಯಾಕ್ಷನನ್ನು "ವರಾಹ" ಅವತಾರದಿಂದ ಸಂಹರಿಸಿದನು. ಹಿರಣ್ಯ ಕಶ್ಯಪುವು ತನ್ನ ಮಗನಾದ ಪ್ರಲ್ಹಾದನನ್ನು ಶ್ರೀಹರಿಯಲ್ಲಿಯ ಭಕ್ತಿ ಬಿಡಿಸಿ ವೈರಹುಟ್ಟಿಸಲು ಸಾಮ,ದಾನ, ಭೇದ ಉಪಾಯಗಳು ವ್ಯರ್ಥವಾಗಲು, ದಂಡೋಪಾಯದಿಂದ ತನ್ನ ಮಗನನ್ನು ಅಂಕಿತಕ್ಕೆ ತರಬಯಸಿ– "ನಿನ್ನ ಹರಿಎಲ್ಲಿ?"– "ಎಲ್ಲೆಡೆಯಲ್ಲೂ ಇದ್ದಾನೆ, "ಈ ಕಂಬದಲ್ಲಿ ಇದ್ದಾನೆಯೇ?" "ಅಲ್ಲಿಯೂ ಇದ್ದಾನೆ" ಎಂಬ ಮಗನ ಉತ್ತರ ಕೇಳಿ, ತನ್ನ ಕೈ ಮುಷ್ಠಿಯಿಂದ ಆ ಕಂಬಕ್ಕೆ ಹೊಡೆದನು. ಆಗ ಶ್ರೀಹರಿಯು, ತನ್ನ ಶರೀರದ ಮೇಲ್ಭಾಗ ಸಿಂಹದ್ದಾಗಿಯೂ, ಕೆಳಭಾಗ ಮಾನವನದ್ದಾಗಿಯೂ ಇರುವಂಥ "ನಾರಸಿಂಹ" ರೂಪದಿಂದ ಆ ಕಂಬದಿಂದ ಪ್ರಾದುರ್ಭವಿಸಿ, ಆ ರಕ್ಕಸನನ್ನು ಬ್ರಹ್ಮನ ವರಕ್ಕೆ ಚ್ಯುತಿ ಬಾರದಂತೆ – ಹಗಲೂ ರಾತ್ರಿಯೂ ಅಲ್ಲದ ಸಂಧ್ಯಾಕಾಲದಲ್ಲಿ; ಮನೆಯ ಒಳಗೂ ಹೊರಗೂ ಅಲ್ಲದ ತೋರಬಾಗಿಲ ಹೊಸ್ತಲಿನ ಮೇಲೆ, ದೇವನೂ ಮಾನವನೂ ಅಲ್ಲದ "ನಾರಸಿಂಹ" ರೂಪದಿಂದ ಸಂಹರಿಸಿದನು.

ರಾಕ್ಷಸರಿಗೆ ಮಾನವರು ಆಹಾರವಾದ್ದರಿಂದ ಹಾಗೂ ತಾವು ಬಲಾಢ್ಯರಾದ್ದರಿಂದ ಮೃಗಗಳ ಭಯವಿರದ್ದರಿಂದ – ಅವರಿಂದ ತನಗೆ ಮರಣದ ಭಯವಿಲ್ಲವೆಂದು ಬ್ರಹ್ಮನಿಂದ

೨. ಭಾಗವತ ದಶಮಸ್ಕಂಧ ಉತ್ತರಾರ್ಧ ಅಧ್ಯಾಯ ಅರವತ್ತುಮೂರು.
೩. ವಿಜಯದಾಸರ ಸ್ತೋತ್ರ ಸುಳಾದಿಗಳು – ಪುಟ ೩೬೭.

ಹಾಗೆ ವರ ಪಡೆದಿರಲಿಲ್ಲ. ಇಂಥ "ನರಸಿಂಹ" ರೂಪಿ– **ಶ್ರೀಹರಿಯು.**

ಶ್ರೀ ಪುರಂದರ ದಾಸರು – ದೈತ್ಯನ ಉದರವನ್ನು ಬಗಿಯುತ್ತಿದ್ದಾಗ ನರಸಿಂಹನು ಅದರ ಕಡೆಗೆ ನೋಡುತ್ತಿದ್ದುದರ ಕಾರಣನ್ನು, ಕರುಳನ್ನು ಮಾಲೆಯಾಗಿ ಹಾಕಿಕೊಂಡುದಕ್ಕೆ ಕಾರಣವನ್ನು ಹೇಳುತ್ತ ದೈತ್ಯನ ದೇಹದಲ್ಲಿ ತನ್ನ ಭಕ್ತನಾದ "ಜಯ"ನೆಂಬ ಸುಜೀವಿಯು ಇದ್ದನೆಂಬುದನ್ನು ಸ್ಮರಣೆಗೆ ತರುವರು.

**ರಾಗ : ಧನ್ಯಾಸಿ** **ತಾಳ : ಆದಿತಾಳ**

**ದಾನವನ ಕೊಂದದ್ದಲ್ಲ ಕಾಣಿರೋ ॥ ಪಲ್ಲವಿ ॥**

**ಗಾನವಿನೋದಿ ನಮ್ಮ ತೊರವೆಯ ನರಸಿಂಹ**
**ಅಚ್ಚ ಪ್ರಲ್ಹಾದನೆಂಬ ರತ್ನವಿದ್ದ ಒಡಲೊಳು**
**ಬಿಚ್ಚಿ ಬಗಿದು ನೋಡಿದರಿನ್ನೇಷ್ಟು ಇದ್ದಾವೆಂದು ॥ ೧ ॥**

**ನೆಂಟತನವ ಬೆಳೆಸೆ ಕರುಳ ಕೊರಳೊಳು**
**ಗಂಟು ಹಾಕಿಕೊಂಡನೆಷ್ಟು ಸ್ನೇಹ ಸಂಬಂಧದಿಂದ ॥ ೨ ॥**

**ತೊರವೆಯ ನರಸಿಂಹ ಪ್ರಲ್ಹಾದ ಪಾಲಕ**
**ಉರಿಮೋರೆದೈವ ನಮ್ಮ ಪುರಂದರ ವಿಠ್ಠಲ ॥ ೩ ॥**

ಗರುಡಗಮನ ಗುಡಾಳಕಾಖಿಳ –।
ಶರಣಜನ ಸುರಧೇನು ಸುರಮಣಿ ।
ಕರುಣಸಾಗರ ಕಾಮಿತಾರ್ಥದ ದುರಿತಾಗಜಸಿಂಹ ॥
ಸರಸಿಜಾಸನ ಸೇವ್ಯ ಮುಕ್ತಾ –।
ಭರಣನಮಿತ ಸುರೇಶ ನಿಶಾಚರ –।
ಹರಣಶೀಲ ಸದಾಗಮಜ್ಞೇಯಾದಿಪುರುಷ ನಮೋ ॥ ೧ ॥

**೯. ಗರುಡಗಮನ**

(೧) ಗರುಡವಾಹನ – ಗರುಡನಮೂಲಕ ಹೋಗುವವನು[೪]

(೨) ಗರುಡನು ಸಂಚರಿಸುವಂತೆ ಅನುಗ್ರಹಿಸುವವನು[೫]

(೩) ವಹನ = ವಾಹನವಾಗುಳ್ಳ ಅಥವಾ ವಹಿಸಿರುವ ಎಂಬ ಎರಡರ್ಥಗಳೂ ಹೊಂದುತ್ತವೆ. ಸುಪರ್ಣನಾಮಕ ಶ್ರೀಹರಿಯು ಸುಪರ್ಣ (ಗರುಡ)ನಲ್ಲಿದ್ದು, ತನ್ನನ್ನು ತಾನೇ ಹೊತ್ತಿರುವನು. ವಾಹ್ಯ–ವಾಹಕ, ಉಭಯವೂ ತಾನೇ ಆಗಿರುವಂಥ – **ಶ್ರೀಹರಿಯು.**[೬]

---

೪. ಭಾವಪ್ರಕಾಶಿಕಾ

೫. ಶ್ರೀವಿಷ್ಣುಸಹಸ್ರನಾಮಸ್ತೋತ್ರಕ್ಕೆ – ಉಡುಪಿ ಫಲಿಮಾರು ಮಠದ ಟೀಕೆ. ನಾಮ –೧– **"ವಿಶ್ವಂ"** ಈ ನಾಮಕ್ಕೆ ಪುಟ – ೫

೬. ಶ್ರೀ ಜಗನ್ನಾಥದಾಸಾರ್ಯವಿರಚಿತ "ತತ್ವಸುವ್ವಾಲಿಗೆ ಟಿಪ್ಪಣಿಗ್ರಂಥ ಶ್ರೀಹರಿದಾಸ ಭಾರತಿಯ– "ವಿಜಯಾಂಕರತ್ನ–೭" ರ ಪುಟ–೪೩



**೧೦. ಗುಡಾಳಕ**

ಗುಡಾಳಕ=ಗುಂಗುರುಗುಂಗುರಾದ ಮುಂಗುರುಳು.[೭]

ಮುಂಗುರುಳು ಗುಂಗುರು ಗುಂಗುರಾಗುಳ್ಳ ಶ್ರೀ ಕೃಷ್ಣಾವತಾರದ – **ಶ್ರೀಹರಿಯು.**

ಹೊಳೆವ ಕಪೋಲ ನಾಸಭ್ರೂಲತಾ ಶುಭ ಎಳೆನಗೆ ಅರುಣಾಂಬುಜ ನೇತ್ರ ಲಲಿತ ಗುಡಾಳಕ ಯುತವಕ್ತ್ರ ಬಲುಚೆಲುವ ನೋಡುವವೆನ್ನಯನೇತ್ರ ॥ ೧೨ ॥[೮]

**೧೧. ಅಖಿಳ ಶರಣ ಜನ ಸುರಧೇನು**

ಅಖಿಳ = ಎಲ್ಲ; ಸುರ=ದೇವ; ಧೇನು= ಆಕಳು, ಬೇಡಿದ್ದನ್ನು ಕೊಡು–ವಂಥ ದೇವಲೋಕದ ಆಕಳು...ಕಾಮಧೇನು.

ತನಗೆ ಶರಣಾಗತರಾದವರಿಗೆ ಬೇಡಿದ್ದನ್ನು ಕೊಡುವಂಥ–ಕಾಮಧೇನು–ವಿನಂತೆ – ಅವರ ಇಚ್ಛೆಯನ್ನು ಈಡೇರಿಸುವಂಥ – **ಶ್ರೀಹರಿಯು**

**೧೨. ಸುರಮಣಿ**

ದೇವತೆಗಳಲ್ಲಿ ಶ್ರೇಷ್ಠನಾದಂಥ – **ಶ್ರೀಹರಿಯು.**

**೧೩. ಕರುಣಸಾಗರ**

ಸಮುದ್ರದಂತೆ ವಿಶಾಲವಾದ ಕಾರುಣ್ಯ ಹೃದಯವುಳ್ಳಂಥ – **ಶ್ರೀ ಹರಿಯು.**

**೧೪. ಕಾಮಿತಾರ್ಥದ**

ಕಾಮಿತ = ಇಚ್ಛಿತ ಅರ್ಥ=ಪುರುಷಾರ್ಥ

(೧) ಧರ್ಮ (೨) ಅರ್ಥ –ಧನಕನಕಾದಿಗಳು (೩) ಕಾಮ–ಇಚ್ಛೆ (೪) ಮೋಕ್ಷ – ಈ ಬಗೆಯ ನಾಲ್ಕು ಇಚ್ಛೆಗಳಲ್ಲಿ ಬೇಡಿದ್ದನ್ನು ದಯದಿಂದ ಪೂರೈಸಿಕೊಡುವಂಥ – **ಶ್ರೀಹರಿಯು.**

**೧೫. ದುರಿತಗಜಸಿಂಹ**

ದುರಿತ=ಪಾಪ, ಗಜ=ಆನೆ

ಆನೆಗೆ ಶತ್ರುವಾದ ಸಿಂಹದಂತೆ, ಭಕ್ತರ ಪಾಪವನ್ನು ನಾಶಮಾಡುವಂಥ – ಶ್ರೀಹರಿಯು

**೧೬. ಸರಸಿಜಾಸನ ಸೇವ್ಯ –**

ಸರಸ್ಸು+ಜ+ಆಸನ+ಸೇವ್ಯ

ಕೆರೆ+ಹುಟ್ಟಿದ್ದು ಕಮಲ. ಸರಸಜಾಸನ = ಕಮಲವೇ ಪೀಠವಾಗಿ ಉಳ್ಳವ = ಬ್ರಹ್ಮ

---

೭. ಕನ್ನಡ ಅಧ್ಯಯನ ಸಂಸ್ಥೆ – ಮೈಸೂರ ವಿಶ್ವವಿದ್ಯಾಲಯದ–ಶ್ರೀಪ್ರಸನ್ನ ವೆಂಕಟದಾಸರ ಭಾಗವತದ ಅರ್ಥವಿವರಣೆಯ ಪುಟ – ೧೫೪

೮. ಮೈಸೂರ ವಿಶ್ವವಿದ್ಯಾಲಯದ – ಕನ್ನಡ ಅಧ್ಯಯನ ಸಂಸ್ಥೆಯ –ಪ್ರಸನ್ನವೆಂಕಟದಾಸರ ಭಾಗವತ ಕೀರ್ತನೆ – ೫೫ ರ ನುಡಿ ೧೨ ಪುಟ ೯೮.

ತನ್ನ ನಾಭಿ ಕಮಲದಲ್ಲಿಯೇ ಕುಳಿತಂಥ ಬ್ರಹ್ಮದೇವನಿಂದ ಸೇವೆ ಪಡೆಯುವಂಥ – **ಶ್ರೀಹರಿಯು.**

**೧೭. ಮುಕ್ತಾಭರಣ ನಮಿತ**

"ಮುಕ್ತಿ" ಎಂಬ ಆಭರಣ ಪಡೆದಂಥ – ಎಂದರೆ ಮುಕ್ತಿಗೆ ಯೋಗ್ಯರಾದ ಸುಜೀವಿಗಳಿಂದ ವಂದಿತನಾದಂಥ – **ಶ್ರೀಹರಿಯು.**

**೧೮ ಸುರೇಶ**

ಸುರ+ಈಶ. ಸುರ=ದೇವತೆಗಳು; ಈಶ = ಒಡೆಯ

ದೇವತೆಗಳ ಒಡೆಯನಾದಂಥ – **ಶ್ರೀಹರಿಯು.**

**೧೯. ನಿಶಾಚರಹರಣ ಶೀಲ**

ನಿಶ=ರಾತ್ರಿ; ಚರ=ತಿರುಗಾಡುವವರು. ನಿಶಾಚರ = ರಾತ್ರಿಯಲ್ಲಿ ತಿರುಗಾಡುವವರು = ರಾಕ್ಷಸರು. ಹರಣ = ಸಂಹರಿಸು; ಶೀಲ = ಚಾರಿತ್ರ = ಕರ್ತವ್ಯ

ರಾಕ್ಷಸರ ಸಂಹಾರವೇ ತನ್ನ ಶೀಲ = ಕರ್ತವ್ಯವೆಂದು ತಿಳಿದು ನಡೆದುಕೊಳ್ಳುವಂಥ – **ಶ್ರೀ ಹರಿಯು.**

**೨೦. ಸದಾಗಮಜ್ಞೇಯ**

ಸತ್+ಆಗಮ+ಜ್ಞೇಯ

ಆಗುಮಗಳಿಂದ ಮಾತ್ರವೇ ತನ್ನನ್ನು ವಿಷದಪಡಿಸಿಕೊಳ್ಳುವಂಥ – **ಶ್ರೀಹರಿಯು.**

**ಸದಾಗಮೈಕ ವಿಜ್ಞೇಯಂ ಸಮತೀ, ಶೇಕ್ಷರಾಕ್ಷರಮ್**
**ನಿರ್ದೋಪಾಕೇಕ್ಷಸದ್ಗುಣಮ್** ॥[೯]

**೨೧. ಆದಿಪುರುಷ**

ಆದಿ=ಮೊದಲ ; ಪುರುಷ

ಪುರುಷ – (೧) ಮಹತ್ತತ್ವಾದಿ ಸೃಷ್ಟಿ ಮಾಡಿದ ರೂಪ

(೨) ಸೃಷ್ಟಿಸಿದ ಬ್ರಹ್ಮಾಂಡದೊಳಗೆ ಹೊಕ್ಕ ರೂಪ

(೩) ಬ್ರಹ್ಮಾಂಡದ ಸಕಲದೇಹಿಗಳ ದೇಹದಲ್ಲಿರುವ ರೂಪ.

ಜಗತ್ತಿನ ಉತ್ಪತ್ತಿಗಿಂತಲೂ ಮೊದಲಿದ್ದುಕೊಂಡು, ಬ್ರಹ್ಮಾಂಡವನ್ನು ಸೃಷ್ಟಿಸಿ, ಅದರಲ್ಲಿ ಪ್ರವೇಶಿಸಿ, ಅದರಲ್ಲಿದ್ದ ಎಲ್ಲ ದೇಹಿಗಳ ದೇಹದಲ್ಲಿಯೂ ಇದ್ದುಕೊಂಡು, ಯಾವಾಗಲೂ ಶೃತಿತತಿಗಳ ಸಮೂಹದಿಂದ ತಿಳಿಯಲ್ಪಡುವ ಆದಿ ಪುರುಷನಾದಂಥ – **ಶ್ರೀಹರಿಯು**[೧೦].

---

೯. ಶ್ರೀ ಆನಂದತೀರ್ಥಭಗವತ್ಪಾದಾಚಾರ್ಯ ವಿರಚಿತ – ವಿಷ್ಣು ತತ್ವವಿನಿರ್ಣಯಕ್ಕೆ ಟೀಕಾಚಾರ್ಯ ಬರೆದ ಮಂಗಲ ಶ್ಲೋಕ.

೧೦. ವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಟೀಕೆ – "ಪುರುಷ" ನಾಮಕ್ಕೆ ಪುಟ – ೬೧–೬೨



**ವಿಶ್ವಗರ್ಭ ವಿಚಿತ್ರ ಚರಿತ್ರ ಶು –** ।
**ಭಾಶ್ವವದನ ವಿಶಾಲ, ವಿಕ್ರಯ** ।
**ಶಶ್ವದೇಕ ಸುವ್ಯಾಪ್ತ ಜ್ಞಾನ್ನಾನಂದ ಬಲಪೂರ್ಣ** ॥
**ನಶ್ವರೇಶ್ವರ ಸವಿತರೇಶ್ವರ** ।
**ಈಶ್ವರೇಶ್ವರ ವೇದಗೋಚರ** ।
**ಸುಸ್ವಭಾವ, ನವಾಂಬುದಾಂಗ ಕೃಪಾಳು ಕೃಷ್ಣ ನಮೋ** ॥ ೨ ॥

**೨೨. ವಿಶ್ವಗರ್ಭ**

(೧) ಪ್ರಳಯಕಾಲದಲ್ಲಿ ಎಲ್ಲ ವಿಶ್ವವನ್ನೂ ತನ್ನ ಹೊಟ್ಟೆಯಲ್ಲಿಧರಿಸಿಕೊಳ್ಳವಂಥ – **ಶ್ರೀಹರಿಯು.**

(೨) ಮೃತ್ತಿಕೆಯ ತಿನ್ನಲಿಲ್ಲ ಬಾಯ ನೋಡೆಂದ

**ಶ್ರೀಕೃಷ್ಣನ ಬಾಯೊಳಗೆ ಹದಿನಾಲ್ಕು ಲೋಕಕಂಡು** ॥
**ಪ್ರಾದುರ್ಭೂತನಾದ ಪರಮಾತ್ಮನೆಂದಳು** ॥
**ತನ್ನಕಂಡು ಯಶೋದೆ ತಳಕಿಸಿದಳು** ॥
**ಮುದ್ದು ಕೃಷ್ಣನ ಬಾಯೊಳಗೆ ಬಿದ್ದೆನು ತಾನೆನುತ** ।[೧೧]

**೨೩. ವಿಚಿತ್ರ ಚರಿತ**

ದುಷ್ಟ ಶಿಕ್ಷಕತ್ವ_ಶಿಷ್ಟ ಪರಿಪಾಲಕತ್ವ_ತನ್ನನ್ನು ಅನನ್ಯವಾಗಿ ಚಿಂತಿಸಿದಂಥ (೧) ಅರ್ಜುನನ ರಥದ ಕುದುರೆಗಳ ಮೈತೊಳೆದು, ಅವುಗಳಿಗೆ ಮೇವು ಹಾಕಿ ಮೇಯಿಸಿದಂಥ; ಹಾಗೂ (೨) ಬಲಚಕ್ರವರ್ತಿಯ ಮಹಾದ್ವಾರದಲ್ಲಿ ಗದಾಧಾರಿಯಾಗಿ ದ್ವಾರಪಾಲಕನಾಗಿರುವಂಥ ಸೇವೆಯನ್ನು ಮಾಡುವ ವಿಚಿತ್ರ ನಡತೆಯುಳ್ಳಂಥ – **ಶ್ರೀಹರಿಯು.**

**೨೪. ಶುಭಾಶ್ವವದನ**

ಶುಭ+ಅಶ್ವ+ವದನ. ಅಶ್ವ=ಹಯ=ಕುದುರೆ

ತನ್ನ ಭಕ್ತರಿಗೆ ಯಾವಾಗಲೂ ಶುಭವನ್ನುಂಟು ಮಾಡುವ ಹಯವದನನಾದಂಥ – **ಶ್ರೀಹರಿಯ**

**೨೫. ವಿಶಾಲವಿಶ್ರಯ**

ವೈಕುಂಠ, ಅನಂತಾಸನ, ಶ್ವೇತದ್ವೀಪ ಈ ಮೂರೂ ಲೋಕಗಳಲ್ಲಿ ವಿಶ್ರಯಿಸಿ ಕೊಂಡು_ವಿಶಾಲವಿಶ್ರಯ ನೆನಿಸಿಕೊಂಡಂಥ – **ಶ್ರೀಹರಿಯು**

**೨೬. ಶಶ್ವದೇಕ**

ಶಶ್ವತ್– ಸದಾಕಾಲದಲ್ಲಿ ಏಕ=ಒಂದೇರೂಪ, ಒಂದೇ ಬಗೆ, ಯಾವಾಗಲೂ ಒಂದೇ ಪ್ರಕಾರ – ಎಂದರೆ–ಬಾಲ್ಯಯೌವ್ವನ ವೃದ್ಧಾಪ್ಯವಿಲ್ಲದೆ–ಇದ್ದಂಥ–**ಶ್ರೀಹರಿಯು.**

**೨೭. ಸುವ್ಯಾಪ್ತ**

ನಾರಾಯಣನು ಸರ್ವತ್ರ ವ್ಯಾಪ್ತನು. ಅಣುರೇಣುತೃಣಕಾಷ್ಠಗಳಲ್ಲಿ ಪರಿಪೂರ್ಣನಾಗಿ

---

೧೧. (೨) ಕ್ಕೆ – ವಾದಿರಾಜಕೃತ ಶ್ರೀಕೃಷ್ಣಬಾಲಲೀಲೆ – ಪೂರ್ವಾರ್ಧ ನುಡಿ–೩೨೮ ರಿಂದ ೩೮೨

ಸರ್ವತ್ರ ವ್ಯಾಪ್ತನಾಗಿರುತ್ತಾನೆ. ಹೀಗೆ ವ್ಯಾಪ್ತನಾದ ಶ್ರೀಹರಿಯ ವ್ಯಾಪ್ತಿರೂಪಗಳು ಮೂರೆಂದು ಶಾಸ್ತ್ರಗಳು ಹೇಳುತ್ತವೆ. "ಪ್ರಥಮಂ ಮಹತಃ ಸೃಷ್ಟಂ ದ್ವಿತೀಯಂ ತ್ವಂಡಸಂಸ್ಥಿತಂ/ತೃತೀಯಂ ದೇಹಿನಾ ದೇಹಿ ತಾನಿ ಜ್ಞಾತ್ವಾ ವಿಮುಚ್ಯತೆ' ಎಂಬ ಸ್ಮೃತಿಯಿಂದ ಬ್ರಹ್ಮದೇವನಲ್ಲಿರುವ ಮಹತ್ತತ್ವವನ್ನು ಸೃಷ್ಟಿಮಾಡಿರುವದೊಂದು ಶ್ರೀಹರಿರೂಪ, ಬ್ರಹ್ಮಾಂಡದಲ್ಲಿರುವುದೊಂದು ಶ್ರೀಹರಿರೂಪ, ಸಕಲ ಜೀವರ ದೇಹಗತವಾದ ಶ್ರೀಹರಿರೂಪ ಹೀಗೆ ಮೂರು ರೂಪಗಳಿಂದ ಸರ್ವತ್ರ ವ್ಯಾಪ್ತನಾಗಿ, ಸುವ್ಯಾಪ್ತನೆನಿಸಿಕೊಂಡಂಥ – **ಶ್ರೀಹರಿಯು.**[೧೨]

**೨೮. ಜ್ಞಾನಾನಂದ**

(೧) ಪರಮಾತ್ಮನ ಸ್ವರೂಪಕ್ಕೂ ಗುಣಗಳಿಗೂ ಯಾವ ಭೇದವೂಇಲ್ಲ. ಜ್ಞಾನ, ಆನಂದ ಮೊದಲಾದ ಗುಣಗಳು ಪರಸ್ಪರ ಅಭಿನ್ನಗಳೂ ಆದವುಗಳು, ಜ್ಞಾನದಲ್ಲಿ ಆನಂದವೂ, ಆನಂದದಲ್ಲಿ ಜ್ಞಾನವೂ_ಸಕ್ಕರೆಯಲ್ಲಿ ಸಿಹಿಯೂ, ಸಿಹಿ ಪದಾರ್ಥಗಳಲ್ಲಿ ಸಕ್ಕರೆಯೂ ಇದ್ದಂತೆ_ಇರುವವು; ಹಾಗೆಯೇ ಇತರ ಸಕಲ ಗುಣಗಳೂ ಇರುವವು. ಜ್ಞಾನವೇ ಆನಂದವು; ಆನಂದವೇ ಜ್ಞಾನವೂ ಎಂದು ಸಹ ಅರ್ಥ.

(೨) ಸುಜ್ಞಾನ, ಪ್ರಜ್ಞಾನ, ವಿಜ್ಞಾನಗಳೆಂಬವು ಜ್ಞಾನಪ್ರಭೇದಗಳು. ಪರಮಾತ್ಮನಲ್ಲಿರುವ ಜ್ಞಾನಾದಿ ಪ್ರಭೇದಗಳಲ್ಲಿ ಏನೂ ವಿಶೇಷವಿಲ್ಲ. ಆದರೂ ಜೀವರು ತಮ್ಮ ಯೋಗ್ಯತಾನುಸಾರ ಶ್ರೀಹರಿಯ ಜ್ಞಾನದ ಅಚಿಂತ್ಯ ಮಹಿಮೆಯನ್ನು ಅರಿತುಕೊಳ್ಳಲು ಜ್ಞಾನಾದಿಗಳ ಪ್ರತ್ಯೇಕ ವ್ಯವಹಾರವು ಸಹಾಯಕವಾಗುವದು. ಜ್ಞಾನ–ಸುಜ್ಞಾನಾದಿಗಳ ಪ್ರಾಪ್ತಿಗೂ ಕಾರಣವಾಗುತ್ತದೆ.

(೩) ವಿಷಯವನ್ನು ಗ್ರಹಿಸುವದು **ಜ್ಞಾನ.** ಈ ಲಕ್ಷಣವು ಸು–ಜ್ಞಾನಾದಿಗಳಲ್ಲಿ ಸಹ ಇದ್ದೂ ವಿಶೇಷ ಲಕ್ಷಣಯುಕ್ತವಾಗಿದೆ. **ಸುಜ್ಞಾನ** ವೆಂದರೆ ಯಥಾರ್ಥಜ್ಞಾನ. ಅರ್ಥವೆಂದರೆ ವಸ್ತು ಅಥವಾ ವಿಷಯ. ಅದನ್ನು ಇದ್ದಂತೆ ತಿಳಿಯುವದೇ ಯಥಾರ್ಥಜ್ಞಾನವು. ಸಂಶಯ, ವಿಪರೀತ (ವಿರುದ್ಧ)ಗಳಿಂದ ದೇಹಗತ ನಾಡಿಗಳು, ಪ್ರಾಣಾದಿಗಳ ವ್ಯಾಪಾರ ಇತ್ಯಾದಿಗಳೊಡನೆ ದೇಹವನ್ನು ತಿಳಿಯುವದು – **ಪ್ರಜ್ಞಾನ;** ವಸ್ತು ಸಂಬಂಧವಾದ ಸಕಲ ವಿಶೇಷ ಧರ್ಮಗಳನ್ನು ತಿಳಿಯುವದು – **ವಿಜ್ಞಾನ.** ತಿಳಿಯುವ ಶಕ್ತಿ. ಎಂಬ ಜ್ಞಾನವು ಚೇತನರ ಸಾಮಾನ್ಯ ಲಕ್ಷಣವು. ಮುಕ್ತಿಯೋಗ್ಯ ಚೇತನರು ಜ್ಞಾನ ಉಳ್ಳವರು, ಸಾತ್ವಿಕ ಸ್ವಭಾವದ ಚೇತನರು ಸುಜ್ಞಾನವುಳ್ಳವರು; ದೇವತೆಗಳು (ಅದರಲ್ಲಿಯೂ ತತ್ವಾಭಿಮಾನಿಗಳು) ಪ್ರಜ್ಞಾನವುಳ್ಳವರು; ಋಜುಗಣದ ಬ್ರಹ್ಮಾದಿಗಳು ವಿಜ್ಞಾನಿಗಳು; ಬ್ರಹ್ಮಾದಿಗಳಿಗಿಂತ ಅಧಿಕವಾಗಿ ಸಕಲ ವಸ್ತುಗಳನ್ನು ಅಶೇಷ ವಿಶೇಷಗಳೊಂದಿಗೆ ತಿಳಿದಿರುವ ವಿಲಕ್ಷಣ ವಿಜ್ಞಾನಿಗಳು–ರಮಾ–ನಾರಾಯಣರು; ಇಂಥ – ಶ್ರೀಹರಿಯು.[೧೩]

"ಭಗವಂತನ ತಲೆಗೂದಲೂ ಹಿಡಿದು ಉಗುರಿನ ತುದಿಯವರೆಗೂ ಪೂರ್ಣ ಜ್ಞಾನಾನಂದ ಶಕ್ತಿಗಳೇ ತುಂಬಿರುವವು".[೧೪]

೧೨. ಶ್ರೀಹರಿ ವಿಠಲ ಪ್ರಕಾಶನದ_ "ಶ್ರೀಮನ್ಮಧ್ವಮತಸುಧಾ" ದ ಪುಟ ೨೧

೧೩. ಶ್ರೀಜಗನ್ನಾಥದಾಸರ– "ತತ್ವಸುವ್ವಾಲಿ"ಗೆ ವ್ಯಾಖ್ಯಾನ ಶ್ರೀಹರಿದಾಸಭಾರತಿಯ ಗ್ರಂಥ ರತ್ನಮಾಲೆ – "ವಿಜಯಾಂಕ ರತ್ನ–೨" ಪುಟ ೧೨೫ ರಿಂದ ೧೨೮

೧೪. ಬೃಹದಾರಣ್ಯಕೋಪನಿಷತ್ – ಭಾಷ್ಯ 3–5–4



"ಪಾದದ ಉಗುರಿನಿಂದ ಹಿಡಿದು ದೇಹವಿಡೀ ಆನಂದವೇ ತುಂಬಿದೆ. ಆದ್ದರಿಂದ ಆತನ ಕೂದಲೂ ರೋಮವೂ ಆನಂದ ರೂಪವೇ ಆಗಿದೆ; ಎಂದಿದೆ ಮಾಧ್ಯಾನ್ಹ ಶ್ರುತಿ"[೧೫,೧೬]

**೨೯. ಬಲಪೂರ್ಣ**

(೧) ಸಮಗ್ರ ಪ್ರಭುತ್ವ (೨) ಸಾಮರ್ಥ್ಯ (೩) ಯಶಸ್ಸು (೪) ಸ್ವರೂಪ ಸೌಂದರ್ಯ (೫) ಜ್ಞಾನ ಹಾಗೂ (೬) ವಿಜ್ಞಾನ – ಈಆರು ಗುಣಗಳು – **"ಭಗ"** ಎಂದು ಪ್ರಸಿದ್ಧವಾದವುಗಳು. ಅವುಗಳು ಅತ್ಯಧಿಕವಾಗಿಯೂ ಶಾಶ್ವತವಾಗಿಯೂ ಇರುವದರಿಂದ ಭಗವಂತನೆಂದು ಕರೆಯಿಸಿಕೊಳ್ಳುವಂಥ – **ಶ್ರೀಹರಿಯು.**

(೧) "ರಾಮಾಯ ಶಾಶ್ವತ ಸುವಿಸ್ತೃತ ಷಡ್ಗುಣಾಯ.........."

– ಮಹಾಭಾರತ ತಾತ್ಪರ್ಯನಿರ್ಣಯ..................... ॥

(೨) "ಪುಷ್ಪ ಷಾಡ್ಗುಣ್ಯ ಸದ್ವಿಗ್ರಹೊಲ್ಲಾಸಿನಮ್"– ದ್ವಾದಶಸ್ತೋತ್ರ

(೩) ".......... ಅನ್ಯತಮೋ ಮುಕುಂದಾತ್ ।

ಕೋನಾಮ ಲೋಕೇ ಭಗವತ್ಪದಾರ್ಥಃ ॥" – ಶ್ರೀಮದ್ಭಾಗವತ ೧–೧೮–೨೧

ಬಲ ಮತ್ತು ಷಡ್ಗುಣಗಳೇ ಸ್ವರೂಪವಾಗಿಉಳ್ಳವನು, ಹಾಗೂ ಸ್ವತಂತ್ರ ಕರ್ತಾರನಾಗಿರುವವನು[೧೬].

**೩೦. ನಶ್ವರೇಶ್ವರ**

ನಶ್ವರವಾದ ಜಗತ್ತಿಗೆ ಒಡೆಯನಾದಂಥ – **ಶ್ರೀಹರಿಯು**

**೩೧. ಸವಿತರೇಶ್ವರ**

ಶ್ರೀ ಹರಿಯಪ್ರೇರಣೆಯಿಂದಲೇ ಸೂರ್ಯನು ಪರ್ಯಟನ ಮಾಡುವನು ಸೂರ್ಯನಲ್ಲಿರುವ ಸುಡುವ, ಅಡುವ, ಒಣಗಿಸುವ ಹಾಗೂ ಬೆಳಗಿಸುವ ಈ ನಾಲ್ಕು ವಿಧದ ಶಕ್ತಿಗಳೂ ಸೂರ್ಯನಲ್ಲಿ ಸನ್ನಿಹಿತನಾಗಿರುವ ಸೂರ್ಯನಾರಾಯಣನದ್ದೇ. (ಹೊರತು ಸೂರ್ಯನದ್ದಲ್ಲ) ಎಂದು ಪಾದ್ಮಸಿದ್ಧಾಂತಿಸಿದೆ, ಆದ್ದರಿಂದ ಇಂಥ ಸವಿತರೇಶ್ವರನಾದಂಥ[೧೮] – **ಶ್ರೀಹರಿಯು.**

**"ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ ॥ ೧೨ ॥**

೧೫. ಭಾಗವತ ತಾತ್ಪರ್ಯನಿರ್ಣಯ – ೧೦ – ೮೨ –೪೯

೧೬. ವಿಷ್ಣು ಸಹಸ್ರ ನಾಮಸ್ತೋತ್ರಕ್ಕೆ – ಉಡುಪಿ ಫಲಿಮಾರು ಮಠದ ಟೀಕೆ– "ಪೂತಾತ್ಮಾ" ನಾಮಕ್ಕೆ ಪುಟ – ೪೨

೧೭. ವಿಧ್ಯಾಧಿರಾಜೀಯರ–ವಿಷ್ಣುಸಹಸ್ರನಾಮಸ್ತೊತ್ರಕ್ಕೆ–ಟೀಕೆ ಹಾಗೂ ವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ– ಉಡುಪಿ ಟೀಕೆ–ವಕ್ಷಸ್ಕಾರಃ ನಾಮಕ್ಕೆ ಪುಟ ೧೦–೧೧–೧೨

೧೮. ವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೩೯ "ಆದಿತ್ಯಃ" ಈ ನಾಮಕ್ಕೆ ಪುಟ ೧೩೫.

ಸೂರ್ಯನಲ್ಲಿ ಚಂದ್ರನಲ್ಲಿ ಮತ್ತು ಅಗ್ನಿಯಲ್ಲಿರುವ ಯಾವ ಬೆಳಕಿನಶಕ್ತಿ ಇಡೀ ಜಗತ್ತನ್ನು ಬೆಳಗಿಸುತ್ತಿದೆಯೋ ಅದು ನನ್ನ ಅಧೀನವೆಂದು ತಿಳಿ.[೧೯]

**೩೨. ಈಶ್ವರೇಶ್ವರ**

ಬ್ರಹ್ಮನು ಶುದ್ಧ ಮನಸ್ಸಿನಿಂದ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರೆಂಬ ನಾಲ್ವರು ಮುನಿಕುಮಾರರನ್ನು ಸೃಷ್ಟಿಸಿ, ಅವರಿಗೆ ಪ್ರಜೆಗಳನ್ನು ಸೃಷ್ಟಿಸಿ ಪ್ರಪಂಚವನ್ನು ವೃದ್ಧಿಗೊಳಿಸಲು ಹೇಳಿದನು. ತಪೋನಿರತರಾದ ಅವರು ಅಂತಹ ಕಾರ್ಯದಲ್ಲಿ ನಿರತರಾಗಲಾರೆವೆಂದು ಹೇಳಿದ್ದನ್ನು ಕೇಳಿ, ಬ್ರಹ್ಮನಿಗೆ ಕೋಪ ಬಂದಿತು. ಆಗ ಆತನು ಗಂಟಿಕ್ಕಿದ ಹುಬ್ಬುಗಳ ಮಧ್ಯದಿಂದ ಕಪ್ಪು–ಬಿಳುಪು ವರ್ಣಗಳಿಂದ ಕೂಡಿದ ಒಂದು ಕುಮಾರಾಕೃತಿಯು ಉದ್ಭವಿಸಿತು. ಅದಕ್ಕೆ ಬ್ರಹ್ಮನು, ನಿನಗೆ ರುದ್ರನೆಂದು ಹೆಸರಾಗಲಿ. ನೀನು ಚಂದ್ರ, ಸೂರ್ಯ, ವನ್ಹಿ, ವಾಯು, ಜಲ, ಆಕಾಶ, ಭೂಮಿ, ಪ್ರಾಣ, ವನಸ್ಸು, ಹೃದಯ, ಇಂದ್ರಿಯಗಳು ಎಂಬ ಹನ್ನೊಂದು ಸ್ಥಾನಗಳಲ್ಲೂ ಮನ್ಯು, ಮನು, ಮಹಾಕಾಲ, ಮಹಾನ್, ಶಿವ, ಋತುಧ್ವಜ, ಉರುರೇತಸ್ಸು, ಭವ, ಕಾಲ, ವಾಮದೇವ, ಧೃತವೃತ ಎಂಬ ಏಕಾದಶ ನಾಮಗಳಿಂದಲೂ ಧೀ, ವೃತ್ತಿ ಅಶನೆ, ಉಮೆ, ನಿಯತ್ತು, ಸರ್ಪಿ, ಇಲೆ, ಅಂಬಿಕೆ, ಇರಾವತಿ, ಸುಧೆ, ದಕ್ಷೆ ಎಂಬ ಹನ್ನೊಂದು ಮಂದಿ ಪತ್ನಿಯರಿಂದೊಡಗೂಡಿ ಪ್ರಜಾ ಸೃಷ್ಟಿ ಮಾಡು". ಎಂದು ಆದೇಶವಿತ್ತನು. ಇಂಥ ರುದ್ರ ಅಂದರೆ ಈಶ್ವರನಿಗೆ ಈಶ್ವರನು ಅಂದರೆ ಪ್ರಭು ಆದಂಥ[೨೦] – **ಶ್ರೀಹರಿಯು.**

**೩೩. ವೇದಗೋಚರ**

ವೇದ, ಉಪನಿಷತ್ತುಗಳು ಇವುಗಳ ಮೂಲಕ. ತನ್ನ ಹಾಗೂ ತನ್ನ ಕ್ರಿಯೆಗಳ ಬಗ್ಗೆ ಸಾತ್ವಿಕ ಜೀವಿಗಳಿಗೆ ಅವರವರ ಯೋಗ್ಯತೆಗನುಗುಣವಾಗಿ ಅರಿವನ್ನುಂಟು ಮಾಡುವಂಥ – **ಶ್ರೀಹರಿಯು.**

**೩೪. ಸುಸ್ವಭಾವ**

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ಮಹಾಮ್ಯಹಂ ॥** [೨೧]

"ಯಾರು ಅನನ್ಯ ಭಕ್ತಿಯಿಂದ ನನ್ನನ್ನೇ ನೆನೆಯುತ್ತ ನನ್ನ ಗುಣದಗರಿಮೆಯನ್ನು ಉಪಾಸನೆ ಮಾಡುವರೋ, ಎಲ್ಲ ಬಗೆಯಿಂದಲೂ ನನ್ನನ್ನೇ ನಂಬಿರುವ ಅವರ ಯೋಗಕ್ಷೇಮದ ಹೊಣೆಯನ್ನು ನಾನು ಹೊರುತ್ತೇನೆ". ಈ ಬಗೆಯಾಗಿ ತನ್ನ ಭಕ್ತರಿಗೆ ಆಶ್ವಾಸನೆಯನಿತ್ತ_ಸುಸ್ವಭಾವದ – **ಶ್ರೀಹರಿಯು.**

**೩೫. ನವಾಂಬುದಾಂಗ....**

ನವ=ನೂತನ; ಅಂಬುದ = ಮೇಘ, ಅಂಗ = ಶರೀರ.

ನೀರು ತುಂಬಿದ ಹೊಸ ಮೇಘದಂತೆ_ನೀಲವರ್ಣದ ಶರೀರವುಳ್ಳ ಶ್ರೀಕೃಷ್ಣಾವತಾರದ – **ಶ್ರೀಹರಿಯು.**

---

೧೯. ಗೀತಾ ಅಧ್ಯಾಯ ೧೫ ಶ್ಲೋಕ – ೧೨
೨೦. ಶ್ರೀ ಮದ್ಭಾಗವತ – ತೃತೀಯಸ್ಕಾಂಧ – ದ್ವಿತೀಯಾಧ್ಯಾಯ
೨೧. ಶ್ರೀಮದ್ಭಗವದ್ಗೀತ್ ಅಧ್ಯಾಯ೯ ಶ್ಲೋಕ ೨೨



**೩೬. ಕೃಪಾಳು**

ಸಕಲ ಚರಾಚರ ವಸ್ತುಗಳಲ್ಲಿ ಅತ್ಯಂತ ಕೃಪೆಯುಳ್ಳಂಥ – **ಶ್ರೀಹರಿಯು.**

**೩೭. ಕೃಷ್ಣ**

ದ್ವಾಪರ ಯುಗದಲ್ಲಿ ವಿರೋಧಿನಾಮ ಸಂವತ್ಸರ ಶ್ರಾವಣ ಬಹುಳ ಅಷ್ಟಮಿ, ರೋಹಿಣಿ ನಕ್ಷತ್ರ, ವಜ್ರ ನಾಮಯೋಗ, ಬುಧವಾರದಿನ ಅರ್ಧರಾತ್ರಿಯಲ್ಲಿ – ಶ್ರೀಕೃಷ್ಣನು ಅವತರಿಸಿದನು.

**ರೋಹಿಣ್ಯಾಮರ್ಧರಾತ್ರೇತು ಯದಾ ಕೃಷ್ಣಾಷ್ಟಮಿ ಭವೇತ್ ।**
**ಜಯಂತಿ ನಾಮ ಸಾಪ್ರೋಕ್ತಾ ಸರ್ವಪಾಪ ಪ್ರಣಾಶನೀ ॥**

**– ಶ್ರೀ ಮದಾಚಾರ್ಯರು**

ಲೋಕಕಲ್ಯಾಣಕ್ಕಾಗಿಯೂ ಭೂಭಾರ ಹರಣಾರ್ಥವಾಗಿಯೂ ಅವತರಿಸಿದ ಶ್ರೀವಿಷ್ಣುವಿನ ದಶಾವತಾರಗಳಲ್ಲಿ ಪ್ರಸಿದ್ಧವಾದ ಎಂಟನೇಯ ಅವತಾರವಾದ ಶ್ರೀಕೃಷ್ಣವವಾತರದ – **ಶ್ರೀಹರಿಯು.**

ಮೇಘದಂತೆ "ನೀಲ" ಬಣ್ಣ ಹೊಂದಿದ – ಶ್ರೀಕೃಷ್ಣಾವತಾರದ – ಶ್ರೀಹರಿಯು ತನ್ನ ನಿಯಮನ ಸಾಮರ್ಥ್ಯ – ಸೌಂದರ್ಯ – ಮುಂತಾದ ಗುಣಗಳಿಂದ ಅಖಿಲ ಜಗತ್ತನ್ನು ತನ್ನ ಕಡೆಗೆ ಸೆಳೆದುಕೊಂಡಂಥ ಶ್ರೀಕೃಷ್ಣಾವತಾರದ[೨೨] – **ಶ್ರೀಹರಿಯು.**

**ಜನಪ ಮುನಿನುತ ತಾಟಕಾಂತಕ ।**
**ಜನಕಜಾವರ ಲಕ್ಷ್ಮಣಾಗ್ರಜ ।**
**ಜನಕವಾಗ್ವರ ಇಂದ್ರಪೂಜಿತ ಸೂರ್ಯಸುತಪಾಲಾ ॥**
**ದಿನಪ ಕುಲಪತಿ ದೀನವತ್ಸಲ ।**
**ವನಧಿಬಂಧ, ವಿಹಾರ ದಶಶಿರ – ।**
**ಹನನ ಕಾರಣ ಭರತಪಾಲಕ ರಾಮರಾಜ ನಮೋ ॥ ೩ ॥**

**೩೮. ಜನಪ**

ಜನ = ಪ್ರಜಾಜನರು. ಪ = ಪಾಲಿಸು.

ಪ್ರಜಾಪಾಲನೆಯಲ್ಲಿ ಅಗ್ರಗಣ್ಯನೂ, ಆದರ್ಶಪ್ರಾಯನೂ ಆದಂಥ – ಶ್ರೀರಾಮಾವತಾರದ – **ಶ್ರೀಹರಿಯು.**

**೩೯. ಮುನಿನುತ** – ಮುನಿಗಳಿಂದ ಹೊಗಳಿಸಿಕೊಳ್ಳುವಂಥಹ **ಶ್ರೀ ಹರಿಯು.**

**೪೦. ತಾಟಕಾಂತಕ**

ದಂಡಕಾರಣ್ಯದಲ್ಲಿ ರಾಕ್ಷಸರ ಸಮೂಹವು ಋಷಿ ಮೊದಲಾದ ಸಜ್ಜನರನ್ನು ಹಿಂಸಿಸುತ್ತಿತ್ತು. ಈ ರಾಕ್ಷಸರ ಕುಲವನ್ನು ಸಮೂಲ ನಿರ್ಮೂಲನೆ ಮಾಡಬೇಕೆಂಬ ನಿಮಿತ್ತದಿಂದ ವಿಶ್ವಾಮಿತ್ರನು ತನ್ನ ಯಜ್ಞಕಾಯಲು ಅಯೋಧ್ಯೆಯ ಅರಸನಾದ ದಶರಥ ಮಹಾರಾಜದಲ್ಲಿ ರಾಮಲಕ್ಷ್ಮಣರನ್ನು ಯಾಚಿಸಿದನು. ಇದನ್ನು ಕೇಳಿ ದಶರಥ ಮಹಾರಾಜನು ಮಕ್ಕಳೆಂಬ ಮಮಕಾರದಿಂದ ಮೂರ್ಛೆಗೊಂಡನು; ಆದರೆ ಕುಲಗುರುಗಳಾದ ವಶಿಷ್ಠರ ಹಿತೋಪದೇಶದಿಂದ

---

೨೨. ಶ್ರೀವಿಷ್ಣು ಸಹಸ್ರನಾಮಸ್ತೋತ್ರಕ್ಕೆ ಉಡುಪಿಟೀಕೆ, ನಾಮ – ೫೮ "ಕೃಷ್ಣ" ಈ ನಾಮಕ್ಕೆ ಪುಟ – ೧೯೭

ವಿಶ್ವಾಮಿತ್ರಮುನಿಯ ಯಾಚನೆಯನ್ನೊಪ್ಪಿಕೊಂಡು, ಆ ಮುನಿಯ ಸಂಗಡ ಬಾಲಕರಾದ ರಾಮಲಕ್ಷ್ಮಣರನ್ನು ಕಳುಹಿಕೊಟ್ಟನು. ದಂಡಕಾರಣ್ಯದಲ್ಲಿಯ ತ್ರಾಟಿಕಾವನದಲ್ಲಿ ಯಾಗರಕ್ಷಣೆಯಲ್ಲಿ ನಿರತನಾದ ಶ್ರೀ ರಾಮನಿಂದ ತ್ರಾಟಿಕೆಯು ಹತಳಾದಳು. ಯಜ್ಞ ನಾಶಕ್ಕೆ ಬಂದ ಸುಬಾಹು ಎಂಬ ರಕ್ಕಸನೂ ಹತನಾದನು. ಹಾಗೂ ಅವನಿಗಿಂತಲೂ ಮೊದಲು ಮಾರೀಚನೆಂಬವನನ್ನೂ ಬಾಣದಿಂದ ಹೊಡೆದು ಸಮುದ್ರದಲ್ಲಿ ಕೆಡಹಿದ್ದನು. ಹೀಗೆ ವಿಶ್ವಾಮಿತ್ರ ಮುನಿಯ ಯಜ್ಞಕಾಲಕ್ಕೆ ಬಂದ ಎಲ್ಲ ರಕ್ಕಸರನ್ನು ಕೊಂದು ದಂಡಕಾರಣ್ಯವನ್ನು ಋಷಿ ಜನರಿಗೆ ನಿರ್ಭಯವಾದ ಸ್ಥಾನವನ್ನಾಗಿ ಮಾಡಿಕೊಟ್ಟಂಥ ರಾಮಾವತಾರದ,[೨೩] – **ಶ್ರೀಹರಿಯು.**

**೪೧. ಜನಕಜಾವರ**

ಜನಕ+ಜಾ = ಜನಕಮಹಾರಾಜನ ಪುತ್ರಿ – ಲಕ್ಷ್ಮೀದೇವಿಯ ಅವತಾರವಾದ – ಸೀತಾದೇವಿ. ಜನಕಜಾವರ = ಅಥ ಸೀತಾದೇವಿಯ ವಲ್ಲಭ – ಶ್ರೀರಾಮ.

ವಿಶ್ವಾಮಿತ್ರ ಮುನಿಯ ಯಾಗ ರಕ್ಷಣೆಗೆಂದು ತನ್ನ ತಮ್ಮನಾದ ಲಕ್ಷ್ಮಣನೊಡಗೂಡಿ ದಂಡಕಾರಣ್ಯದ ತ್ರಾಟಿಕಾವನಕ್ಕೆ ಹೋದ ಶ್ರೀರಾಮನ ಯಾಗಸಮಾಪ್ತಿಯ ನಂತರ ವಿಶ್ವಾಮಿತ್ರನೊಡಗೂಡಿ ಮಿಥಿಲಾ ಪಟ್ಟಣದಲ್ಲಿ ಜನಕ ಮಹಾರಾಜನು ಏರ್ಪಡಿಸಿದ ಸೀತಾ ಸ್ವಯಂವರಕ್ಕೆ ಬಂದು, ಆ ಸ್ವಯಂವರಕ್ಕೆ ಆಗಮಿಸಿದ ರಾಜ ಮಹಾರಾಜರ ಸಭೆಯಲ್ಲಿ ಶಿವಧನುಸ್ಸನ್ನು ಮುರಿದು ಶ್ರೀಮಹಾಲಕ್ಷ್ಮೀಯ ಅವತಾರ ರೂಪಳಾದ ಸೀತಾದೇವಿಯನ್ನು ವರಿಸಿದ ಶ್ರೀರಾಮಾವತಾರದ – **ಶ್ರೀಹರಿಯು.**

**೪೨. ಲಕ್ಷ್ಮಣಾಗ್ರಜ**

(೧) ಶೇಷೋಽನಂತೋ ನರಶ್ಚೈವ "ಲಕ್ಷ್ಮಣೋ" ಬಲ ಏವಚ ।
ಸಂಕರ್ಷಣೋ ನೀಲವಾಸಾ ಜಗದ್ಭಕ್ಷೋ ಜಲೇಶಯಃ । ಭಾಗವತ ತಾತ್ಪರ್ಯ

ಹೀಗೆ ಲಕ್ಷ್ಮಣನು ಶೇಷಾವತಾರಿಯು

(೨) "ಸಾತ್ವತಾಂ ನವಮೂರ್ತಿನಾಮಾದಿ ಮೂರ್ತಿರಹಂ ಪುರೇತಿ ।"

**– ಭಾಗವತ ಏಕಾದಶಸ್ಕಾಂಧ**

**"ವಿಷ್ಣೋಃ ಶ್ರೀಯೋ ಬ್ರಹ್ಮಣಶ್ಚ. ವಾಯೋಃ ಸಂಕರ್ಷಣಸ್ಯೇಚ ।**
**ಸುಪರ್ಣಸ್ಯಚ ಸಂಪ್ರೋಕ್ತಾ ಪ್ರತ್ಯೇಕಂ ನವಮೂರ್ತಯಃ ॥**
**ಪೂಜ್ಯಾಃ ಸಾತ್ವತ ತತ್ರೇಷ, ತತ್ರಾದ್ಯಾ ಮೂರ್ತಯಃ ।**
**ಹೀಗೆ ಶೇಷಾವತಾರಿಯಾದ ಲಕ್ಷ್ಮಣನಿಗೆ ಹಿರಿಯ ಅಂದರೆ ಶ್ರೇಷ್ಠನಾದಂಥ –**
**ಶ್ರೀರಾಮಾವತಾರದ [೨೪] – ಶ್ರೀ ಹರಿಯು.**

**೪೩. ಜನಕ ವಾಗ್ವರ**

ವಾಕ್+ವರ = ವಾಗ್ವರ; ವಾಗ್ವರ+ಜನಕ = ವಾಗ್ವರ ಜನಕ

೨೩. ಹುಲಗಿ ಶ್ರೀನಿವಾಸಾಚಾರ್ಯ ಕೃತ "ಶ್ರೀಲಘುರಾಮಾಯಣಂ"ದ ವಾದಿರಾಜಾಚಾರ್ಯ ಅಗ್ನಿಹೋತ್ರಿಕೃತ ಕನ್ನಡ ಅನುವಾದ ಪುಟ ೫ ರಿಂದ; ಶ್ಲೋಕ ೧೧ ರಿಂದ ೨೧ ರ ಸಾರಾಂಶ.

೨೪. ಶ್ರೀ ವಿ.ಸ.ನಾ ಸ್ತೋತ್ರಕ್ಕೆ ಶ್ರೀ ಸತ್ಯಸಂಧರಟೀಕೆ ನಾಮ ೫ ॥ "ಸ್ವಾತ್ವತಾಂ ಪತಿಃ" ಈ ನಾಮಕ್ಕೆ



ಪದಗಳ ಸ್ಥಾನ ಪಲ್ಲಟದಿಂದ **"ಜನಕ ವಾಗ್ವರ"**

ವಾಗ್ವಾಣೀ ಭಾಷಾ ಸರಸ್ವತಿ । ಅಮರಕೋಶ

ವಾಕ್–ಸರಸ್ವಾತಿ; ವರ – ವಲ್ಲಭ. ವಾಗ್ವರ = ಬ್ರಹ್ಮ

ಜನಕವಾಗ್ವರ = ಬ್ರಹ್ಮದೇವರ ಜನಕ

ಶ್ರೀ ಹರಿಯ ನಾಭಿಕಮಲ್ಲದಲ್ಲಿಯೇ ಚತುರ್ಮುಖ ಬ್ರಹ್ಮನು ಹುಟ್ಟಿರುವನಾದ್ದರಿಂದ ಬ್ರಹ್ಮನ ತಂದೆಯಾದಂಥ – **ಶ್ರೀಹರಿಯು.**

**೪೪. ಇಂದ್ರ ಪೂಜಿತ....**

ಸುರರರಸನಾದ ಇಂದ್ರನಿಂದ ಪೂಜೆಗೊಂಡಂಥ – **ಶ್ರೀಹರಿಯು**

ನಾಮ–೭೮ ಶಕ್ತ ಅರ್ಜಿತ ಪದಾಬ್ಜ–ನೋಡಿರಿ

**೪೫. ಸೂರ್ಯಸುತಪಾಲಾ**

ರಾಮಾವತಾರದಲ್ಲಿ, ವಾಲಿಯನ್ನು ನಿಗ್ರಹಿಸುವೆನೆಂದು ಸುಗ್ರೀವನಿಗೆ ವಚನ ಕೊಟ್ಟಂತೆ, ಶ್ರೀರಾಮನು ವಾಲಿಗೆ ಬಾಣಬಿಟ್ಟು, ಹೊಡೆದ ಕಾಲಕ್ಕೆ ವಾಲಿಯು "ನನ್ನನ್ನು ಯಾವ ಅಪರಾಧಕ್ಕಾಗಿ ಈ ಶಿಕ್ಷೆ ವಿಧಿಸಿದೆ?" ಎಂದು ಕೇಳಲಾಗಿ ಶ್ರೀರಾಮನು, "ಈ ಅವತಾರದಲ್ಲಿ ಸೂರ್ಯಸುತನಾದ ಸುಗ್ರೀವನನ್ನು ಪಾಲಿಸಿ; ಇಂದ್ರ ಸುತನಾದ ನಿನ್ನನ್ನು ಸಾಯಿಸಿದೆ. ಮುಂದಿನ ಅವತಾರದಲ್ಲಿ ಇಂದ್ರಸುತ ಅರ್ಜುನನಾಗಿ ಹುಟ್ಟುವ ನಿನ್ನಿಂದ, ಸೂರ್ಯಸುತ ಕರ್ಣನಾಗಿ ಹುಟ್ಟುವ ಸುಗ್ರೀಮನನ್ನು ಕೊಲ್ಲಿಸುವೆನು." ಎಂದು ವಚನಕೊಟ್ಟಂಥ – ಶ್ರೀರಾಮಾವತಾರದ[೨೫] – **ಶ್ರೀಹರಿಯೂ.**

**೪೬. ದಿನಪಕುಲಪತಿ**

ದಿನಪ = ಸೂರ್ಯ, ದಿನಪಕುಲ=ಸೂರ್ಯವಂಶ

ದಿನಪ ಕುಲಪತಿ = ಸೂರ್ಯವಂಶದ ಅರಸು

ಸೂರ್ಯವಂಶದ ಅರಸನಾಗಿ ಅವತರಿಸಿದ ಶ್ರೀರಾಮಚಂದ್ರವತಾರಿಸಿದ – **ಶ್ರೀಹರಿಯು**

**೪೭. ದೀನವತ್ಸಲ**

ದೀನರ ಬಗ್ಗೆ ವಾತ್ಸಲ್ಯ – ಮಮತೆಯುಳ್ಳಂಥ – **ಶ್ರೀಹರಿಯು.**

**೪೮. ವನಧಿ ಬಂಧ ವಿಹಾರ**

ವನ=ಜಲ, ವನಧಿ ಸಮುದ್ರ, ಬಂಧ – ಕಟ್ಟು

ತನ್ನ ಕಪಿಸೇನೆ ಸಹಿತ. ರಾವಣನ ಮೇಲೆ ದಂಡೆತ್ತಿ ಯುದ್ಧಕ್ಕೆ ಹೊರಟ ಶ್ರೀರಾಮನು ಸಮುದ್ರಕ್ಕೆ ನಳ, ನೀಲ ಮೊದಲಾದ ವಾನರರಿಂದ ಸೇತುವೆ ಕಟ್ಟಿಸಿ, ಸಕಲ ವಾನರ ಸೇನೆಯೊಂದಿಗೆ ಆ ಸೇತುವೆಯ ಮೂಲಕ ಸಮುದ್ರ ದಾಟಿ ಲಂಕಾಪಟ್ಟಣಕ್ಕೆ ತಲುಪಿದಂಥ – ಶ್ರೀ ರಾಮಾವತಾರದ – **ಶ್ರೀಹರಿಯು.**

**೪೯. ದಶಶಿರ ಹನನಕಾರಣ**

ದಶಶಿರ = ಹತ್ತುತಲೆಯ = ರಾವಣ; ಹನನ = ಕೊಲ್ಲು.

೨೫. ವಿಷ್ಣು ಪುರಾಣ.

ಹತ್ತು ತಲೆಯ ರಾವಣಾಸುರನ ಸಾವಿಗೆ ಕಾರಣನಾದಂಥ – ಶ್ರೀರಾಮಾವತಾರದ – **ಶ್ರೀಹರಿಯು.**

**೫೦. ಭರತ ಪಾಲಕ**

ದಶರಥ ಮಹಾರಾಜನ ಇಚ್ಛೆಗನುಸರಿಸಿ ಕುಲಗುರೂವೂ ದೇವಗುರುವೂ ಆದ ವಸಿಷ್ಠರ ಅನುಮತಿಯಿಂದ ಶ್ರೀರಾಮನ ಪಟ್ಟಾಭಿಷೇಕದ ಸಕಲ ಸಿದ್ಧತೆ ನಡೆದುದನ್ನು ತಿಳಿದು ಕೈಕೆಯಿಯು, ಕಲಿಪತ್ನಿಯಾದ ಅಲಕ್ಷ್ಮೀ ಸ್ವರೂಪಳಾದ ಮಂಥರೆಯೆಂಬ ದಾಸಿಯ ಆಪ್ತಾಲೋಚನೆಗೆ ಕಿವಿಗೊಟ್ಟು, ತಾನು ಈ ಮೊದಲು ಪಡೆದ ಎರಡು ವರಗಳನ್ನು ದಶರಥ ಮಹಾರಾಜನಿಂದ ಈಡೇರಿಸಿಕೊಳ್ಳಬಯಸಿದಳು. ದೇವದೈತ್ಯರಲ್ಲಿ ನಡೆದ ಯುದ್ದದಲ್ಲಿ ದೇವಪರವಾಗಿ ಯುದ್ಧ ಮಾಡುತ್ತಿದ್ದ ಸಮಯದಲ್ಲಿ ರಥದ ಒಂದು ಗಾಲಿಯ ಕೀಲವು ಬಿಚ್ಚಿ ಬೀಳಲು ಕೈಕೆಯಿಯು ಆರಥದ ಅಚ್ಚಿನ ಕೀಲುವಿಡುವ ಸ್ಥಳದಲ್ಲಿ ತನ್ನ ಬೆರಳನ್ನಿಟ್ಟು ರಥದಗಾಲಿಯು ಯಾವ ತೊಂದರೆ ಇಲ್ಲದೆ ಉರುಳುವಂತೆ ಮಾಡಿ ಜಯ ದೊರಕಿಸಲು ನೆರವಾದುದಕ್ಕೆ ಸುಪ್ರೀತನಾದ ದಶರಥ ಮಹಾರಾಜನು, ಬೇಕಾದ ಎರಡು ವರಗಳನ್ನು ಕೇಳಿಕೊಳ್ಳಲು ಅನುಗ್ರಹಿಸಿದ್ದನು; ನನಗೆ ಅವಶ್ಯವೆನಿಸಿದಾಗ ಕೇಳಿಕೊಳ್ಳುವೆನೆಂದು ಕೈಕೆಯಿಯು ಹೇಳಿಕೊಂಡಿದ್ದಳು.

ಆ ವರಗಳ ಸಹಾಯಪಡೆದು, ಒಂದು ವರದಿಂದ, ಭರತನಿಗೆ ಪಟ್ಟ ಹಾಗೂ ಇನ್ನೊಂದರಿಂದ ರಾಮನಿಗೆ ಹದಿನಾಲ್ಕು ವರ್ಷಗಳ ಕಾಲ ವನವಾಸ ಬಯಸಿದಳು. ಇದನ್ನರಿತ ಶ್ರೀರಾಮನು ಪಿತೃವಾಕ್ಯ ಪರಿಪಾಲನೆಯ ನೆಪಮಾಡಿ ಪಟ್ಟಾಭಿಷೇಕವನ್ನು ತ್ಯಜಿಸಿ, ಬೇಡವೆಂದರೂ ಹಿಂಬಾಲಿಸಿದ ತಮ್ಮ ಲಕ್ಷ್ಮಣ ಹಾಗೂ ಪತ್ನಿ ಸೀತೆಯರೊಡಗೂಡಿ ವನವಾಸಕ್ಕೆ ದುಷ್ಟ ರಕ್ಕಸರ ನಿಗ್ರಹಾರ್ಥವಾಗಿ ತೆರಳಿದನು.

ಇತ್ತ ದಶರಥ ಮಹಾರಾಜನು ಮಕ್ಕಳ ವಿಯೋಗದಿಂದ ಋಷಿಕುಮಾರನ ಶಾಪದಂತೆ ತನ್ನ ಪ್ರಾಣವನ್ನು ತ್ಯಜಿಸಿದನು. ತಮ್ಮ ಸೋದರಮಾವನ ಮನೆಯಲ್ಲಿದ್ದ ಭರತ ಶತ್ರುಘ್ನರೀರ್ವರೂ ಅಯೋಧ್ಯೆಗೆ ಬಂದು ಈ ಎಲ್ಲ ವೃತ್ತಾಂತವನ್ನು ತಿಳಿದು, ತಾಯಿ ಕೈಕೆಯಿಗೆ ದೂಷಿಸಿ, ಪಾದಚಾರಿಯಾಗಿ ಸಕಲ ರಾಜಮರ್ಯಾದೆಯಿಂದ ಬಂದು, ವನವಾಸದಲ್ಲಿ ಚಿತ್ರಕೂಟ ಪರ್ವತದಲ್ಲಿದ್ದ ಶ್ರೀರಾಮನನ್ನು ಮರಳಿ ಕರೆದುಕೊಂಡು ಹೋಗಲು ವಿಫಲನಾಗಿ, "ಅವಧಿಮೀರಿದ ಕೂಡಲೆ ಅಯೋಧ್ಯೆಗೆ ಬಂದು, ಪಟ್ಟಾಭಿಷೇಕ ಮಾಡಿಸಿಕೊಳ್ಳುವೆ"ನೆಂದು ವಚನಪಡೆದುಕೊಂಡು; ಆ ವಚನಕ್ಕೆ ತಪ್ಪಿದರೆ, ತಾನು ತನ್ನ ದೇಹವನ್ನು ಅಗ್ನಿಯಲ್ಲಿ ಹೋಮ ಮಾಡುವೆನೆಂದು ಪ್ರತಿಜ್ಞೆ ಮಾಡಿ, ರಾಮಪಾದುಕೆಗಳನ್ನು ಶಿರದಲ್ಲಿಟ್ಟುಕೊಂಡು ಬಂದು, ಅಯೋಧ್ಯೆಯ ಪುರಪ್ರವೇಶ ಮಾಡದೆ, ನಂದಿಗ್ರಾಮದಲ್ಲಿ ಆ ಪಾದುಕೆಗಳಿಗೆನೇ ಪಟ್ಟಾಭಿಷೇಕ ಮಾಡಿಸಿ, ಶ್ರೀರಾಮನ ಸೇವಕನಾಗಿ ಮಂತ್ರಿಗಳ ಹಾಗೂ ಅನುಚರರ ಸಹಾಯದಿಂದ ರಾಜ್ಯಭಾರವನ್ನು ಪ್ರಜಾನುರಾಗವಾಗಿ ನಡೆಸತೊಡಗಿದನು.

ಶ್ರೀರಾಮಚಂದ್ರನು ದುಷ್ಟ ರಕ್ಕಸರ ನಿಗ್ರಹಕ್ಕಾಗಿ ಹದಿನಾಲ್ಕು ವರುಷ ವನವಾಸ ಮುಗಿಸಿಕೊಂಡು ರಾವಣ–ಕುಂಭಕರ್ಣಾದಿಗಳನ್ನು ಸಂಹರಿಸಿ, ತನ್ನ ಭಕ್ತರಾದ ಹನುಮಂತ; ವಿಭಿಷಣ, ಸುಗ್ರೀವ, ಅಂಗದ, ಜಾಂಬುವಂತ ಮೊದಲಾದವರನ್ನೊಡಗೂಡಿ, ಸೀತಾಲಕ್ಷ್ಮಣಸಹಿತ ಪುಷ್ಪಕ ವಿಮಾನಾರೂಢನಾಗಿ ಲಂಕೆಯಿಂದ ಬಂದು, ಅಗ್ನಿ ಪ್ರವೇಶಕ್ಕೆ ಅಣಿಯಾಗಿದ್ದ ತಮ್ಮ – ಭರತನನ್ನು ತನ್ನ ವಚನದಂತೆ ಅನುಗ್ರಹಿಸಿದ – ಶ್ರೀರಾಮಾವತಾರದ – **ಶ್ರೀ ಹರಿಯು.**



**೫೧. ರಾಮರಾಜ**

ಸೂರ್ಯವಂಶದ ಇಕ್ಷ್ವಾಕು ಕುಲದ ದಶರಥರಾಜನ ಹಿರಿಯ ಮಡದಿ ಕೌಸಲ್ಯಾದೇವಿಯಲ್ಲಿ, ತ್ರೇತಾಯುಗದಲ್ಲಿ, ತಾರಣನಾಮ ಸಂವತ್ಸರದ, ಚೈತ್ರ ಶುದ್ಧನವಮಿ, ಪುನರ್ವಸು ನಕ್ಷತ್ರ, ಶೂಲನಾಮಯೋಗ, ಸೋಮವಾರದ ದಿನ, ಹಗಲು ಆರುಘಳಿಗೆಗೆ – ಶ್ರೀರಾಮಾವತಾರವಾಯಿತು. ಪ್ರಜಾರಂಜಕನೂ, ಪ್ರಜಾಹಿತದಕ್ಷನೂ ಆದ ಶ್ರೀರಾಮಾವತಾರದ **– ಶ್ರೀಹರಿಯು.**

**ಪೂತನಾಂತಕ ಶಕಜಮಾರಕ ।**
**ವಾತಚಕ್ರಾನಿಷ್ಟಹರ ನವ – ।**
**ನೀತಪ್ರಿಯ ದಧಿಸಾರ ಭೋಜಕ ಗೋಪವಧುಲೋಲ ॥**
**ಸೀತಕರ ಕುಲತಿಲಕ ಶ್ರುತಿ ವಿ – ।**
**ಖ್ಯಾತ ಕರಿಚಾಣೂರ, ಬಕಹರ ।**
**ಮಾತುಳಾಂತಕ ಪಾರ್ಥಸ್ಥಾಪಕ ಕೌರವಾಂತನಮೋ** ॥ ೪ ॥

**೫೨. ಪೂತನಾಂತಕ**

ಶ್ರೀ ವಿಷ್ಣುವು ತನ್ನ ನಿಜರೂಪವನ್ನು ವಸುದೇವ–ದೇವಕಿಯರಿಗೆ ತೋರಿ ತನ್ನನ್ನು ನಂದಗೋಪನಲ್ಲಿಟ್ಟು, ಅಲ್ಲಿದ್ದ ಶಿಶುರೂಪೀ ದುರ್ಗೆಯನ್ನು ಇಲ್ಲಿಗೆ ತರಬೇಕೆಂದು ಹೇಳಿ, ತಾನು ಅದೇ ತಾನೇ ಜನಿಸಿದ ಶಿಶುವಾಗಿ ಪರಿವರ್ತಿಸಿಕೊಂಡನು. ದೇವದೇವನ ಸೂಚನೆಯ ಪ್ರಕಾರ ವಸುದೇವನು ಕೂಸುಗಳ ಅದಲು ಬದಲು ಮಾಡಿದನು. ಆಮೇಲೆ ಎಚ್ಚತ್ತು ಕಂಸಭೃತ್ಯರು, "ದೇವಕಿಗೆ ಎಂಟನೆಯ ಹೆರಿಗೆ ಆಗಿದೆ" ಎಂದು ತಿಳಿಸಲು, ಆತನು ಬಂದು ಆ ಕೂಸನ್ನೆತ್ತಿ ಬಂಡೆಗಲ್ಲಿಗೆ ಅಪ್ಪಳಿಸಲೆತ್ತಿದಾಗ ಕೂಸುರೂಪೀ ದುರ್ಗೆಯು ಅವನ ಕೈಕೊಸರಿಕೊಂಡು ಆಕಾಶಕ್ಕೆ ಹಾರಿ ಅಂತರ್ಧಾನಳಾಗಿ ಅಶರೀರ ವಾಣಿಯಿಂದ "ನಿನ್ನ ಶತ್ರು ಬೇರೆ ಕಡೆಗೆ ಜೀವಿಸಿ ಬೆಳೆಯುತ್ತಿದ್ದಾನೆ" ಎಂದು ನುಡಿದಳು. ಅದನ್ನಾಲಿಸಿ ತನ್ನ ಮಂತ್ರಿಗಳೊಡನೆ ಆಲೋಚಿಸಿ, ತನ್ನ ರಾಜ್ಯದಲ್ಲಿದ್ದ ಎಲ್ಲ ಶಿಶುಗಳನ್ನು ಕೊಲ್ಲಿಸುವ ನಿರ್ಣಯಕ್ಕೆ ಬಂದ ಆದುಷ್ಟ ಸಮುದಾಯದಿಂದ ಆಜ್ಞಪ್ತಳೂ ಪ್ರೇರಿತಳೂ ಆದ ಪೂತನಿ ಎಂಬ ರಕ್ಕಸಿಯು, ಗೌರವಸ್ತ್ರೀಯಂತೆ ವೇಷ ಧರಿಸಿ ಬಂದು, ಶ್ರೀಕೃಷ್ಣನನ್ನು ಎತ್ತಿ ಮುದ್ದಿಟ್ಟು, ಅವನ ಸೌಂದರ್ಯವನ್ನು ಕೊಂಡಾಡುತ್ತಾ, ತನ್ನ ವಿಷ ಪೂರಿತಸ್ತನವನ್ನು ಅವನ ಬಾಯಲ್ಲಿಟ್ಟಳು. ಹಾಲನ್ನು ಹೀರುವದಕ್ಕೆ ಬದಲಾಗಿ ಅವಳ ಪ್ರಾಣವನ್ನೇ ಹೀರಿದ ಶಿಶುರೂಪೀ – ಶ್ರೀಕೃಷ್ಣಾವತಾರದ,[೨೬] – **ಶ್ರೀಹರಿಯು.**

**ಯಾತುಧ್ಯಾನಪಿ ಸಾಸ್ವರ್ಗಂ ಅವಾಪ ಜನನೀ ಗತಿಂ ।**
**ಕೃಷ್ಣಭುಕ್ತ ಸ್ತನಕ್ಷೀರಾಃ ಕಿಮುಗಾವೋನು ಮಾತರಃ ॥**[೨೭]

೨೬. (೧) ಶ್ರೀಜಗನ್ನಾಥದಾಸಾರ್ಯ ವಿರಚಿತ "ತತ್ವಸುವ್ವಾಲಿಗೆ" ಟಿಪ್ಪಣಿಗ್ರಂಥ ಶ್ರೀ ಹರಿದಾಸಭಾರತೀ ಗ್ರಂಥಮಾಲೆಯ "ವಿಜಯಾಂಕ ರತ್ನ–೨" ಪುಟ–೧೫೦ (೨) ಶ್ರೀಮದ್ಭಾಗವತ ದಶನುಸ್ಕಂಧ ಪೂರ್ವಾರ್ಧ – ಅಧ್ಯಾಯ ಏಳನೇಯದು.

೨೭. ಶ್ರೀಮದ್ಭಾಗವತ ದಶಮಸ್ಕಾಂಧ ಪೂರ್ವಾರ್ಧ – ಅಧ್ಯಾಯ ಏಳು.

**ಅರ್ಥ :–**

ಶ್ರೀಕೃಷ್ಣನು ತನ್ನ ಪಾದಗಳನ್ನೊತ್ತಿ ಸ್ತನ್ಯಪಾನ ಮಾಡಿದನು. ಅಂತಹ ರಾಕ್ಷಸಿಯು ಅಂದರೆ ಪೂತನಿಯು ಜನನೀಗತಿ ಅಂದರೆ ದುರ್ಜನರು ಹೊಂದುವ ನಿತ್ಯನರಕವೆಂಬ ದುರ್ಗತಿಯನ್ನು ಹೊಂದಿದಳು. ಅವಳಲ್ಲಿ ಆವೇಶರೂಪದಿಂದ ಇದ್ದ ಊರ್ವಶಿಯು ಜನನೀಗತಿ ಅಂದರೆ ಜನನೀಯರಾದ ದೇವಕಿ, ಯಶೋದೆಯರು ಹೊಂದುವ ಸ್ವರ್ಗವನ್ನು ಪಡೆದಳು. ಅಂದ ಬಳಿಕ ಹರಿಗೆಸ್ತನ್ಯ ಕೊಟ್ಟ ತಾಯಿಯರೂ ಗೋವುಗಳ ರೂಪದಿಂದಿದ್ದ ದೇವತೆಗಳೂ ಸದ್ಗತಿಯನ್ನು ಹೊಂದುವರೆಂದು ಹೇಳತಕ್ಕದ್ದೇನು? ಹೊಂದಿಯೇ ತೀರುತ್ತಾರೆ ಎಂದು ಅರ್ಥ[೨೮].

**೪೩. ಶಕಟಮಾರಕ**

ಶ್ರೀಕೃಷ್ಣನು ಅವತರಿಸಿ ನಾಲ್ಕು ತಿಂಗಳಾಗಿದ್ದವು. ಮಗುವಿನ ಮಾತುಳಾದಿಗಳ ಮನೆಗೆ ಕರೆದುಕೊಂಡು ಹೋಗುವದೆಂಬ ಉಪನಿಷ್ಕ್ರಮಣ ಮಹೋತ್ಸವವನ್ನು ನೆರವೇರಿಸಿದರು. ಯಮುನೆಯ ಬಳಿಗೆ ಬಂದು ಮಗುವಿಗೆರೆದು ಒಂದು ಗಾಡಿಯ ಕೆಳಗೆ ಮಲಗಿಸಿದರು. ಶಕಟನೆಂಬ ಅಸುರನು ಆ ಗಾಡಿಯೊಳಗೆ ಸೇರಿಕೊಂಡು ಮಗುವನ್ನು ಕೊಲ್ಲಬೇಕೆಂದು ಸಿದ್ಧನಾದ. ಅಷ್ಟರೊಳಗೆ ಶ್ರೀಕೃಷ್ಣನು ತನ್ನ ಪಾದ ಮೇಲಕ್ಕೆತ್ತಿ ಆ ಬಂಡೆಗಾಡಿಗೆ ಒದ್ದನು. ಬಂಡೆಗಾಡಿಯು ಪುಡಿಪುಡಿಯಾಯಿತು. ಅದರೊಂದಿಗೆ ಆ ಶಕಟಾಸುರನೂ ಸತ್ತು ಬಿದ್ದನು. ಇದನ್ನು ಕಂಡು ಯಶೋಧೆ ಮುಂತಾದವರು ಬಹಳ ಆಶ್ಚರ್ಯ ಚಕಿತರಾದರು.[೨೯,೩೦]

**೪೪. ವಾತಚಕ್ರಾನಿಷ್ಟಹರ**

ಒಂದು ದಿನ, ಶ್ರೀಕೃಷ್ಣನನ್ನು ಎತ್ತಿಕೊಂಡಿದ್ದ ಯಶೋದೆಯು, ಸಹಿಸಲಾರದಷ್ಟು ಭಾರವಾದ ಅವನನ್ನು ಕೆಳಗಿಳಿಸಿ, ಆಶ್ಚರ್ಯಪಡುತ್ತಿದ್ದಳು. ಅಷ್ಟರಲ್ಲಿ ದೊಡ್ಡ ಸುಂಟರಗಾಳಿಯೆದ್ದಿತು. ಗೋಕುಲವೆಲ್ಲ ಧೂಳಿನಿಂದ ಮುಚ್ಚಿಹೋಯಿತು. ಕಣ್ಣುಗಳಲ್ಲಿ ಧೂಳಿತುಂಬಿ ಜನರು ದಿಕ್ಕು ತೋಚದಾದರು. ಗಾಳಿಯು ಸ್ವಲ್ಪ ಮುಂದೆ ಸಾಗಿದ ಮೇಲೆ, ಶ್ರೀಕೃಷ್ಣನನ್ನು ಕಾಣದೆ ಯಶೋದೆಯು ಭಯ–ಭ್ರಾಂತಳಾದಳು. ಸುತ್ತಲೂ ಹುಡುಕುತ್ತಿರುವಲ್ಲಿ ಒಂದು ದೊಡ್ಡ ಕಲ್ಲು ಬಂಡೆಯ ಮೇಲೆ ಮೃತನಾಗಿ ಬಿದ್ದ ಭಯಂಕರವಾದ ರಾಕ್ಷಸನ ಎದೆಯ ಮೇಲೆ ನಲಿಯುತ್ತಿದ್ದ ಶ್ರೀಕೃಷ್ಣನನ್ನೂ ಜನರೂ ಯಶೋದೆಯೂ ಕಂಡು, ಶ್ರೀಕೃಷ್ಣನ ಈ ಅದ್ಭುತ ಮಹಿಮೆಯನ್ನು ಕೊಂಡಾಡಿದರು. "ತೃಣಾವರ್ತ"ನು ಶ್ರೀಕೃಷ್ಣನನ್ನು ಎತ್ತಿ ಸ್ವಲ್ಪ ಮೇಲೆ ತೆಗೆದುಕೊಂಡು ಹೋಗುವಷ್ಟರಲ್ಲಿ ಅವನ ಭಾರದಿಂದ ಮೇಲೆತ್ತಲು ಅಸಮರ್ಥನಾದನು. ಶ್ರೀಕೃಷ್ಣನು ಆ ದೈತ್ಯನ ಕುತ್ತಿಗೆಯನ್ನು ಒತ್ತಿಹಿಡಿಯಲು, ಆದೈತ್ಯನ ಕಣ್ಣಗುಡ್ಡೆಗಳು ಮೇಲೆ ಸಿಕ್ಕು ಮೃತನಾಗಿ,

---

೨೮. "ಜನನೀಗತಿಂ" ಇದಕ್ಕೆ – ವಿಜಯಧ್ವಜೀಟೀಕೆ
೨೯. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ – ಎಂಟನೇಯ ಅಧ್ಯಾಯ. ಹಾಗೂ
೩೦. ಶ್ರೀಜಗನ್ನಾಥ ದಾಸಾರ್ಯವಿರಚಿತ – ತತ್ವಸುವ್ವಾಲಿಗೆ" ಟಿಪ್ಪಣಿ ಗ್ರಂಥ ಶ್ರೀ ಹರಿದಾಸಭಾರತಿಯ ಗ್ರಂಥಮಾಲೆ – "ವಿಜಯಾಂಕರತ್ನ–೨" ಪುಟ ಸಂಖ್ಯೆ ೧೨,೮೮,೧೨೯



ನಿಜರೂಪದಿಂದ ಕೆಳಗೆ ಬಿದ್ದನು. ಹೀಗೆ ತೃಣಾವರ್ತನನ್ನು ಕೊಂದ – ಶ್ರೀಕೃಷ್ಣಾವತಾರದ[೩೧,೩೨] **– ಶ್ರೀಹರಿಯು.**

**೪೫. ನವನೀತ ಪ್ರಿಯ**

ಬೆಣ್ಣೆಪ್ರಿಯನೆನಿಸಿಕೊಂಡು ಬೆಣ್ಣೆಗಳ್ಳನೆಂದು ಹೆಸರಾದ ಶ್ರೀಕೃಷ್ಣಾವತಾರದ **– ಶ್ರೀ ಹರಿಯು.**

– (೧) ನಾಮ – ೪೬ ದಧಿಸಾರಭೋಜಕ (೨) ನಾಮ ೧೬೪ ದಾಮೋದರ – ನೋಡಿರಿ

**೪೬. ದಧಿಸಾರಭೋಜಕ**

ದಧಿ=ಮೊಸರು; ದಧಿಸಾರ=ಬೆಣ್ಣೆ ಅಥವಾ ಕೆನೆ. ದಧಿಸಾರ ಭೋಜಕ = ಬೆಣ್ಣೆ ಕೆನೆಮೆಲ್ಲುವನಂದಗೋಪನ ಮನೆಯಲ್ಲಿದ್ದಾಗ, ತನ್ನ ಗೆಳೆಯರಾದ ಗೊಲ್ಲರ ಬಾಲಕರೊಡಗೂಡಿ ಗೋಪಿಕಾಸ್ತ್ರೀಯರು ತೆಗೆದಿಟ್ಟ ಬೆಣ್ಣೆಯನ್ನು ಕಳ್ಳತನದಿಂದ ತಿಂದು ಅವರನ್ನು ಪೀಡಿಸುತ್ತಿದ್ದಂಥ –ಶ್ರೀ ಕೃಷ್ಣಾವತಾರದ **– ಶ್ರೀಹರಿಯು.**

**೪೭. ಗೋಪವಧುಲೋಲ**

"ರಾಧಾ" ಎಂಬ ಗೋಪಕುವರಿಯಲ್ಲಿ ಅವಳ ಅತೀವ ಭಕ್ತಿಗೆ ಮೆಚ್ಚಿಅವಳಲ್ಲಿ ಅನುರಕ್ತನಾದಂಥ – ಶ್ರೀಕೃಷ್ಣಾವತಾರದ **– ಶ್ರೀಹರಿಯು.**

**೪೮. ಸೀತಕರಕುಲತಿಲಕ** – ಸೀತ=ತಂಪಾದ, ಕರ=ಕಿರಣಗಳುಳ್ಳ ಚಂದ್ರನ ಸೀತ = ತಂಪು; ಸೀತಕರ = ತಂಪನ್ನುಂಟು ಮಾಡುವಂಥ – ಚಂದ್ರ ಚಂದ್ರವಂಶದ ಯಾದವಕುಲಕ್ಕೆ ತಿಲಕಪ್ರಾಯನು ಅಂದರೆ ಸರ್ವಶ್ರೇಷ್ಠನಾದ – ಶ್ರೀಕೃಷ್ಣಾವತಾರದ **– ಶ್ರೀಹರಿಯು.**

**೪೯. ಶೃತಿ ವಿಖ್ಯಾತ –**

ವೇದೋಪನಿಷತ್ತುಗಳಿಂದ ದೇವದೇವೋತ್ತಮನೆಂದು ವಿಶೇಷವಾಗಿ ಹೊಗಳಿಸಿ ಕೊಳ್ಳುವಂಥ **– ಶ್ರೀಹರಿಯೂ.**

**೫೦. ಬಕ ಹರ**

ಬಕ ಹರ ಸ್ಕಂದವರದಿಂದ ಅವಧ್ಯನಾದ ಈತ ಪೂತನೆಯ ಸೋದರ ಒಂದು ದಿನ, ಮಧ್ಯಾನ್ಹದವರೆಗೆ ಸುತ್ತಿ ಬಾಯಾರಿ ನೀರು ಕುಡಿಯಲೆಂದು ಗೋಪಾಲಕರೊಂದಿಗೆ ಕೃಷ್ಣ ಬಲರಾಮರು ಯಮುನಾನದಿಗೆ ಬಂದರು. ಗೋಪಾಲಕರೆಲ್ಲರೂ ನೀರು ಕುಡಿಯುತ್ತಿರಲು, ಮಹಾದೇಹಾಕೃತಿಯಿಂದ ನೋಡಿದವರಿಗೆ ಗಾಬರಿಯನ್ನುಂಟು ಮಾಡುವಂತಿದ್ದ ಒಂದು ಬಕಪಕ್ಷಿಯು ಆ ನದಿಯ ನಡುಗಡ್ಡೆಯಲ್ಲಿದ್ದು ಕೃಷ್ಣನನ್ನೇ ದಿಟ್ಟಿಸಿ ನೋಡುತ್ತಿದ್ದುದು ಕಂಡುಬಂದಿತು. ಅದು ಸಾಮಾನ್ಯ ಬಕಪಕ್ಷಿಯಾಗಿರದೆ ಕಂಸದೂತನಾದ, "ಬಕಾಸುರ"ನೆಂಬ ರಾಕ್ಷಸನೇ ಶ್ರೀಕೃಷ್ಣನನ್ನು ಸಂಹರಿಸಲುದ್ದೇಶಿಸಿ ಆರೂಪಿನಿಂದ ಬಂದಿದ್ದನು. ಎಲ್ಲರೂ ನೋಡುತ್ತಿರುವಂತೆಯೇ ಅದು ನೇರವಾಗಿ ಹಾರಿಬಂದು ಶ್ರೀಕೃಷ್ಣನ ಬಳಿ ನಿಂತು, ತನ್ನ

---

೩೧. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ – ಎಂಟನೇಯ ಅಧ್ಯಾಯ.
೩೨. ಶ್ರೀ ಜಗನ್ನಾಥದಾಸಾರ್ಯವಿರಚಿತ – "ತತ್ವಸುವ್ವಾಲಿ"ಗೆ ಟಿಪ್ಪಣಿ ಗ್ರಂಥ ಶ್ರೀಹರಿದಾಸ ಭಾರತೀ ಗ್ರಂಥಮಾಲೆಯ, "ವಿಜಯಾಂಕರತ್ನ–೨" ಪುಟ೧೩೦

ಬಾಯನ್ನು ಅಗಲವಾಗಿ ತೆರೆದು, ಬಾಲಕೃಷ್ಣನ ಮೂರ್ತಿಯನ್ನು ಒಮ್ಮೆಗೆ ನುಂಗಿಬಿಟ್ಟಿತು. ಆದರೆ ಶ್ರೀಕೃಷ್ಣನು ಅಗ್ನಿಗೋಳದಂತೆ ಅದರ ಬಾಯಿ ಮತ್ತು ಗಂಟಲುಗಳನ್ನು ಸುಡತೊಡಗಲು, ಆ ಪಕ್ಷಿಯು ಶ್ರೀಕೃಷ್ಣನನ್ನು ನುಂಗಲಾಗದೆ ಉಗುಳಿ ಬಿಟ್ಟಿತು. ಆಗ ಕೃಷ್ಣನು ಆ ದುಷ್ಟನ ಉದ್ದೇಶವನ್ನರಿತು, ಒಮ್ಮೆಗೆ ಅದರಕೊಕ್ಕಿನ ಮೇಲು ಕೆಳಭಾಗಗಳನ್ನು ಕೈಯಿಂದ ಹಿಡಿದು, ಹಂಚಿಯ ಕಡ್ಡಿಯನ್ನು ಸೀಳುವ ಹಾಗೆ ಸೀಳಿ ಬಿಟ್ಟನು. ಒಡನೆ ಅಸುನೀಗಿದ ಆ ಬಕಪಕ್ಷಿಯ ದೇಹವಿದ್ದೆಡೆಯಲ್ಲಿ ಘೋರಾಕಾರಿಯಾದ ದೈತ್ಯನ ದೇಹವು ಕಂಡುಬಂದು ಎಲ್ಲರನ್ನೂ ಭಯಕಂಪಿತರನ್ನಾಗಿಸಿತು. ಗೋಪಾಲರೆಲ್ಲರೂ ಶ್ರೀಕೃಷ್ಣನನ್ನು ಹೊಗಳತೊಡಗಿದರು. ಈ ಪ್ರಕಾರ ಬಕಾಸುರನನ್ನು ಸಂಹರಿಸಿದ ಶ್ರೀಕೃಷ್ಣಾವತಾರದ,[೩೩] – ಶ್ರೀಹರಿಯು.

**೬೧ ಕರಿಹರ**

ಕಂಸನು ದುರಾಲೋಚನೆಯಿಂದ ಬಿಲ್ಲು ಹಬ್ಬಕ್ಕೆಂದು ಆಹ್ವಾನಿಸಿ ವೃಂದಾವನದಿಂದ ಶ್ರೀಕೃಷ್ಣ ಬಲರಾಮರನ್ನು ಮಥುರಾ ಪಟ್ಟಣಕ್ಕೆ ಕರೆಯಿಸಿಕೊಂಡನು. ಶ್ರೀಕೃಷ್ಣ ಬಲರಾಮರು ಮಥುರೆಯಲ್ಲಿ ರಜಕನ ಪ್ರಾಣಹರಣ ಮಾಡಿ, ಆತನ ಬಳಿ ಇದ್ದ ಉತ್ತಮವಾದ ಬಟ್ಟೆಗಳನ್ನು ಉಟ್ಟುಕೊಂಡು, ಕುಬ್ಜೆಯು ಕೊಟ್ಟ ಗಂಧವನ್ನು ಹಚ್ಚಿಕೊಂಡು, ಧನುಶ್ಶಾಲೆಗೆ ಬಂದು ಅಲ್ಲಿದ್ದ ಧನುಸ್ಸಿಗೆ ನಾಣೇರಿಸುವ ನೆಪದಿಂದ ಅದನ್ನು ಮುರಿದು, ತಮ್ಮನ್ನು ಪ್ರತಿಬಂಧಿಸಲೆತ್ನಿಸಿದವರನ್ನು ಸದೆಬಡೆದರು.

ಬಿಲ್ಲು ಹಬ್ಬದ ರಂಗಮಂಟಪದ ಮಹಾದ್ವಾರಕ್ಕೆ ಅಡ್ಡವಾಗಿ ನಿಂತಿದ್ದ "ಕುವಲಯಾಪೀಡ" ವೆಂಬ ಮದದ ಆನೆಯ ಮಾವಟಿಗನು ಶ್ರೀಕೃಷ್ಣನ ಮೇಲೆ ಏರಿಹೋಗಲು ಪ್ರೇರಿಸಿದನು. ಆ ಮಹಾಗಜವು ತನ್ನ ಸೊಂಡಿಲಿನಿಂದ ಶ್ರೀಕೃಷ್ಣನ ಮೈಗೆ ಸುತ್ತಿ ಆತನನ್ನು ಆಕ್ರಮಿಸಿತು. ಶ್ರೀಕೃಷ್ಣನು ಅದರ ಸುತ್ತಿನಿಂದ ಬಿಡಿಸಿಕೊಂಡು ತನ್ನ ಮುಷ್ಟಿಯಿಂದ ಅದರ ಮುಖವನ್ನು ಬಲವಾಗಿ ಅಪ್ಪಳಿಸಿ, ಅದರ ಕಾಲುಗಳ ಮಧ್ಯೆಹಾಯ್ದು ಹಿಂದುಗಡೆಯಿಂದ ಅದರ ಬಾಲವನ್ನು ಹಿಡಿದು ದೂರಕ್ಕೆ ಎಳೆದೊಯ್ದು ಪುನಃ ಮುಂದೆ ಬಂದು ಅದರ ಮುಖಕ್ಕೆ ಗುದ್ದಿದನು. ಈ ಪೀಡನೆಗಳಿಂದ ವಿಶೇಷವಾಗಿರೇಗಿದ ಆ ಮದಗಜವು ತನ್ನ ಕೋರೆದಾಡಿಗಳಿಂದ ತಿವಿಯಲೆಂದು ಮುಂದಕ್ಕೆ ಬರಲು ಕೃಷ್ಣನು ತಪ್ಪಿಸಿಕೊಂಡುದರಿಂದ, ನೆಲಕ್ಕೆ ಘಟ್ಟಿಸಿ ದಂತಗಳಿಗೆ ವಿಶೇಷಪೆಟ್ಟು ಬಿದ್ದ ಆನೆಯು ಮುಗ್ಗುರಿಸಿ ಬಿದ್ದಿತು. ಆಗ್ಗೆ ಕೃಷ್ಣನು ಸೊಂಡಿಲನ್ನು ಹಿಡಿದು ಹಗ್ಗವನ್ನು ಹಿಂಡುವಂತೆ ತಿರುಚಿ ಬಿಟ್ಟುದರಿಂದ ಆನೆಯು ನೆಲಕ್ಕೆ ಬಿದ್ದು, ಘೂಳಿಟ್ಟು ಚೀರಿ ಮೃತವಾಯಿತು. ಒಡನೆ ಕೃಷ್ಣನು ಅದರ ಎರಡೂ ದಂತಗಳನ್ನು ಕಿತ್ತುಕೊಂಡು, ಆ ಮಾವುತನನ್ನು ಕೊಂದು; ಶ್ರೀಕೃಷ್ಣ ಬಲರಾಮರೀರ್ವರೂ ಹೆಗಲ ಮೇಲೊಂದು ಗಜದಂತವನ್ನಿಟ್ಟುಕೊಂಡು ರಂಗಮಂಟಪವನ್ನು ಪ್ರವೇಶಿಸಿದರು. ಈ ಬಗೆಯಿಂದ "ಕುವಲಯಾಪೀಡ"ವೆಂಬ ಆನೆಯನ್ನು ಶ್ರೀಕೃಷ್ಣಾವತಾರದಿಂದ ಕೊಂದಂಥ,[೩೪]– **ಶ್ರೀಹರಿಯು.**

---

೩೩. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ–ಹನ್ನೆರಡನೇಯ ಅಧ್ಯಾಯ
೩೪. ಶ್ರೀಮದ್ಭಾಗವತ ದಶಮಸ್ಕಂಧ – ಪೂರ್ವಾರ್ಧ–ನಲವತ್ತನೇಯ ಅಧ್ಯಾಯ



**೬೨. ಚಾಣೂರಹರ**

ಕಂಸನು ನಿರ್ಮಿಸಿದ ಬಿಲ್ಲು ಹಬ್ಬದ ರಂಗಮಂಟಪದ ಮಹಾದ್ವಾರದಲ್ಲಿ ಶ್ರೀಕೃಷ್ಣನು ತನ್ನನ್ನು ತಡೆಗಟ್ಟಿದ "ಕುವಲಯಾಪೀಡ"ವೆಂಬ ಮದ್ದಾನೆಯನ್ನೂ, ಅದರ ಮಾವುತನನ್ನು ಕೊಂದು, ಅದರ ಕೋರೆ ಹಲ್ಲುಗಳನ್ನು ಕಿತ್ತುಕೊಂಡು ತನ್ನ ಹೆಗಲಮೇಲೊಂದನ್ನಿಟ್ಟುಕೊಂಡು, ಅಣ್ಣ ಬಲರಾಮನಿಗೊಂದು ಕೊಟ್ಟು, ಅಟ್ಟಹಾಸದಿಂದ ರಂಗಮಂಟಪವನ್ನು ಪ್ರವೇಶಿಸಿ, ಮಲ್ಲಯುದ್ಧಕ್ಕೆ ನಿರ್ಮಿಸಿದ ಸ್ಥಳದ ಹತ್ತಿರ ಅಣ್ಣತಮ್ಮಂದಿರಿಬ್ಬರೂ ಬಂದು ನಿಂತರು. ಇದನ್ನು ನೋಡಿ ಚಾಣೂರನೆಂಬ ಕಂಸನ ಶ್ರೇಷ್ಠಮಲ್ಲನು ಅಲ್ಲಿಗೆ ಬಂದು, ಶ್ರೀಕೃಷ್ಣನನ್ನು ಮಲ್ಲ ಯುದ್ಧಕ್ಕೆ ಆಹ್ವಾನಿಸಿದನು. ಅದಕ್ಕೆ ಶ್ರೀಕೃಷ್ಣನು, ನನ್ನ ಸಮಬಲರೊಡನೆ ಮಲ್ಲಯುದ್ಧಕ್ಕೆ ಸಿದ್ಧ; ನೀನು ಮಲೆತಮಲ್ಲ; ನಾನು ಇನ್ನೂ ಚಿಕ್ಕವನು ಎಂದು ಹೇಳಿದನು. ಅದಕ್ಕೆ ಪ್ರತಿಯಾಗಿ ಚಾಣೂರನು, ಇದೀಗ ಮಹಾದ್ವಾರದಲ್ಲಿದ್ದ ಸಾವಿರ ಆನೆಯ ಬಲವುಳ್ಳ "ಕುವಲಯಾಪೀಡ"ವೆಂಬ ಮದ್ದಾನೆಯನ್ನು ಲೀಲೆಯಿಂದ ಸಂಹರಿಸಿದೆ; ಹಾಗೂ ಇಲ್ಲಿಯವರೆಗೆ ಅನೇಕ ಶಕ್ತಿವಂತರನ್ನು ಯಾವ ಆಯಾಸವಿಲ್ಲದೆಯೇ ಕೊಂದು ಹಾಕಿರುವೆ. ಅದರಿಂದ ಬಾಲನೂ ಬಲಹೀನನೂ ಅನ್ನುವವರಾರು? ಎಂದು ಕೇಳಿ, ಅವರೀರ್ವರನ್ನೂ ಮಲ್ಲಯುದ್ಧಕ್ಕೆ ಆಹ್ವಾನಿಸಿದನು.

ಕೃಷ್ಣನು ಚಾಣೂರನೊಡನೆಯೂ ಬಲರಾಮನು ಮುಷ್ಟಿಕನೊಡನೆಯೂ ಮಲ್ಲಯುದ್ಧ ಮಾಡತಕ್ಕದ್ದೆಂದು ನಿಶ್ಚಯವಾಗಿ, ಉಭಯ ಜೋಡಿಗಳೂ ರಂಗಸ್ಥಳದಲ್ಲಿ ಪರಸ್ಪರ ಎದುರಾಗಿ ನಿಂತರು. ಯುದ್ಧ ಆರಂಭವಾಯಿತು. ಇಲ್ಲಿ ಪರಸ್ಪರರನ್ನು ಜಯಿಸಬೇಕೆಂಬುದು ಮಾತ್ರವಲ್ಲ; ವಧಿಸಬೇಕೆಂಬುದೇ ಮುಖ್ಯೋದ್ದೇಶವಾಗಿದ್ದುದರಿಂದ ಉಭಯ ಪಕ್ಷದವರೂ ಹಟದಿಂದಲೇ ಹೋರಾಡುತ್ತಿದ್ದರು. ಸುಕುಮಾರ ಶರೀರಿಗಳಾದ ಬಲರಾಮಕೃಷ್ಣರು ಗೋಕುಲದಲ್ಲಿ ಆಟವಾಡುತ್ತಾ ನಲಿಯುತ್ತಿದ್ದವರನ್ನು ಕರೆತರಿಸಿ, ಕಂಸನು ಮದ್ದಾನೆಯಂತಿರುವ ಇಂತಹ ಮಲ್ಲರೊಂದಿಗೆ ಯುದ್ಧ ಮಾಡಲು ನಿಯಮಿಸಿದುದು ಮಹಾಪಾಪಕಾರ್ಯವು, "ಕಂಸನ ಈ ಮಲ್ಲರಂಗವು ನಾಶವಾಗಲಿ!" ಎಂದು ನೋಡಬಂದ ಜನರು ಶಪಿಸುತ್ತಿದ್ದರು. ಕೃಷ್ಣನ ವಜ್ರಮುಷ್ಟಿ ಪ್ರಹಾರಗಳಿಂದ ಚಾಣೂರನ ದೇಹವು, ಜರ್ಝರಿತವಾಗಿ, ಅವನ ಪ್ರಾಣವು ಕುಂದುತ್ತಬಂದು, ಗತಪ್ರಾಣನಾದನು. ಅತ್ತ ಬಲರಾಮನೂ ತನ್ನೊಂದಿಗೆ ಹೋರಾಡುತ್ತಿದ್ದ ಮುಷ್ಟಿಕನನ್ನು ತನ್ನ ವಜ್ರಮುಷ್ಟಿ ಪ್ರಹಾರಗಳಿಂದ ಘಾತಿಸಲು, ಅವನು ತನ್ನ ಬಾಯಿಯಿಂದ ರಕ್ತ ಕಾರುತ್ತ ಪ್ರಾಣಬಿಟ್ಟನು.

ತಮ್ಮ ಪಕ್ಷದ ಶ್ರೇಷ್ಠ ಜಟ್ಟಿಗಳು ಹತರಾದದ್ದನ್ನು ಕಂಡು, ಕೂಟ, ಶಲ ಹಾಗೂ ತೋಸಲರೆಂಬ ಮೂವರೂ ಜಟ್ಟಿಗಳು ಬಲರಾಮಕೃಷ್ಣರ ಮೇಲೇರಿಬರಲು, ಆ ಮೂವರನ್ನು ಸದೆದು ಸಂಹರಿಸಿದರು. ಅಲ್ಲಿ ನೆರೆದ ಮಹಾಜನಸಮೂಹದಲ್ಲಿ– ಕಂಸನೊಬ್ಬನನ್ನು ಬಿಟ್ಟು – ಮಿಕ್ಕ ಎಲ್ಲರೂ ರಾಮಕೃಷ್ಣರ ವಿಜಯಕ್ಕಾಗಿ ಜಯಜಯಕಾರ ಮಾಡುತ್ತಿದ್ದರು.

ಹೀಗೆ ಕಂಸನ ಮಲೆತಮಲ್ಲ – ಚಾಣೂರನನ್ನು ಸಂಹರಿಸಿದಂಥ – ಶ್ರೀಕೃಷ್ಣಾವತಾರದ,[೩೫] – **ಶ್ರೀಹರಿಯು.**

---

೩೫. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ, ನಲವತ್ತೆರಡನೇಯ ಅಧ್ಯಾಯ.

**೬೩. ಮಾತುಳಾಂತಕ**

ಬಿಲ್ಲು ಹಬ್ಬಕ್ಕೆಂದು ಅಕ್ರೂರನನ್ನು ಗೋಕುಲಕ್ಕೆ ಕಳುಹಿ ಆತನ ಸಂಗಡ ಶ್ರೀಕೃಷ್ಣ ಬಲರಾಮರನ್ನು ಕರೆತರಿಸಿ, ಅವರ ಮೇಲೆ ಕುವಲಯಾಪೀಡ ಮದ್ದಾನೆಯನ್ನು ಹರಿಬಿಟ್ಟು, ಚಾಣೂಕ, ಮುಷ್ಟಿಕ, ಕೂಟ, ಶಲ ಹಾಗೂ ತೋಸಲರೆಂಬ ಮಲ್ಲರನ್ನು ಮಲ್ಲಯುದ್ಧಕ್ಕೆ ಕಳುಹಿ, ಅವರೆಲ್ಲರ ವೈಫಲ್ಯದಿಂದ ಕಂಗೆಟ್ಟ ಕಂಸನು ತನ್ನ ಭೃತ್ಯರಿಗೆ, **"ಈ** ಇಬ್ಬರೂ ಗೊಲ್ಲಪುತ್ರರನ್ನು ಪಟ್ಟಣಬಿಟ್ಟು ಹೊರದೂಡಿರಿ; ನೀಚ ವಸುದೇವನನ್ನು ಬಂಧಿಸಿರಿ; ನನ್ನ ತಂದೆಯಾದ ಉಗ್ರಸೇನನನ್ನು ಸಂಹರಿಸಿರಿ "ಅಂತಾ ಆಜ್ಞಾಪಿಸುವದನ್ನು ಲಕ್ಷಿಸಿ, ಶ್ರೀಕೃಷ್ಣನು, ಅವನು ಕುಳಿತ ಸಿಂಹಾಸನದ ಕಡೆಗೆ ಧಾವಿಸಿದನು. ಇದನ್ನು ಕಂಡು ಕಂಸನು ತನ್ನ ಕತ್ತಿ ಗುರಾಣಿಗಳನ್ನು ಹಿರಿದು ಕೃಷ್ಣನನ್ನು ಇರಿಯಲು ತವಕಿಸುತ್ತಿರುವಾಗಲೇ ಕೃಷ್ಣನು ಕಂಸನ ಮೇಲೆ ಹಾರಿ ಆತನ ಕಿರೀಟವನ್ನು ಕೆಡುಹಿ, ಆತನ ತಲೆಗೂದಲು ಹಿಡಿದೆಳೆದು ಸಭಾಮಧ್ಯದಲ್ಲಿ ಕೆಡುಹಿ, ಆತನ ಮೇಲೆ ತಾನೂ ಜೋರಿನಿಂದ ಬಿದ್ದು ಬಿಟ್ಟನು. ಸಭಾಗೃಹದಲ್ಲಿ ದೊಡ್ಡ ಕೋಲಾಹಲವೆದ್ದಿತು. ಶ್ರೀಕೃಷ್ಣನು ಕಂಸನನ್ನು ಅತ್ತಿತ್ತ ಎಳೆದಾಡುವಾಗ್ಗೆ ಆತನ ಕೈಯಲ್ಲಿಯ ಕತ್ತಿ ಗುರಾಣಿಗಳು ಬಿದ್ದು ಹೋದವು. ಈ ಸಮಯದಲ್ಲಿ ಕಂಸನಿಗೆ ನೆರವಾಗಲು ಯಾರಾದರೂ ಬಂದರೆ ಅವರನ್ನು ಹೊಡೆದಟ್ಟಲು ಬಲರಾಮನು ಆನೆಯ ಕೋರೆದಾಡಿಯನ್ನು ಹಿಡಿದುಕೊಂಡು ಕಾವಲಾಗಿ ನಿಂತಿದ್ದನು. ಎಳೆದಾಟದಿಂದ ನಿಶ್ಶಕ್ತನಾದ ಕಂಸನ ಎದೆಯ ಮೇಲೆ ಕುಳಿತ ಶ್ರೀಕೃಷ್ಣನ ಅವಿರತ ಮುಷ್ಠಿ ಪ್ರಹಾರದಿಂದ ಗತ ಪ್ರಾಣನಾದನು. ಕಂಸನ ಮರಣಾನಂತರ ತಮ್ಮ ಮೇಲೆ ಏರಿ ಬಂದ ಕಂಕ, ನ್ಯಗ್ರೋಧಕ ಮೊದಲಾದ ಅವನ ಎಂಟು ಮಂದಿ ತಮ್ಮಂದಿರೂ ಬಲರಾಮನ ಪರಿಘಾಯುಧದಿಂದ ಹತರಾದರು. ಹೀಗೆ ದುಷ್ಟಕಂಸನನ್ನು ನಾಶಗೊಳಿಸಿ ಮಾತುಳಾಂತಕನಾದ – ಶ್ರೀಕೃಷ್ಣವತಾರದ[೩೫] – ಶ್ರೀಹರಿಯು.

**೬೪. ಪಾರ್ಥಸ್ಥಾಪಕ**

ಕುರುಕ್ಷೇತ್ರದ ರಣಭೂಮಿಯಲ್ಲಿ, ಇನ್ನೇನು ಶಸ್ತ್ರ ಪ್ರಯೋಗವಾಯಿತು. ಎನ್ನುವಷ್ಟರಲ್ಲಿ, ಅರ್ಜುನನು ಶ್ರೀಕೃಷ್ಣನಿಗೆ ತನ್ನ ಕೂಡ ಯುದ್ಧ ಮಾಡಬಯಸಿದವರನ್ನು ನೋಡುವಷ್ಟು ಕಾಲ ರಥವನ್ನು ಎರಡೂ ಸೇನೆಗಳ ಮಧ್ಯ ನಿಲ್ಲಿಸಲು ಕೇಳಿಕೊಂಡನು.[೩೬]

ಆ ಪ್ರಕಾರ ಸೈನ್ಯ ಮಧ್ಯದಲ್ಲಿ ನಿಂತು, ಯುದ್ಧಕ್ಕೆ ಅಣಿಯಾಗಿ ನಿಂತ, ಗುರುಗಳು, ಪಿತೃ ಸಮಾನರು, ಮಕ್ಕಳು, ತಾತಂದಿರು, ಸೋದರ ಮಾವಂದಿರು, ಹೆಣ್ಣು ಕೊಟ್ಟ ಮಾವಂದಿರು, ಮೊಮ್ಮಕ್ಕಳು, ಭಾವಮೈದುನರು ಮತ್ತು ಇನ್ನುಳಿದ ಸಂಬಂಧಿಗಳು ಯುದ್ಧದಲ್ಲಿ ನಿಂತದ್ದನ್ನು ಕಂಡು ಅರ್ಜುನನು – **"ಕೃಷ್ಣ!** ನಾನು ಯುದ್ಧತೊರೆದು ನಿಂತಾಗ ಇವರು ನನ್ನನ್ನು ಕೊಲ್ಲಬಂದರೂ ಸರಿಯೇ, ನಾನು ಮಾತ್ರ ಇವರನ್ನು ಕೊಲ್ಲಬಯಸಲಾರೆ, ಮೂರು ಲೋಕಗಳ ಒಡೆತನ ಲಭಿಸುವಂತಿದ್ದರೂ ಅದಕ್ಕಾಗಿ ಇವರನ್ನು ನಾನು ಕೊಲ್ಲಲಾರೆ, ಕೇವಲ ಭೂಮಿಯ ಒಡೆತನಕ್ಕಾಗಿ ಕೊಲ್ಲಲಾರೆ ಎಂದು ಇನ್ನೇನು ಹೇಳಬೇಕು?[೩೭]

೩೬. ಶ್ರೀಮದ್ಭಗವದ್ಗೀತಾ ಅಧ್ಯಾಯ – ೧ – ಶ್ಲೋಕ ೨೦ ರಿಂದ ೨೩
೩೭. ಶ್ರೀಮದ್ಭಗವದ್ಗೀತಾ ಅಧ್ಯಾಯ – ೧ – ಶ್ಲೋಕ ೩೪ ಮತ್ತು ೩೫



ಧರ್ಮವಿರುದ್ಧವಾದ ಈ ಕರುಣೆಗೆ ಅಭಿಮಾನಿ – ಒಬ್ಬ ಅಸುರನೆಂದೂ, ಆತನು ಅರ್ಜುನನಲ್ಲಿ ತತ್ಕಾಲದಲ್ಲಿ ಆವೇಶವಾದನೆಂದೂ, ತ್ರಿವಿಧಾರ್ಥ ವಿವೃತಿಕಾರರ ಅಭಿಪ್ರಾಯ[೩೮].

ಈ ಪ್ರಕಾರ ಸ್ವಜನ ಪ್ರೇಮದಿಂದ ಮತಿಭ್ರಂಶನಾದ ಅರ್ಜುನನಿಗೆ ಸಕಲ ಧರ್ಮರಹಸ್ಯದ **"ಗೀತೋಪದೇಶ"** ಶ್ರೀಕೃಷ್ಣನು ನೀಡಿದ ನಂತರ ಆತನ ಭ್ರಮನಿರಸನವಾಗಿ, ತಾನು ತನ್ನ ಕರ್ತವ್ಯ ನಿರ್ವಹಿಸುವ ಬಗ್ಗೆ ಯಥಾರ್ಥಜ್ಞಾನ ಪಡೆದು **"ಕೃಷ್ಣ!** ಮೋಹವಳಿಯಿತು. ನಿನ್ನ ಅನುಗ್ರಹದಿಂದ ಕರ್ತವ್ಯ ಸ್ಮರಣೆ ಬಂದಿತು. ಸಂಶಯವಿಲ್ಲದೆ ಯುದ್ಧಕ್ಕೆ ನಿಂತಿದ್ದೇನೆ. ನಿನ್ನ ಮಾತಿನಂತೆ ನಡೆಯುತ್ತೇನೆ". ಎಂದು ಅರ್ಜುನನು ನುಡಿದನು.[೩೯]

ಈ ಪ್ರಕಾರ ಧರ್ಮಯುದ್ಧಕ್ಕೆ ಮೋಹಪರವಶನಾಗಿ ಕರ್ತವ್ಯವನ್ನು ಲೆಕ್ಕಿಸದೆ ಹಿಂಜರಿಯುತ್ತಿದ್ದ ಪಾರ್ಥನಿಗೆ ತತ್ವೋಪದೇಶ ನೀಡಿ, ಧರ್ಮಯುದ್ಧಕ್ಕೆ ಅಣಿಮಾಡಿ ನಿಲ್ಲಿಸಿದಂಥ – ಶ್ರೀಕೃಷ್ಣಾವತಾರದ – **ಶ್ರೀಹರಿಯು.**

**೬೫. ಕೌರವಾಂತಕ**

**"ಮಮ ಪ್ರಾಣಾಹಿ ಪಾಂಡವಾಃ"** ಅಂತಾ ಶ್ರೀಕೃಷ್ಣನು ನುಡಿದು, ಅದರಂತೆ ಅವರಿಗೊದಗಿದ ಪ್ರತಿಯೊಂದೂ ಆಪತ್ತಿನಲ್ಲಿ ಅವರಿಗೆ ಸಹಾಯಕನಾಗಿ ನಿಂತು, ಅವರನ್ನು ಆಯಾ ಆಪತ್ತುಗಳಿಂದ ಪಾರು ಮಾಡಿ, **"ಪರಿತ್ರಾಣಾಯಸಾಧೂನಾಂ ವಿನಾಶಾಯ ಚ ದುಷ್ಕೃತಾಂ"** ಎಂಬ ತನ್ನ ನುಡಿಯಂತೆ ದುಷ್ಟರಾದ ಕೌರವರನ್ನು ಅವರ ಪ್ರೇರಕರೂ ಸಹಾಯಕರೂ ಆದ ಶಕುನಿ, ಕರ್ಣ, ಜಯದ್ರಥ, ಮೊದಲಾದವರನ್ನು ಧರ್ಮಸ್ಥಾಪನಾರ್ಥವಾಗಿ ಪಾಂಡವರಿಂದ ಕೊಲ್ಲಿಸಿದಂಥ – ಶ್ರೀಕೃಷ್ಣಾವತಾರದ – **ಶ್ರೀಹರಿಯು.**

**ಚಕ್ರ, ಶಂಖ, ಗದಾಬ್ಜಧರ ತ್ರಿ – ।**
**ವಿಕ್ರಮಾಚ್ಯುತ ವರಹ ವಾಮನ ।**
**ನಕ್ರಶಿಕ್ಷಕ ನಾಗರಕ್ಷಕ ನಿತ್ಯತೃಪ್ತ ಹರೇ ॥**
**ಶಕ್ರ ಗಿರಿಜಾರ್ಚಿತ ಪದಾಬ್ಜ ತ್ರಿ – ।**
**ವಕ್ರ ವಧು ಸೌಂದರ್ಯದಾಯಕ ।**
**ಅಕ್ರೂರಾಭಿಷ್ಟದ ವಿದುರಉದ್ಧವ ವರೇಣ್ಯ ನಮೋ** ॥ ೫ ॥

**೬೬. ಚಕ್ರಧರ;** **೬೭. ಶಂಖಧರ**
**೬೮. ಗದಾಧರ;** **೬೯. ಅಬ್ಜಧರ**

ಚತುರ್ಭುಜನಾದ ಪರಮಾತ್ಮನು ತನ್ನ ಒಂದೊಂದು ಕೈಯಲ್ಲಿ (೧) ಸುದರ್ಶನ ಚಕ್ರ (೨) ಪಾಂಚಜನ್ಯ ಶಂಕು (೩) ಶಾಙ್ಗ್ರ್ಧನುಸ್ಸು ಹಾಗೂ (೪) ಕೌಮೋದಕಿ ಗದೆಯನ್ನು ಧರಿಸಿದಂಥ – **ಶ್ರೀಹರಿಯು.**

**೭೦. ತ್ರಿವಿಕ್ರಮ**

(ಎ) ಶ್ರೀವಿಷ್ಣುವು ವಾಮನ ರೂಪದಿಂದ ಬಲಿಚಕ್ರವರ್ತಿಯಿಂದ ದಾನವಾಗಿ ಪಡೆದ

೩೮. ಶ್ರೀಮದ್ಭಗವದ್ಗೀತ ಅಧ್ಯಾಯ – ೧ – ಶ್ಲೋಕ ೨೭.
೩೯. ಶ್ರೀಮದ್ಭಗವದ್ಗೀತಾ ಅಧ್ಯಾಯ ೧೮ ಶ್ಲೋಕ ೭೩

ಮೂರುಪಾದ ಭೂಮಿಯನ್ನು ಅಳೆಯುವ ಕಾಲಕ್ಕೆ ತಳೆದ ರೂಪವೇ ತ್ರಿ ವಿಕ್ರಮರೂಪವು ಈ ರೂಪದಿಂದ ತೋರಿದ ಮೂರು ಕಾರ್ಯಗಳು.

(೧) ಬಲಿಚಕ್ರವರ್ತಿಯಿಂದ ದಾನಪಡೆದುಕೊಂಡ ಮೂರು ಪಾದ ಭೂಮಿಯನ್ನು ಅಳೆಯುವ ಕಾಲಕ್ಕೆ ತ್ರಿವಿಕ್ರಮ ರೂಪತಾಳಿ, ಒಂದು ಪಾದದಿಂದ ಭೂಮಂಡಲವನ್ನೆಲ್ಲ ವ್ಯಾಪಿಸಿ ಬಿಟ್ಟನು. ಎರಡನೇ ಪಾದದಿಂದ ಅಂತರಿಕ್ಷವನ್ನೆಲ್ಲ ಅಳೆದು, ಪಡೆದುಕೊಂಡ ಎಳೂ ಲೋಕಗಳನ್ನು ದೇವತೆಗಳಿಗೆ ಮರಳಿಕೊಟ್ಟನು. ತ್ರಿವಿಕ್ರಮ ಮೂರ್ತಿಯು, ಬಲಿಯು ತನಗೆ ದಾನವಾಗಿ ಕೊಟ್ಟ ಮೂರಡಿ ಭೂಮಿಯನ್ನು ಅಳೆದುಕೊಳ್ಳುವ ಕಾಲಕ್ಕೆ, ಒಂದು ಪಾದದಿಂದ ಭೂಮಂಡಲವನ್ನೆಲ್ಲ ವ್ಯಾಪಿಸಿಬಿಟ್ಟನು. ಎರಡನೇಯ ಪಾದದಿಂದ ಅಂತರೀಕ್ಷವನ್ನೆಲ್ಲ ಅಳೆದು, ಪಡೆದುಕೊಂಡ ಎಳೂ ಲೋಕಗಳನ್ನು ದೇವತೆಗಳಿಗೆ ಮರಳಿಕೊಟ್ಟನು.

(೨) ತ್ರಿವಿಕ್ರಮ ಮೂರ್ತಿಯು, ಬಲಿಯು ತನಗೆ ದಾನವಾಗಿ ಕೊಟ್ಟ ಮೂರಡಿ ಭೂಮಿಯನ್ನು ಅಳೆದುಕೊಳ್ಳುವ ಕಾಲಕ್ಕೆ, ಒಂದು ಪಾದದಿಂದ ಭೂಮಂಡಲವನ್ನೆಲ್ಲ ವ್ಯಾಪಿಸಿಬಿಟ್ಟನು. ಎರಡನೇಯ ಪಾದದಿಂದ ಅಂತರೀಕ್ಷವನ್ನೆಲ್ಲ ವ್ಯಾಪಿಸಿ, ಅದುದ್ಯುಲೋಕ, ಮಹರ್ಲೋಕ, ಜನೋಲೋಕ, ತಪೋಲೋಕಗಳನ್ನು ದಾಟಿ, ಸತ್ಯಲೋಕವನ್ನು ಮುಟ್ಟಿ, ಆಪಾದದ ನಖವು ತಗಲಿ ಬ್ರಹ್ಮಾಂಡ ಕಟಾಹವು ಭೇದಿಸಿ, ಬಹಿರಾವರದಲ್ಲಿದ್ದ ಜಲವು ಒಳನುಗ್ಗಿತು. ಬ್ರಹ್ಮನು ಆ ಜಲವನ್ನು ತನ್ನ ಕಮಂಡಲುವಿನಲ್ಲಿ ತುಂಬಿಕೊಂಡು ಸಮಸ್ತ ಋಷಿಮುನಿಗಳಿಂದೊಡಗೂಡಿ ಆ ಪವಿತ್ರ ಜಲದಿಂದ ತ್ರಿವಿಕ್ರಮ ಮೂರ್ತಿಯ ಪಾದಗಳನ್ನು ತೊಳೆದು; ಆದಿವ್ಯ ಪಾದೋದಕವನ್ನು ಸರ್ವರೂ ಪ್ರೋಕ್ಷಿಸಿಕೊಂಡರು. ಬ್ರಹ್ಮದೇವನು ತ್ರಿವಿಕ್ರಮನ ಪಾದಗಳನ್ನು ಅಭಿಷೇಕಿಸಿದ ಜಲವೇ ಗಂಗಾನದಿಯಾಗಿ ಹರಿದಳು. ಭಗೀರಥನ ಸತತ ಪ್ರಯತ್ನಗಳಿಂದ, ಗಂಗೆಯು ಧ್ರುವ ಮಂಡಲದ ಮೇಲೆ ಬಿದ್ದು ಕೆಳಗಿನ ಲೋಕಗಳಲ್ಲಿ ಹರಿಯುತ್ತಾ ಭೂಲೋಕ; ಪಾತಾಳಲೋಕಗಳಲ್ಲಿ ಭಾಗೀರಥಿಯಾಗಿ ಹರಿದಳು; ಹೀಗೆ ಪವಿತ್ರಳಾದ ಗಂಗೆಯು ತ್ರಿಪಥಗಾಮಿನಿಯಾದಳು.

(೩) ಕುಳ್ಳ ಬ್ರಹ್ಮಚಾರಿಯಾಗಿ ಬಂದ ವಾಮನನು, ತಾನು ಬೇಡಿಪಡೆದ ಮೂರುಪಾದ ಭೂಮಿದಾನದಲ್ಲಿ, ಎರಡೇ ಪಾದಗಳಲ್ಲಿ ಭೂ–ವ್ಯೋಮ_ಗಳೆರಡನ್ನೂ ಅಳೆದುಕೊಂಡು ಬಲಿಚಕ್ರವರ್ತಿಯ ಸರ್ವಸ್ವವನ್ನು ಅಪಹರಿಸಿ, ತನ್ನ ಮೂರನೇಯ ಪಾದಕ್ಕೆ ಸ್ಥಳವೆಲ್ಲಿ ಎಂದು ಆ ಬಲಿಯನ್ನು ಕೇಳಿದನು. ಅದಕ್ಕೆ ಬಲಿಯು, ತ್ರಿವಿಕ್ರಮನು ತನ್ನ ಮೂರನೇಯ ಪಾದವಿಡಲು ತನ್ನ ತಲೆಯನ್ನೇ ತೋರಿಸಿ ತಲೆಬಾಗಿ ಕುಳಿತನು. ಆಗ ಬಲಿಯಮುತ್ತಜ್ಜನಾದ ಪ್ರಲ್ಹಾದನೂ ಬಲಿಯ ಪತ್ನಿಯಾದ ವಿಂಧ್ಯಾವಳಿಯೂ ಹಾಗೂ ಬ್ರಹ್ಮದೇವನೂ ಬಲಿಯನ್ನು ಅನುಗ್ರಹಿಸುವಂತೆ ತ್ರಿವಿಕ್ರಮನನ್ನು ಪ್ರಾರ್ಥಿಸಿಕೊಂಡರು. ಆ ಪ್ರಾರ್ಥನೆಗೆ ತ್ರಿವಿಕ್ರಮರೂಪೀ ಭಗವಂತನು, "ಈತನು (ಬಲಿಯು) ಮುಂದೆ ಸಾವರ್ಣೀ ಮನ್ವಂತರದಲ್ಲಿ ಇಂದ್ರನಾಗಿ ಮತ್ತೊಮ್ಮೆ ತ್ರಿಲೋಕಾಧಿಪ ನಾಗುವನು; ಈಗ ಸುತಲ ಲೋಕಕ್ಕೆ ತನ್ನ ಸಕಲ ಪರಿವಾರದೊಂದಿಗೆ ಪ್ರಯಾಣ ಮಾಡಿ ಅಲ್ಲಿ ಸರ್ವಾಧಿಪತಿಯಾಗಿರಲಿ; ಅಲ್ಲಿ ಅವನಿಗೆ ಯಾವ ಬಾಧೆಯೂ ಇರಲಾರದು. ನಾನು ಅಲ್ಲಿ ಸರ್ವದಾ ಈತನ ಗೃಹ ದ್ವಾರದಲ್ಲಿ ಗದಾಧಾರಿಯಾಗಿ ಇದ್ದು ಆಗಾಗದರ್ಶನ ನೀಡುತ್ತ ಅನುಗ್ರಹಿಸುವೆನು" ಎಂದು ಹೇಳಿ, "ನೀನೂ ಅಲ್ಲಿ ವಾಸಿಸಿದ್ದು ನನ್ನ ದರ್ಶನ ಮಾಡುತ್ತಲಿರು." ಎಂದು ಪ್ರಲ್ಹಾದನಿಗೂ ಅನುಗ್ರಹಿಸಿದನು.



ಇಂದ್ರನು – ದೇವತೆಗಳಿಗೆ ತ್ರಿಲೋಕಾಧಿಪತ್ಯವನ್ನು ಮರಳಿ ದೊರಕಿಸಿಕೊಟ್ಟ – ವಾಮನಮೂರ್ತಿಯನ್ನು ಸಕಲ ವೈಭವಗಳೊಂದಿಗೆ ಅಮರಾವತಿಗೆ ಕರೆದೊಯ್ದು ಪೂಜಿಸಿದನು.

ಈ ಬಗೆಯಿಂದ ವಾಮನಾವತಾರದಲ್ಲಿ ತ್ರಿವಿಕ್ರಮರೂಪದಿಂದ ಮೂರು ವಿಕ್ರಮ ಗಳಿಸಿದಂಥ,[೪೦] –**ಶ್ರೀಹರಿಯು.**

(೧) ಗರುಡನಿಲ್ಲದೆ ಮೂರು ಲೋಕಗಳಲ್ಲಿ ಪಾದಗಳನ್ನು ಇಡುವಂಥ – **ಶ್ರೀಹರಿಯು.**

(೨) ಋಕ್–ಯಜು–ಸಾಮ ಈ ಮೂರು ವೇದಗಳಲ್ಲಿಯೂ, ಭೂತ, ವರ್ತಮಾನ, ಭವಿಷ್ಯತ್ ಈ ಮೂರೂ ಕಾಲಗಳಲ್ಲಿಯೂ; ಸತ್ವ, ರಜ, ತಾನು ಈ ಮೂರು ಗುಣಗಳಲ್ಲಿಯೂ; ಸ್ವರ್ಗ, ಭೂ, ಪಾತಾಳ ಈ ಮೂರು ಲೋಕಗಳಲ್ಲಿಯೂ, ದೇವ, ಮಾನವ, ದಾನವ ಈ ಮೂವರಲ್ಲಿಯೂ; ಚೇತನ, ಅಚೇತನ, ಅವುಗಳೆರಡರ ಮಿಶ್ರದೇಹಗಳಲ್ಲಿಯೂ ಪಾದವಿರಿಸಬಲ್ಲಂಥ – **ಶ್ರೀಹರಿಯು.**

(೩) ಅತ್ರಿಋಷಿಗೆ ತಾನೇ ಶಿಶುವಾಗಿ ಒಪ್ಪಿಸಿಕೊಂಡಂಥ – "ದತ್ತ" ರೂಪಿಯಾದ[೪೧] – **ಶ್ರೀಹರಿಯು.**

**೭೧. ಅಚ್ಯುತ**

**ಅಚ್ಯತೇಯೋ ಗುಣೌಃ ನಿತ್ಯಮೇವಾಖಿತೌಃ।**
**ಪ್ರನ್ಯುತೋ ಆಕ್ರೇಷ ದೋಷೌಸದಾಪೂರ್ತಿತಃ – ದ್ವಾದಶಃ ಸ್ತೋತ್ರ**

ಹಾಗೂ ಇಲ್ಲದೆ ಇದ್ದ, ಎಲ್ಲ ಗುಣಗಳಿಂದ ಪೂರ್ಣನಾಗಿದ್ದು, ಯಾವಚಿಂತಾದಿ ಸಕಲ ದೋಷಗಳು ಇಲ್ಲದಂಥ – **ಶ್ರೀಹರಿಯು**

**ಚಿಂತಾಸಂತಾಪ ಲೇಪೋದ್ಭವ ಮೃತಿಮ್ತುಖಸ।**
**ಅಶೇಷ ದೋಷಾದಿ ದೂರಂ ॥ – ತತ್ವಪ್ರಕಾಶಿಕಾ – ಜಯತೀರ್ಥರು**

ಸ್ವರೂಪದಿಂದ, ಗುಣದಿಂದ ಹಾಗೂ ಕ್ರಿಯೆಯಿಂದ ಚ್ಯುತಿ ಇಲ್ಲದವನು. "ತನಗೆ ಯಾವುದೇ ರೀತಿಯ ಚ್ಯುತಿ ಇಲ್ಲದೆ ಇರುವುದರಿಂದ ತಾನು ಅಚ್ಯುತ ಎಂದೆನಿಸಿರುವೆನೆಂದು ಭಗವಂತನು ತಿಳಿಸಿರುವನು"[೪೨]

**೭೨. ವರಹ**

ಸ್ವಾಯಂಭುವ ಮನುವು ಸೃಷ್ಟಿಕಾರ್ಯಕ್ಕೆ ತೊಡಗಿದಾಗ, ದಿನಪ್ರಳಯದ ಜಲದಲ್ಲಿ ಮುಳುಗಿದ ಭೂಮಂಡಲವನ್ನು ಮೇಲೆತ್ತಿ ಸ್ಥಿರವಾಗಿ ನಿಲ್ಲಿಸಲು ಬ್ರಹ್ಮದೇವರೇ ಶ್ರೀಹರಿಯನ್ನು ಪ್ರಾರ್ಥಿಸಿದರು. ಅದಕ್ಕನುಗುಣವಾಗಿ ಶ್ರೀಹರಿಯು ಬ್ರಹ್ಮದೇವರ ನಾಸಿಕದಿಂದ ಅಂಗುಷ್ಠ ಪ್ರಮಾಣದಲ್ಲಿ ಚಿಕ್ಕ ವರಹ ರೂಪದಿಂದ ಪ್ರಾದುರ್ಭವಿಸಿ (ಅವತರಿಸಿ) ಕ್ಷಣ ಮಾತ್ರದಲ್ಲಿ ಬೃಹದಾಕಾರವಾಗಿ ಬೆಳೆದು, ಪ್ರಳಯ ಜಲದಲ್ಲಿ ಹೊಕ್ಕು ಪ್ರತಿಭಟಿಸಿದ, ಬ್ರಹ್ಮನಿಂದ ಹುಟ್ಟಿದ

೪೦. ಶ್ರೀಮದ್ಭಾಗವತ ಅಷ್ಟಮಸ್ಕಂಧ – ಅಧ್ಯಾಯ ೧೨ರಿಂದ ೨೨.
೪೧. ಶ್ರೀವಿಷ್ಣು ಸಹಸ್ರನಾಮಕ್ಕೆ – ಶ್ರೀಸತ್ಯಸಂಧರಟೀಕೆ–ನಾಮ ೫೨೭ "ತ್ರಿವಿಕ್ರಮ" ನಾಮಕ್ಕೆ ಪು – ೬೪.
೪೨. ಮಹಾಭಾರತ ಶಾಂತಿಪರ್ವ ೩೪೨–೭೧

ಆದಿಹಿರಣ್ಯಾಕ್ಯನೆಂಬ ದೈತ್ಯನನ್ನು ತನ್ನ ಕೋರೆ ದಾಡಿಯಿಂದ ಬಡಿದುಕೊಂದು, ಭೂಮಂಡಲವನ್ನು ಕೋರೆದಾಡಿಯ ಮೇಲೆ ಧರಿಸಿ, ಮೇಲೆ ತಂದು ಸ್ಥಾಪಿಸಿದನು.[೪೩]

ಪುನಃ ಕಶ್ಯಪರ ಪತ್ನಿಯಾದ ದಿತಿಯ ಮಕ್ಕಳಲ್ಲಿ ಕಿರಿಯನಾದ ಹಿರಣ್ಯಾಕ್ಷನು ವಿಷ್ಣು ಪಾರ್ಷದ (ದ್ವಾರಪಾಲಕ)ನಾದ ವಿಜಯನಿಂದ ಆವಿಷ್ಟನಾಗಿ ಹುಟ್ಟಿ, ಭೂಮಿಯನ್ನು ಅಪಹರಿಸಲು – ಶ್ರೀಹರಿಯು – ಕೃತಯುಗದಲ್ಲಿ ಶುಕ್ಲ ಸಂವತ್ಸರದ ಮಾಘ ಶುದ್ಧ ಸಪ್ತಮಿ, ಅಶ್ವಿನಿ ನಕ್ಷತ್ರ, ಸಾಧನನಾಮ ಯೋಗ, ಭಾನುವಾರ ದಿನ ಹಗಲು ಎಂಟು ಘಳಿಗೆಗೆ ವರಹಾವತಾರ ತಾಳಿ, ಅಂಗೈ ತಳದಿಂದ ಕಿವಿಯ ಬುಡಕ್ಕೆ ಹೊಡೆದು ಅವನನ್ನು ವಧಿಸಿ, ಧರಾದೇವಿಯನ್ನು ಉದ್ಧರಿಸಿದನು. ಹೀಗೆ ಮತ್ಸಾವತಾರದಂತೆ ವರಾಹಾವತಾರವೂ ಎರಡಾವರ್ತಿಯಲ್ಲಿ ಪ್ರಾಧುರ್ಭವಿಸಿದಂಥ,[೪೪] – **ಶ್ರೀಹರಿಯು.**

ಇಬ್ಬರು ಹಿರಣ್ಯಾಕ್ಷರು – ವರಾಹಾವತಾರವೂ ಎರಡು ಸಲ!

ಮೊದಲನೇಯವನು ಆದಿಯಲ್ಲಿ ಬ್ರಹ್ಮದೇವರಿಂದ ಹುಟ್ಟಿದನು. ಇವನು ಭೂಮಿಯನ್ನು ಅಪಹರಿಸಲಿಲ್ಲ. ಭೂಮಿತಾನಾಗಿ ಮುಳುಗಿತ್ತು. ಶ್ವೇತವರಾಹ ರೂಪದಿಂದ ಹರಿಯು ಆ ದೈತ್ಯನನ್ನು ದಾಡೆಯಿಂದ ಕೊಂದನು. ಎರಡನೇ ಹಿರಣ್ಯಾಕ್ಷನು ಮೊದಲನೇಯ ಹಿರಣ್ಯಾಕ್ಷದೈತ್ಯನ ಆವೇಶದಿಂದ ಕೂಡಿ, ಏಳನೇಯ ಮನ್ವಂತರದಲ್ಲಿ ಕಶ್ಯಪ–ದಿತಿಯಲ್ಲಿ ಹುಟ್ಟಿ, ಭೂಮಿಯನ್ನು ಕದ್ದು ನೀರೊಳಗೆ ಮುಳುಗಿದ್ದನು. ಆಗ ಶ್ರೀಹರಿಯು ನೀಲವರಾಹನಾಗಿ ಅವನ ಕಿವಿಯ ಬುಡದಲ್ಲಿ ತಳಹಸ್ತದಿಂದ ಹೊಡೆದು ಕೊಂದನು.[೪೫]

**೭೩. ವಾಮನ**

(ಎ) ನಾಮ –೭೦– ತ್ರಿವಿಕ್ರಮ_ನೋಡಿರಿ

ಶ್ರೀಮನ್ನಾರಾಯಣನು ಅದಿತಿ ದೇವಿಯಲ್ಲಿ, ತ್ರೇತಾಯುಗದಲ್ಲಿ ಧಾತು ನಾಮ ಸಂವತ್ಸರ, ಭಾದ್ರಪದ ಶುದ್ಧ ದ್ವಾದಶಿ, ಶ್ರವಣಾನಕ್ಷತ್ರ ಧೃತಿನಾಮ ಯೋಗ, ಶುಕ್ರವಾರದದಿನ, ಹಗಲು ಹದಿನೈದು ಘಳಿಗೆಗೆ, "ವಾಮನ" ನೆಂಬ ನಾಮದಿಂದ ಅವತರಿಸಿದನು.[೪೬]

(ಬಿ) ಸೌಂದರ್ಯ ಪ್ರಧಾನಳಾಗಿರುವ ಸ್ತ್ರೀಯನ್ನು ಪ್ರೇರಿಸುವಂಥ – ಶ್ರೀಹರಿಯು.

ಭಗವಂತನು ಸೌಂದರ್ಯಪ್ರಧಾನರಾಗಿದ್ದು – "ವಾಮ" ಎನಿಸುವ ಸ್ತ್ರೀಯನ್ನು ನಿಯಮಿಸುವುದರಿಂದಲೇ – "ವಾಮನಿ" ಎನಿಸುವನೆಂದು, "ಛಾಂದೋದ್ಯೋಪನಿಷತ್ತು" ಸಂದೇಶಿಸಿದೆ[೪೭].

ನಾಮ – ೭೦, "ತ್ರಿವಿಕ್ರಮ; "ಕಶ್ಯಪಸುತ" "ಉಪೇಂದ್ರ" ನೋಡಿರಿ.

---

೪೩. ಶ್ರೀಮದ್ಭಾಗವತ ಮೂರನೇಯ ಸ್ಕಂಧ, ಹದಿನಾಲ್ಕನೇಯ ಹಾಗೂ ಇಪ್ಪತ್ತನೇಯ ಅಧ್ಯಾಯ.
೪೪. ಶ್ರೀಮದ್ ಮಹಾಭಾರತ ತಾತ್ಪಾರ್ಯನಿರ್ಣಯ ಅಧ್ಯಾಯ ಮೂರನೇಯದು, ಶ್ಲೋಕಗಳು 39,40,41 ಇವುಗಳ ಸಾರಾಂಶ
೪೫. ಶ್ರೀಜಗನ್ನಾಥದಾಸಾರ್ಯವಿರಚಿತ – "ತತ್ವಸುವ್ವಾಲಿಗೆ" ಟಿಪ್ಪಣಿ ಗ್ರಂಥ ಶ್ರೀ ಹರಿದಾಸಭಾರತಿ ಗ್ರಂಥಮಾಲೆಯ – ವಿಜಯಾಂಕರತ್ನ – ೭" ರ ಪುಟ ೧೨೪ ಹಾಗೂ ೧೭೫.
೪೬. ವರದೇಂದ್ರ ಸಾಹಿತ್ಯಮಾಲೆಯ, "ವಿಜಯದಾಸರಸ್ತೋತ್ರ ಸುಳಾದಿಗಳು" ಪುಟ – ೩೬೭
೪೭. ಶ್ರೀವಿಷ್ಣು ಸಹಸ್ರ ನಾಮ ಸ್ತೋತ್ರಕ್ಕೆ _ ಉಡುಪಿ ಟೀಕೆ ನಾಮ ೧೫೬ "ವಾಮನ" ನಾಮಕ್ಕೆ ಪುಟ ೫೭೮



**೭೪. ನಕ್ರಶಿಕ್ಷಕ**

"ಹೂಹೂ" ಎಂಬ ಗಂಧರ್ವನು ಒಮ್ಮೆ ಮೊಸಳೆಯಾಗಿ ವಿನೋದದಿಂದ ಜಲವಿಹಾರ ಮಾಡುತ್ತಿದ್ದ ಸ್ಥಳಕ್ಕೆ ಬಂದಿಳಿದ "ದೇವಲ" ನೆಂಬ ಮಹರ್ಷಿಯ ಪಾದವನ್ನು ಹಿಡಿದು ನೀರಿನೊಳಕ್ಕೆ ಎಳೆದು ಬೆದರಿಸಿದ್ದನು. ಆಗ ಆ ಮಹರ್ಷಿಯು, "ಎಲೋ ದುಷ್ಟನೇ ನಿನಗೆ ಈ ಮೊಸಳೆಯ ಜನ್ಮವೇ ಸ್ಥಿರವಾಗಿ ಪ್ರಾಪ್ತವಾಗಲಿ" ಎಂದು ಶಪಿಸಿದ್ದನು. ಶಾಪ ವಾಕ್ಯವನ್ನು ಕೇಳಿ ಬೆದರಿದ ಗಂಧರ್ವನು ತನಗೆ ವಿಶಾಪವನ್ನು ಬೇಡಲು, "ಮುಂದೆ ಒಮ್ಮೆ ಒಂದು ಗಜವು ಬಂದು ನೀರು ಕುಡಿಯಲು ಈ ಸರೋವರದಲ್ಲಿ ಇಳಿದಾಗಲೂ ನೀನು ಹೀಗೆಯೇ ಅದರ ಪಾದವನ್ನು ಹಿಡಿದು ಬಾಧಿಸುವ ಸಂದರ್ಭವೊದಗುವದು. ಆಗ ಭಗವಂತನ ಚಕ್ರ ಪ್ರಯೋಗದಿಂದ ನಿನ್ನ ಈ ಮೊಸಳೆಯ ಜನ್ಮ ನೀಗಿ ನಿನ್ನ ನಿಜ ಗಂಧರ್ವ ಜನ್ಮ ಪ್ರಾಪ್ತವಾಗುವದು" ಎಂದು ಆ ದೇವಋುಷಿಯು ನುಡಿದಿದ್ದನು.

ಒಮ್ಮೆ ಇಂದ್ರದುಮ್ನನೆಂಬ ಪಾಂಡ್ಯದೇಶದ ದ್ರವಿಡರಾಜನು ಮೌನವೃತದಿಂದ ಶ್ರೀವಿಷ್ಣು ಪೂಜಾದಲ್ಲಿ ನಿಮಗ್ನನಾದಾಗ – "ಅಗಸ್ತ್ಯ" ಮುನಿಗಳು ಆತನ ಮಲಯ ಪರ್ವತದಲ್ಲಿಯ ಆಶ್ರಮಕ್ಕೆ ಆಗಮಿಸಿದರು. ಆಗ್ಗೆ ಎದ್ದು ಅರ್ಘ್ಯಪಾದ್ಯಾದಿಗಳಿಂದ ಸೇವೆ ಸಲ್ಲಿಸದಿದ್ದ ಕಾರಣ ಆ ಅಗಸ್ತ್ಯ ಮುನಿಗಳು, "ನೀನು ಗರ್ವಿಷ್ಠನಾದ್ದರಿಂದ ಮದೋನ್ಮತ್ತವಾದ ಗಜನಾಗೆಂದು" ಶಾಪಕೊಟ್ಟನು.

ಕಾಲಾಂತರದಲ್ಲಿ, ಅಗಸ್ತ್ಯಮುನಿಗಳ ಶಾಪದಿಂದ, ಪರಮವಿಷ್ಣು ಭಕ್ತನಾದ ಆ ಇಂದ್ರದ್ಯುಮ್ನನೆಂಬ ಪಾಂಡ್ಯದೇಶದ ದ್ರವಿಡರಾಜನು 'ಆನೆಯಾಗಿ ತನ್ನ ಬಳಗ ಸಹಿತ ಜಲಕ್ರೀಡೆಯಾಡುತ್ತಿರುವಾಗ್ಗೆ, ದೇವಲ ಋಷಿಯ ಶಾಪಕ್ಕೊಳಗಾದ ಆ ಮೊಸಳೆಯು ಈ ಆನೆಯ – ಗಜೇಂದ್ರನ – ಕಾಲನ್ನೂ ಹಿಡಿದು ನೀರಿನಲ್ಲಿ ಎಳೆಯತೊಡಗಿತು. ಆಗ್ಗೆ ಅದು ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿಕೊಂಡರೂ ಕಡೆಗೆ ಬರಲಾಗಲಿಲ್ಲ; ಹಾಗೂ ತನ್ನ ಬಳಗದ ಆನೆಗಳ ಶಕ್ತಿಯ ಸಹಾಯಪಡೆದುಕೊಂಡರೂ ಮೇಲೆ ಬರಲಾಗಲಿಲ್ಲ. ಅದಕ್ಕೆ ತನ್ನ ಸಾವಿನ ಭಯ ಉಂಟಾಗಿ, ತನ್ನ ಪೂರ್ವಜನ್ಮದ ಅರಿವು ಉಂಟಾಗಿ–

**ಓಂ ನಮೋ ಭಗವತೇ ತಸ್ಮೈಯತ ಏತಚ್ಚಿದಾತ್ಮಕಂ ।**
**ಪುರುಷಾಯಾದಿ ಬೀಜಾಯ ಪರೇಶಾಯ ಚ ಧೀಮಹಿ ॥**

ಎಂದು ಪರಮಾತ್ಮನನ್ನು ಭಕ್ತಿ ಪೂರ್ವಕವಾಗಿ ಸ್ತೋತ್ರ ಮಾಡತೊಡಗಿತು. ನಾಲ್ಕನೇಯ ಮನ್ವಂತರದಲ್ಲಿ ಪ್ರಿಯವೃತ ರಾಜನಿಗೆ ಹರಿಣೀ ಎಂಬ ಆತನ ಪತ್ನಿಯಲ್ಲಿ ಹರಿ ನಾಮಕನಾಗಿ ಅವತರಿಸಿದ ಭಗವಂತನು ಗಜೇಂದ್ರನಿದ್ದ ಸ್ಥಳದಲ್ಲಿಯೇ ಪ್ರಕಟನಾದನು. ಗಗನದಲ್ಲಿ ಗರುಡನ ಮೇಲೆ ಕುಳಿತು ಚಕ್ರಪಾಣಿಯಾಗಿ ತನ್ನನ್ನು ರಕ್ಷಿಸಲು ಸಿದ್ಧನಾಗಿ ಬಂದ ಶ್ರೀಹರಿಯನ್ನು ಗಜೇಂದ್ರನು ನೋಡಿ, ಕೂಡಲೇ ಸೊಂಡಿಲಿನಿಂದ ಅದೇ ಸರೋವರದಲ್ಲಿದ್ದ ಕಮಲ ಪುಷ್ಪವೊಂದನ್ನು ಕಿತ್ತು ಎತ್ತಿ ಹಿಡಿದು, ಸರ್ವಸಮರ್ಪಣಾ ಭಾವದಿಂದ "ನಾರಾಯಣ ಅಖಿಲ ಗುರೋ ಭಗವನ್ನಮಸ್ತೇ" ಎಂದು ಗದ್ಗದ ಸ್ವರದಿಂದ ಪ್ರಯಾಸಪಟ್ಟು ಕೂಗಿಕೊಂಡನು. ಸುಪ್ರೀತನಾದ ಶ್ರೀಹರಿಯು ತನ್ನ ಸುದರ್ಶನ ಚಕ್ರವನ್ನು ಆ ಮೊಸಳೆ – ಅಂದರೆ ನಕ್ರನ ಬಾಯಿಗೆ ಎಸೆದನು. ಸುದರ್ಶನ ಚಕ್ರಸ್ಪರ್ಶದಿಂದ ಆ ನಕ್ರರೂಪದಲ್ಲಿದ್ದ – 'ಹೂಹೂ' ಎಂಬ ಗಂಧರ್ವನು ಶಾಪ ಮುಕ್ತನಾಗಿ ಶ್ರೀಹರಿಗೂ ಅಲ್ಲಿ ನೆರೆದ ಸಮಸ್ತ ದೇವತಾವೃಂದಕ್ಕೂ

ನಮಿಸಿ, ಸ್ತುತಿಸಿ ತನ್ನ ಲೋಕಕ್ಕೆ ತೆರಳಿದನು. ಗಜೇಂದ್ರನ ರೂಪದಲ್ಲಿದ್ದ ಇಂದ್ರದ್ಯುಮ್ನ ರಾಜನು, ಶ್ರೀಹರಿಯ ಹಸ್ತ ಸ್ಪರ್ಶದಿಂದ ಸಾರೂಪ್ಯಮೋಕ್ಷವನ್ನು ಪಡೆದನು.[೪೮]

**೭೫. ನಾಗರಕ್ಷಕ**

ರಮಣಕ ದ್ವೀಪದಲ್ಲಿದ್ದ ಕಾಳಿಂಗವೆಂಬ ಸರ್ಪವು ಒಮ್ಮೆ ಗರುಡನ ಆಹಾರ ತಿಂದು ಬಿಟ್ಟಾಗ ಸಿಟ್ಟಿಗೆದ್ದ ಗರುಡನಿಂದಾಹತನಾಗಿ ಯಮುನೆಯ ಮಡುವಿಗೆ ಬಂದು ಬಿದ್ದಿತು. ಈ ಮಡುವಿನಲ್ಲಿಯ ಮೀನು ತಿಂದ ಗರುಡನಿಗೆ ಸೌಭರಿ ಋಷಿಗಳು, ಪುನಃ ಈ ಮಡುವಿಗೆ ಬಂದರೆ ನಿನಗೆ ಮರಣ ಬಂದೊದಗುವದು; ಎಂದು ಶಾಪ ಕೊಟ್ಟಿದ್ದರು. ಅದರಿಂದ ಆ ಕಾಳಿಂಗನಿಗೆ ಈ ಮಡುವಿನಲ್ಲಿ ಗರುಡನ ಭಯವಿರಲಿಲ್ಲ. ಆದ್ದರಿಂದ ಅದು ನಿರ್ಭೀತವಾಗಿ ಆ ಮಡುವನ್ನೆಲ್ಲ ವಿಷಪೂರಿತಗೊಳಿಸಿತ್ತು.

ಶ್ರೀಕೃಷ್ಣನು ಗೋಪಬಾಲಕರೊಡನೆ ಚಂಡನ್ನಾಡುವಾಗ ಆ ಚಂಡು ಈ ಮಡುವಿನಲ್ಲಿ ಬಿದ್ದಿತು. ಮಡದ ದಡದಲ್ಲಿಯೇ ಇದ್ದ ಮರವನ್ನು ಹತ್ತಿ ಶ್ರೀಕೃಷ್ಣನು ಮಡದಲ್ಲಿ ಧುಮುಕಿ ಆ ಕಾಲಿಯನೊಡನೆ ಕಾದಾಡಿ ಅದರ ಹೆಡೆಯ ಮೇಲೆ ತಾಂಡವ ನೃತ್ಯವನ್ನಾಡಿ ಅದರ ವಿಷವನ್ನೆಲ್ಲ ಕಕ್ಕಿಸಿದನು. ನಾಗಪತ್ನಿಯರು ತಮಗೆ ಮಾಂಗಲ್ಯ ಸೌಭಾಗ್ಯ ದಯಪಾಲಿಸೆಂದು ಶ್ರೀಕೃಷ್ಣನಿಗೆ ಪ್ರಾರ್ಥಿಸಿದರು. ಅದರ ಮೊರೆ ಕೇಳಿ ಆ ಕಾಳಿಂಗನಿಗೆ ಜೀವದಾನಕೊಟ್ಟು, ಅದರ ಹೆಡೆಯ ಮೇಲೆ ತನ್ನ ಪಾದಗಳ ಶ್ರೀ ಚಿನ್ಹೆಗಳು ಮೂಡಿರುವದರಿಂದ ಅದಕ್ಕೆ ಗರುಡನಿಂದ ಇನ್ನೂ ಮುಂದೆ ಭಯವಿಲ್ಲವೆಂದು ಅಭಯಕೊಟ್ಟು, ಸ್ವಸ್ಥಾನವಾದ ರಮಣಕ ದ್ವೀಪಕ್ಕೆ ಹೋಗಲು ಆದೇಶ ನೀಡಿದನು. ಹೀಗೆ ಕಾಳಿಂಗ ಮರ್ದನನಾಗಿ ಯಮುನೆಯ ನೀರನ್ನು ನಿರ್ಮಲಗೊಳಿಸಿದಂಥ ಶ್ರೀಕೃಷ್ಣಾವತಾರದ[೪೯] – **ಶ್ರೀಹರಿಯು.**

**೭೬. ನಿತ್ಯತೃಪ್ತ**

ಯಾವಾಗಲೂ ತೃಪ್ತಾನಾಗಿರುವಂಥ – **ಶ್ರೀಹರಿಯು**

**೭೭. ಹರಿ.**

ಸರ್ವಯಜ್ಞಗಳಲ್ಲೂ ಹವಿರ್ಭಾಗವನ್ನು ಸ್ವೀಕರಿಸುವವನು ಅಥವಾ ಅಪ್ರಾಕೃತವಾಗಿದ್ದು, ಶ್ರೇಷ್ಠವಾದ ನೀಲಬಣ್ಣವುಳ್ಳವನು.[೫೦]

ಸಕಲ ಜೀವರ ಹೃದಯಸ್ಥಾನಾಗಿ ಆಯಾ ಜೀವರ ಪ್ರೇರಕನೂ ನಿಯಾಮಕನೂ ಆದ ಮಹಾವಿಷ್ಣುವಿಗೆ ಅಂತರಾತ್ಮನೆಂದು ಹೆಸರು ಇಂತಹ ಅಂತರಾತ್ಮನಾದ ಪರಮಾತ್ಮನು ಸರ್ವದಾ ಇಷ್ಟಪ್ರದನು, ಇವನೇ ಸರ್ವಜೀವರ ಬಿಂಬರೂಪಿಯು.[೫೧]

ಲವಲೇಶಸುಖವಿಲ್ಲದ ಸಂಸಾರದಲ್ಲಿ ತೊಳಲುತ್ತಿರುವ ಮುಮುಕ್ಷುಗಳಿಗೆ ಪರಮ ಶ್ರೇಷ್ಠವಾದ (ಸಾರರೂಪವಾದ) ಮೋಕ್ಷೋಪಾಯವನ್ನು ಹೇಳಲಾಗಿದೆ. ಸಕಲ ಲೋಕಗಳಿಗೆ ಪ್ರಭುವಾದ – **ಶ್ರೀಹರಿಯು** ಆರಾಧನೆಯೇ ಇಂತಹ ಉತ್ಕೃಷ್ಟ ಫಲವನ್ನೂ ಕೊಡುವದು,[೫೨]

೪೮. ಶ್ರೀಮದ್ಭಾಗವತ ಅಷ್ಟಮಸ್ಕಂಧ – ೧,೨,೩,೪ನೇಯ ಅಧ್ಯಾಯಗಳು
೪೯. ಶ್ರೀಮದ್ಭಾವತ ದಶಮಸ್ಕಂಧಪೂರ್ವಾರ್ಧ
೫೦. ಮಹಾಭಾರತ ಶಾಂತಿ ಪರ್ವ ೩೪೭–೬೮ ೫೧. ಮಾನಸಸ್ಮೃತಿ
೫೨. ಕೃಷ್ಣಾಮೃತ – ಮಹಾರ್ಣವ – ೭೪



ಭವಸಂಕಟಗಳನ್ನು ಪರಿಹರಿಸುವಂಥ,[೫೩] – **ಶ್ರೀಹರಿಯು**

ರುದ್ರ, ಯಮ, ವರುಣ – ಮುಂತಾದ ಎಲ್ಲ ದೇವತೆಗಳನ್ನು ಸಂಹರಿಸುವದರಿಂದ ಹರಿ ಎಂದೆನಿಸಿರುವನು ಇಂಥ – **ಶ್ರೀಹರಿಯು**

**೭೮. ಶಕ್ರ ಅರ್ಚಿತಪಾದಾಬ್ಜ**

ನಂದಗೋಪನು ಇಂದ್ರಪರ್ವಮಾಡಿ ಇಂದ್ರನನ್ನು ಆರಾಧಿಸಬಯಸಿದಾಗ ಶ್ರೀಕೃಷ್ಣನು ಅದನ್ನೊಪ್ಪದೆ ತಡೆದದ್ದಕ್ಕಾಗಿ ಇಂದ್ರನು ಕೋಪಗೊಂಡು ಅಸುರಾವೇಶಪೂರಿತನಾಗಿ ಕಾರ್ಮೋಡಗಳಿಗೆ ಆಜ್ಞೆ ಇತ್ತು ಧಾರಾಕಾರವಾಗಿ ಏಳು ದಿನಗಳವರೆಗೆ ಮಳೆಗರೆಸಿದನು. ಆಗ ಗೋಪಾಲಕರೆಲ್ಲರೂ ಶ್ರೀಕೃಷ್ಣನಿಗೆ ಮೊರೆ ಹೋಗಲು, ತನ್ನ ಕಿರಿಬೆರಳಿನಿಂದ ಗೋವರ್ಧನ ಗಿರಿಯನ್ನೆತ್ತಿ ಗೋಪಗೋವುಗಳಿಗೆ ಆಶ್ರಯನೀಡಿ ರಕ್ಷಿಸಿದನು. ಇಂದ್ರನು ಅಸುರಾವೇಶ ತೊಲಗಲು ಶ್ರೀಕೃಷ್ಣನಲ್ಲಿ ತನ್ನ ತಪ್ಪನ್ನೊಪ್ಪಿಕೊಂಡು, ಗಂಗಾಜಲದಿಂದ ಆತನ ಪಾದಗಳಿಗೆ ಅಭಿಷೇಕ ಮಾಡಿ, ಸಕಲ ದೇವತೆಗಳೊಂದಿಗೆ ಪೂಜೆ ಸಲ್ಲಿಸಿ ಸ್ವರ್ಗಕ್ಕೆ ತೆರಳಿದನು.[೫೪]

(ಬಿ) ವರಾಹಾವತಾರಿಯ ಬೆವರಿನಿಂದ ಉದಿಸಿದ ಭೂಪುತ್ರ ನರಕಾಸುರನು, ಅದಿತಿಯ ಕರ್ಣಕುಂಡಲಾದಿಗಳನ್ನು ಅಪಹರಿಸಿಕೊಂಡೊಯ್ದನೆಂದು ಇಂದ್ರನು ಶ್ರೀಕೃಷ್ಣನಿಗೆ ಮೊರೆ ಇಡಲು, ಶ್ರೀಕೃಷ್ಣನು ಸತ್ಯಭಾಮೆಯೊಡನೆ ಗರುಡನನ್ನೇರಿ ಪ್ರಾಗ್ಜ್ಯೋತಿಷನೆಂಬ ನರಕಾಸುರನ ಪಟ್ಟಣದ ಒಳಗೆ ಬಂದು, ಆ ನಗರದ ರಕ್ಷಣೆಗೆ ಬಂದ ಐದು ತಲೆಗಳುಳ್ಳ ಮುರಾಸುರನೆಂಬ ನರಕಾಸುರನ ಸೇನಾಪತಿಯನ್ನು ಕೊಂದು– **“ಮುರಹರ”** ನೆನಿಸಿಕೊಂಡು, ಯುದ್ಧಕ್ಕೆ ಬಂದ ನರಕಾಸುರನನ್ನು ಸುದರ್ಶನ ಚಕ್ರದಿಂದ ಹೊಡೆದುಕೊಂದನು. ಶ್ರೀಕೃಷ್ಣನು ಪಟ್ಟಣದೊಳಗೆ ಬಂದು, ನರಕಾಸುರನು ಕಿತ್ತುಕೊಂಡಿದ್ದ ಮಣಿಪರ್ವತವನ್ನು ಇಂದ್ರನಿಗೂ, ಅಮೃತಸ್ರಾವಿಯಾದ ಶ್ವೇತಛತ್ರವನ್ನು ವರುಣನಿಗೂ ಕಳುಹಿಸಿ, ಅಂತಃಪುರಕ್ಕೆ ಬಂದನು. ಅಲ್ಲಿದ್ದ ಭೂದೇವಿಯು ಅದಿತಿಯ ಕರ್ಣಕುಂಡಲಗಳನ್ನು ಶ್ರೀಕೃಷ್ಣನಿಗೆ ಅರ್ಪಿಸಿ–

**ನಮಃ ಪಂಕಜನಾಭಾಯ ನಮಃ ಪಂಕಜ ಮಾಲಿನೇ ।**
**ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘಯೇ ॥**

ಎಂದು ಸ್ತುತಿಸಿದಳು. ಭೂದೇವಿಯ ಕೋರಿಕೆಯಂತೆ ನರಕಾಸುರನ ಮಗನಾದ ಭಗದತ್ತನಿಗೆ ಅಭಯಕೊಟ್ಟು ಆ ರಾಜ್ಯದ ಸಿಂಹಾಸನದಲ್ಲಿ ಸ್ಥಾಪಿಸಿದನು. ಬಳಿಕ ಶ್ರೀಕೃಷ್ಣನು ದೇವಲೋಕಕ್ಕೆ ತೆರಳಿ, ಇಂದ್ರನಿಂದ ಪೂಜಿತನಾಗಿ ಅದಿತಿದೇವಿಗೆ ಕರ್ಣಕುಂಡಲುಗಳನ್ನು ಒಪ್ಪಿಸಿದನು.

(ಸಿ) ಆದಿತಿಯ ಕರ್ಣಕುಂಡಲುಗಳನ್ನು ಅವಳಿಗೆ ಒಪ್ಪಿಸಿ ಮರಳಿ ಬರುವ ಕಾಲಕ್ಕೆ ಶ್ರೀಕೃಷ್ಣನು ಸತ್ಯಭಾಮೆಯನ್ನೊಡಗೂಡಿ ನಂದನ ವನಕ್ಕೆ ಬರಲು, ಅಲ್ಲಿ ದೇವಕುಸುಮವಾದ – **“ಪಾರಿಜಾತ”** ಪುಷ್ಪದ ವಾಸನೆಯನ್ನು ಅಘ್ರಾಣಿಸಿದರು. ಸತ್ಯಭಾಮೆಯು ಆ ದೇವತರುವು ತನಗೆಬೇಕೆಂದು ಹಟಹಿಡಿದಾಗ ಶ್ರೀಕೃಷ್ಣನು ಅದು ಪೌಲೋಮಿಭೃಗು ಪತ್ನಿಯಾದ ಪುಲೋಮೆಯಲ್ಲಿ ಪುಲೋಮಾಸುರನಿಂದ ಜನಿಸಿದವಳು. ಇಂದ್ರ ಪತ್ನಿ, ಶಚಿಯು – ಸಿಟ್ಟಿಗೇಳುವಳು; ಹಾಗೂ ಯುದ್ಧ ಮಾಡಬೇಕಾಗುವದು; ಎಂದು ಹೇಳಿದರೂ ಸತ್ಯಭಾಮೆಯು

೫೩. ಶ್ರೀಮದ್ಭಾಗವತ ದ್ವಿತೀಯಸ್ಕಂಧ – ಏಳನೇಯ ಅಧ್ಯಾಯ
೫೪. ಶ್ರೀವದ್ಭಾಗವತ ದಶಮಸ್ಕಂಧ ಪೂರ್ವಾರ್ಧ, ಅಧ್ಯಾಯ ೨೨,೨೩,೨೪,೨೫

ತನ್ನ ಹಟ ಬಿಡದ ಪ್ರಯುಕ್ತ ಕಾವಲುಗಾರರನ್ನು ಲೆಕ್ಕಿಸದೆ ಅದನ್ನು ಕಿತ್ತು ಗರುಡನ ಹೆಗಲ ಮೇಲೆ ಹೇರಿಕೊಂಡು ಬರತೊಡಗಿದಾಗ, ಶಚಿಯ ಅಪಹಾಸ್ಯದ ಮಾತುಗಳಿಂದರೇಗಿದ ಇಂದ್ರನು ದೇವತೆಗಳಿಂದೊಡಗೂಡಿ ಯುದ್ಧಕ್ಕೆ ಬಂದನು. ಆ ಯುದ್ಧದಲ್ಲಿ ಪರಾಜಿತನಾದ ಇಂದ್ರನು, ಶ್ರೀಕೃಷ್ಣ – ಸತ್ಯ ಭಾಮೆಯರನ್ನು ಸ್ತುತಿಸಿ, ಅವರ ಚರಣಾಗಳಿಗೆ ವಂದಿಸಿ, ಮರಳಿ ಸ್ವರ್ಗಕ್ಕೆ ಹೋದನು. ಶ್ರೀಕೃಷ್ಣನು ದೇವೇಂದ್ರನಿಗೆ, "ನಾನು ದೇವಲೋಕಕ್ಕೆ ತೆರಳುವಾಗ ಈ ವೃಕ್ಷವೂ ನಂದನವನಕ್ಕೆ ಬಂದು ಸೇರುವದು; ಅದರಿಂದ ದೇವಲೋಕದ ಮಹಿಮೆಗೆ ಕುಂದು ಬರಲಾರದು" ಎಂದು ಹೇಳಿದನು; ಮತ್ತು ಆ ವೃಕ್ಷವನ್ನು ಸತ್ಯಭಾಮೆಗೆ ವಚನಕೊಟ್ಟಂತೆ ಅವಳ ಮನೆಯಲ್ಲಿ ನೆಟ್ಟನು.[೫೫]

(ಡಿ) ಪುಟ್ಟವಟುರೂಪದಿಂದ ಬಲಿಯಲ್ಲಿ ಮೂರುಪಾದ ಭೂಮಿಯದಾನ ಕೇಳಿ, ಆತನಿಂದ ಪಡೆದುಕೊಂಡು, ಅಳೆಯುವ ಕಾಲಕ್ಕೆ ಮಹದಾಕಾರವಾದ ತ್ರಿವಿಕ್ರಮ ರೂಪತಾಳಿ, ಬಲಿಯಿಂದ ಆತನ ಎಲ್ಲ ಸಾಮ್ರಾಜ್ಯವನ್ನು ಪಡೆದುಕೊಂಡು, ಇಂದ್ರನಿಗೆ ತ್ರಿಲೋಕಾಧಿಪತ್ಯವನ್ನು ದೊರಕಿಸಿಕೊಟ್ಟ ವಾಮನಮೂರ್ತಿಯನ್ನು ತನ್ನ ಸಕಲ ವೈಭವಗಳೊಂದಿಗೆ ಅಮರಾವತಿಗೆ ಕರೆದೊಯ್ದು ಇಂದ್ರನು ಪೂಜಿಸಿದನು.[೫೬]

ಈ ಬಗೆಯಿಂದ ಶಕ್ರ – ಇಂದ್ರನಿಂದ ಪೂಜೆಗೊಂಡು – ಶಕ್ರ ಅರ್ಜಿತ ಪದಾಬ್ಜನಾದಂಥ – **ಶ್ರೀಹರಿಯು**

**೭೯ ಗಿರಿಜಾರ್ಚಿತ ಪಾದಾಬ್ಜ**

ಗಿರಿಜೆ ರಾಮ ಮಂತ್ರದಿಂದ ಪರಮಮಂಗಳೆಯಾದಳು ॥

ಹೀಗೆ ದಾಸರು ಹೇಳಿದ ಪ್ರಕಾರ, ಗಿರಿಜೆಯು ರಾಮಮಂತ್ರ ಧ್ಯಾನದಿಂದ ಸರ್ವಮಂಗಳೆ ಯಾದ್ದರಿಂದ – ಗಿರಿಜಾರ್ಚಿತ ಪದಾಬ್ಜನಾದಂಥ – **ಶ್ರೀಹರಿಯು.**

**"ನ ಚಾಪರಂ ತಸ್ಮಾದವರಂ ಚಿಂತಯತಿ ಪರಂತು ವಿಣ್ಣನಾದಿಕಂ ಚಿಂತ್ಯಾತಿ**

**ಚ ಶಬ್ದಾತು ರುದ್ರಂಚ ಬಲಿನಾಮುಚ ವಿಷ್ಣುಂಚೈವ ಶ್ರಿಯಂ. ಗಿರಂ. ಉಮಾ ಚಿಂತಾಯತಿ ದೇಹಂ ತಥ್ಯಾಜ್ಞಾನ್ನಂ ನ ಚಾಸ್ಮರಾದಿ ತಿ ತತ್ವ ನಿರ್ಣಯೇ ॥೧೪॥**

**– "ಭಾಗವತ ತಾತ್ಪರ್ಯ ನಿರ್ಣಯ ಚತುರ್ಯಸ್ಕಂದ್ ಪಂಚಮೊಧ್ಯಾಯ**

ಅವರ (ಕೆಳಗಿನವ)ರನ್ನು ಚಿಂತಿಸದೇ ವಿಷ್ಣ್ವಾದಿಗಳನ್ನು ಚಿಂತಿಸುತ್ತ ಸತಿ ದೇವಿಯು ದೇಹ ಪರಿತ್ಯಾಗ ಮಾಡಿದಳು. ಹೀಗೆ ಗಿರಿಜಾರ್ಚಿತ ಪದಾಬ್ಜನಾದ – **ಶ್ರೀಹರಿಯು.**

**೮೦. ತ್ರಿವಕ್ರವಧು ಸೌಂದರ್ಯದಾಯಕ**

**ಗಂಧವಿತ್ತಬಲೆಯಳ ಕುಂದನೆಣಿಸದೆ ಪರಮ**
**ಸುಂದರಿಯ ಮಾಡಿ ವಶನಾದ/ವಶನಾದ ಗೋ_**
**ವಿಂದ ಗೋವಿಂದ ನೀನೆಂಥ ಕರುಣಾಳೋ _ ನುಡಿ ೧೪೯**

– ಶ್ರೀ ಜಗನ್ನಾಥದಾಸಾರ್ಯರ – ಸುವ್ವಿಸುವ್ವಾಲಿ

೫೫. ಶ್ರೀಮವದ್ಭಾಗವತ ದಶಮಸ್ಕಂಧಉತ್ತರಾರ್ಧ ೬೬ , ೬೭ನೇಯ ಅಧ್ಯಾಯಗಳು
೫೬. ಶ್ರೀಮದ್ಭಾಗವತ ಅಷ್ಟಮಸ್ಕಂಧ ಅಧ್ಯಾಯ ೧೭ ರಿಂದ ೨೨.



ಕುಬ್ಜೆಯು ಕಂಸನಿಗೆ ನಿತ್ಯವೂ ಗಂಧವನ್ನು ಸಿದ್ಧಪಡಿಸಿಕೊಡುವ ಸೇವಕಿಯು. ಕೃಷ್ಣನು ಧನುರ್ಯಾಗಕ್ಕಾಗಿ ಮಧುರಾಪಟ್ಟಣಕ್ಕೆ ಬಂದು, ರಾಜಮಾರ್ಗದಲ್ಲಿ ನಗರ ವೀಕ್ಷಣೆಗಾಗಿ ಸುತ್ತುತ್ತಿರುವಾಗ, ಕಂಸನಿಗಾಗಿ ಗಂಧವನ್ನು ಒಯ್ಯುತ್ತಿದ್ದ ಕುಬ್ಜೆಯು ಅದನ್ನು ಶ್ರೀಕೃಷ್ಣನಿಗೆ ಭಕ್ತಿಯಿಂದ ಅರ್ಪಿಸಿದಳು. ತ್ರಿವಕ್ರಳಾದ (ಪ್ರಬಲವಾದ ಮೂರು ವಕ್ರತೆಗಳುಳ್ಳ) ಆಕೆಯ ದೇಹವನ್ನೂ, ಗದ್ದವನ್ನು ಹಿಡಿದೆತ್ತಿ, ಶ್ರೀಕೃಷ್ಣನು ತಕ್ಷಣದಲ್ಲಿ ಸರಿಪಡಿಸಿ ಸುಂದರಿಯನ್ನಾಗಿ ಮಾಡಿದನು; ಆಕೆಯು ಆತನ ಅಂಗಸಂಗವನ್ನು ಬಯಸಿ, ತನ್ನ ಮನೆಗೆ ಬರಲು ಆಹ್ವಾನಿಸಿದಳು. ಕಾಲಾಂತರದಲ್ಲಿ, ಶ್ರೀಕೃಷ್ಣನು ಆಕೆಯ ಅಭಿಷ್ಟವನ್ನು ನೆರವೇರಿಸಿ, ಆಕೆಗೆ ವಿಶೋಕನೆಂಬ ಪುತ್ರನನ್ನು ಸಹ ಕರುಣಿಸಿದನು; ವಿಶೋಕನು ನಾರದರಿಂದ ಉಪದೇಶಹೊಂದಿ, ಜ್ಞಾನಿಯಾಗಿ, ಭೀಮಸೇನನ ಸಾರಥಿಯಾದನು. **"ಈ ತ್ರಿವಕ್ರೆಯು ಹಿಂದಿನ ಜನ್ಮದಲ್ಲಿ ಪಿಂಗಳೆಯೆಂಬ ವೇಶ್ಯೆಯಾಗಿದ್ದು, ಮಹಾವಿರಕ್ತಳಾಗಿ, ತನ್ನ ಅಂತರ್ಯಾಮಿಯಾಗಿ ಸದಾ ಸಮೀಪವರ್ತಿಯಾದ ಶ್ರೀಹರಿಯೇ ತನಗೆ ರಮಣನಾಗಬೇಕೆಂದು ಧ್ಯಾನಿಸುತ್ತಾ ದೇಹತ್ಯಾಗ ಮಾಡಿದ್ದಳು". "ಈ ಪಿಂಗಳೆಯಾದರೋ ಕಾಲ ವಿಶೇಷದಲ್ಲಿ ರಮಾವೇಶದಿಂದ ಯುಕ್ತಳಾಗಿ ಶ್ರೀ ಹರಿಯ ಅಂಗಸಂಗವನ್ನು ಹೊಂದಲರ್ಹಳಾದ ಒಬ್ಬ ಅಪ್ಸರೆಯು"**[೫೭]

"ಕುಬ್ಜೆ ಮೂಲತಃ ಭೂದೇವಿ; ದುಷ್ಟ ಅರಸರ ಧರ್ಮ, ಅರ್ಥ, ಕಾಮವೆಂಬ ತ್ರಿವರ್ಗಪಾಲನ ರೂಪ ಭಾರದಿಂದ ಮೂರುಕಡೆ ಮಣಿದು, "ತ್ರಿವಕ್ರೆ" ಎನಿಸಿದ್ದಳು. ಕೃಷ್ಣ ಅವಳನ್ನು ತಿದ್ದಿ, ಬೇಗ ಭೂಭಾರ ಇಳಿಸುವದನ್ನು ಸೂಚಿಸಿದ"[೫೮]

"ಗರ್ಗ ಸಂಹಿತೆಯಂತೆ ಶೂರ್ಪನಖಿಯೇ ಕುಬ್ಜೆಯಾಗಿ ತನ್ನ ಮನೋರಥ ಪೂರೈಸಿ ಕೊಂಡಳು"[೫೯].

"ಹಿಂದೆ ಪಿಂಗಳಾ ಎಂಬ ಅಪ್ಸರೆ – ಶೂರ್ಪನಖಿಯಾಗಿ – ಶ್ರೀರಾಮನನ್ನು ಮೋಹಿಸಿದ್ದಳು"[೬೦,೬೧,೬೨,೬೩]

**೮೧. ಅಕ್ರೂರಾಭಿಷ್ಟದ**

ದುರುಳನಾದ ಕಂಸನು ಅಕ್ರೂರನನ್ನು ನಂದವ್ರಜಕ್ಕೆ ಕಳುಹಿಸಿ, ತಾನು ಏರ್ಪಡಿಸಿದ ಧನುರ್ಯಾಗ ನೋಡಲಿಕ್ಕೆಂದು ರಾಮಕೃಷ್ಣರೀರ್ವರನ್ನೂ ಕರೆತರಲು ಕಳುಹಿಸಿದನು. ಉಭಯಕುಶಲೋಪರಿಗಳು ನಡೆದಾಗ ಕೆಲಸದ ದುರುದ್ದೇಶಗಳನ್ನು ತಿಳಿದುಕೊಂಡು

೫೭. ಭಾಗವತ ತಾತ್ಪರ್ಯ
೫೮. ರಂಗಾಚಾರ್ಯ ಜೋಶಿಕೃತ – ಭಾಗವತ" ಪುಟ – ೮೬೯
೫೯. ಪುರಾಣನಾಮ ಚೂಡಾಮಣಿ – ಪುಟ – ೮೬೭
೬೦. ಪುರಾಣನಾಮ ಚೂಡಾಮಣಿ – ಪುಟ ೨೭೪
೬೧. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ, ೪೦ನೇಯ ಅಧ್ಯಾಯ.
೬೨. ಶ್ರೀ ಜಗನ್ನಾಥದಾಸಾರ್ಯವಿರಚಿತ – "ತತ್ವಸುವ್ವಾಲಿ"ಗೆ ಟಿಪ್ಪಣಿ ಗ್ರಂಥ – ಶ್ರೀಹರಿದಾಸಭಾರತೀ ಗ್ರಂಥಮಾಲೆಯ – "ವಿಜಯಾಂಕರತ್ನ – ೭" ರ ಪುಟ ೧೩೭, ೧೩೮.
೬೩. ಶ್ರೀ ವಾದಿರಾಜತೀರ್ಥ ವಿರಚಿತ – "ಶ್ರೀಕೃಷ್ಣಬಾಲಲೀಲೆ"ಗೆ ಟಿಪ್ಪಣಿ ಗ್ರಂಥ ಶ್ರೀ ಲೋಕೂರ ಕೃತ – ಪೂರ್ವಾರ್ಧ ನುಡಿ – ೮೯ರಿಂದ ೮೦೪

ಅವರೀರ್ವರೂ ಮರುದಿನ ಮಥುರೆಗೆ ಹೋಗುವದಾಗಿ ನಿಶ್ಚಯಿಸಿಕೊಂಡು ತಂದೆ ನಂದನಿಗೆ ತಿಳಿಸಿದರು. ನಂದನು ಅರಸನಿಗೆ ಸಲ್ಲಿಸಬೇಕಾದ ಕಪ್ಪುಕಾಣಿಕೆಗಳೊಂದಿಗೆ ಕೆಲ ಗೋಪ ಬಾಲಕರನ್ನು ಸಿದ್ಧಗೊಳಿಸಿ, ಶ್ರೀಕೃಷ್ಣ ಬಲರಾಮರೊಡನೆ ಕಳುಹಿಸಿದನು. ಅಕ್ರೂರನು ನಂದಗೋಪನಿಂದ ಬೀಳ್ಕೊಂಡು, ಶ್ರೀಕೃಷ್ಣ ಬಲರಾಮರನ್ನು ರಥದಲ್ಲಿ ಕೂಡ್ರಿಸಿಕೊಂಡು ಮಥುರಾ ಮಾರ್ಗವಾಗಿ ನಡೆದನು. ಮಧ್ಯಾನ್ಹ ಸಮಯಕ್ಕೆ ನಡುದಾರಿಯಲ್ಲಿ ಯಮುನಾನದಿಯ ಸಮೀಪಕ್ಕೆ ತಂಗಿ, ಶ್ರೀಕೃಷ್ಣಬಲರಾಮರು ಸ್ನಾನಾದಿಗಳನ್ನೂ ತಾವು ತಂದ ಫಲಾದಿಗಳ ಸೇವನೆಯನ್ನೂ ತೀರಿಸಿಕೊಂಡು ಬಂದು ರಥದಲ್ಲಿ ಕುಳ್ಳಿರಲು, ಅಕ್ರೂರನೂ ಅವರ ಅನುಮತಿ ಪಡೆದು, ತಾನೂ ಆ ಯಮುನೆಯಲ್ಲಿ ಸ್ನಾನ ಮಂತ್ರಾದಿಗಳನ್ನು ತೀರಿಸಿಕೊಳ್ಳಲೆಂದು ನೀರಲ್ಲಿ ಮುಳುಗು ಹಾಕಲು, ಅಲ್ಲಿ ಶ್ರೀಕೃಷ್ಣ ಬಲರಾಮರನ್ನು ಕಂಡು, ಅಚ್ಚರಿಗೊಂಡು, ಮೇಲೆದ್ದು ನೋಡಲು ರಥದಲ್ಲಿ ಅವರೀರ್ವರೂ ಸುಖಾಸೀನ್ನರಾಗಿದ್ದದ್ದನ್ನು ಕಂಡು ಪುನಃ ನೀರಲ್ಲಿ ಮುಳುಗು ಹಾಕಿದನು. ಪುನಃ ಆ ಜಲಮಧ್ಯದಲ್ಲಿ ಸಹಸ್ರ ಫಣಿಗಳಿಂದ ಕೂಡಿದ ಆದಿಶೇಷನನ್ನೂ, ಆಶೇಷನ ಮೇಲೆ ಶಂಖ, ಚಕ್ರ, ಗದಾ, ಪದ್ಮಧಾರಿಯಾಗಿ ದಿವ್ಯಕಿರೀಟ ಕುಂಡಲಾದಿಗಳಿಂದ ಅಲಂಕೃತನೂ, ಪೀತಾಂಬರಧಾರಿಯೂ, ಲಕ್ಷ್ಮೀಮನೋಹರನೂ ಆದ ಸ್ವಾಮಿಯನ್ನು ಕಂಡು ಆಶ್ಚರ್ಯಪಟ್ಟನು. ಆ ಭವ್ಯರೂಪವನ್ನು ಕಂಡು ಅಕ್ರೂರನು ಭಕ್ತ್ಯುದ್ರೇಕ ಪರವಶನಾಗಿ ಸ್ತುತಿ ಮಾಡಿ ಅನಂತ ವಂದನೆಗಳನ್ನರ್ಪಿಸಿ, ಮೇಲೆದ್ದು ಬಂದು, ರಥದಲ್ಲಿ ಮಂದಹಾಸಯುಕ್ತನಾಗಿ ಕುಳಿತಿದ್ದ ಶ್ರೀಕೃಷ್ಣನನ್ನು ಕಂಡು, ಪಾದಾಭಿವಾದನ ಮಾಡಿದನು. ಹೀಗೆ ಅಕ್ರೂರನಿಗೆ ಅಭಿಷ್ಟಪ್ರದನಾದ ಶ್ರೀಕೃಷ್ಣವತಾರದ,[೬೪] – **ಶ್ರೀಹರಿಯು.**

**೮೨. ವಿದುರವರೇಣ್ಯ**

ಧೃತರಾಷ್ಟನಿಗೆ ಹಿತೋಪದೇಶ ನೀಡಿದ್ದರಿಂದ ಕುಪಿತರಾದ ಕುಟಿಲ ಶಕುನಿಗೂ ದುಷ್ಟ ದುರ್ಯೋಧನನಿಗೂ ಹಿಡಿಸಲಿಲ್ಲ. ದುರ್ಯೋಧನನು ವಿದುರನಿಗೆ ಆಡಬಾರದ ಕರ್ಣಕಠೋರ ಮಾತುಗಳನ್ನಾಡಿದ್ದರಿಂದ ಮನನೊಂದ ವಿದುರನು ತನ್ನ ಮಹಾಧನುಸ್ಸನ್ನು ರಾಜಮಹಾದ್ವಾರದಲ್ಲಿಯೇ ಮುರಿದಿಟ್ಟು ತೀರ್ಥಾಟನೆಗೆಂದು ಹೊರಟುಹೋದನು.

ಕಾಲಾಂತರದಿಂದ ತೀರ್ಥಾಟನೆಗೆಂದು ಸಂಚರಿಸುತ್ತಿದ್ದ ವಿದುರನು ಉದ್ಧವನನ್ನು ಕಂಡು, ಆತನಿಂದ ಶ್ರೀಕೃಷ್ಣನು ಪರಂಧಾಮಕ್ಕೆ ಬಿಜಯಂಗೈದ ವೃತ್ತಾಂತವನ್ನು, ತನ್ನ ಕುರುಬಂಧುಗಳ ಮತ್ತು ಯಾದವರ ಮರಣದ ವೃತ್ತಾಂತವನ್ನು ತಿಳಿದು; ಬಹಳ ವ್ಯಥೆಪಟ್ಟನು.

ಉದ್ಧವನಿಂದ ಪ್ರೇರಿತನಾದ ವಿದುರನು, ಶ್ರೀಕೃಷ್ಣನು ಉಪದೇಶಿಸುವ ಸಮಯಕ್ಕೆ ಉಪಸ್ಥಿತನಿದ್ದ ಮೈತ್ರೇಯರನ್ನು ಸಂದರ್ಶಿಸಿ, ಅವರಿಂದ, ಉದ್ಧವನು ಶ್ರೀಕೃಷ್ಣನಿಂದ ಪಡೆದ ಎಲ್ಲ ತತ್ವೋಪದೇಶ ಪಡೆದನು.[೬೫]

ಹೀಗೆ, ತನಗೆ ಪ್ರಿಯನಾದ ವಿದುರನಿಗೆ ತಾನು ಪರಂಧಾಮವನ್ನೈದಿದ ಬಳಿಕ, ಮೈತ್ರೇಯರಿಂದ ಉಪದೇಶ ಪಡೆಯಲು ಅನುಗ್ರಹಿಸಿದ ಶ್ರೀಕೃಷ್ಣಾವತಾರದ,[೬೫] – **ಶ್ರೀಹರಿಯು.**

೬೪. ಶ್ರೀಮದ್ಭಾಗವತ ದಶಮಸ್ಕಂಧ – ೩೬,೩೭, ೩೮ ಅಧ್ಯಾಯಗಳು.
೬೫. ಶ್ರೀಮದ್ಭಾಗವತ ತೃತಿಯಸ್ಕಂದ



**೮೩. ಉದ್ಧವವರೇಣ್ಯ**

ಸಕಲದೇವತೆಗಳು ಬ್ರಹ್ಮರುದ್ರಾದಿಗಳನ್ನು ಮುಂದಿಟ್ಟುಕೊಂಡು, ಶ್ರೀಕೃಷ್ಣನಿದ್ದಲ್ಲಿಗೆ ಬಂದು, "ದೇವಾ! ನೀನಿಲ್ಲದೆ ಸ್ವರ್ಗವು ತೀರಾ ನಿಸ್ಸಾರವಾಗಿದೆ; ಬೇಗ ಇಲ್ಲಿಯ ಅವತಾರಕಾರ್ಯ ಪೂರೈಸಿಕೊಂಡು ವೈಕುಂಠಕ್ಕೆ ಮರಳಬೇಕೆಂದು", ಪ್ರಾರ್ಥಿಸಿಕೊಂಡರು. ಅದಕ್ಕೆ ಶ್ರೀಕೃಷ್ಣನು, "ಹದಿನೆಂಟೇ ದಿನಗಳಲ್ಲಿ ಪಾಂಡವರನ್ನು ಮುಂದೆ ಮಾಡಿ ಭೂಮಂಡಲದ ಕೊಬ್ಬಿದ ಹದಿನೆಂಟು ಅಕ್ಷೋಹಿಣಿ ಸೈನ್ಯಾಹತ ಮಾಡಿಸಿದ್ದೇನೆ. ಇನ್ನೂ ನನ್ನ ಅವತಾರ ಕಾರ್ಯಗಳಲ್ಲಿ ಉಳಿದಿರುವದು ಯದು ವಂಶವನ್ನು ಕುರಿತುದು ಮಾತ್ರ. ಅದು ಇಂದು ಶೌರ್ಯವೀರ್ಯಾದಿಗಳ ಎದುರಿಲ್ಲದೆ, ಜನಬಲ ಧನಬಲಗಳಿಂದ ಕೊಬ್ಬಿ ಲೋಕ ಕಂಟಕ ವಾಗುವಂತೆ ಇದೆ. ಅದನ್ನು ಇಲ್ಲಿ ಹಾಗೆಯೇ ಬಿಟ್ಟು, ನಿಜಧಾಮಕ್ಕೆ ಹೊರಟೆನಾದರೆ. ಅದು ಲೋಕಕ್ಕೆ ನಾಶಕಾರಣವಾಗಿ ಪರಿಣಮಿಸಬಹುದು, ಬ್ರಾಹ್ಮಣ ಶಾಪದಿಂದ ಅದು ಕ್ಷಯವಾಗಲಾರಂಭಿಸಿದೆ ಆಕಾರ್ಯವು ಮುಗಿದೊಡನೆಯೇ ನಾನು ನನ್ನ ವೈಕುಂಠಧಾಮಕ್ಕೆ ಹಿಂದಿರುಗುವೆನು." ಎಂದು ಹೇಳಿ ಕಳುಹಿಸಿದನು.

ಬ್ರಾಹ್ಮಣ ಶಾಪ ತಡೆಗಟ್ಟಲು ಎಲ್ಲ ಯಾದವರೂ ಪ್ರಭಾಸಕ್ಷೇತ್ರದರ್ಶನ, ಸ್ನಾನಾರ್ಥವಾಗಿ ಹೋಗಲು ಶ್ರೀಕೃಷ್ಣನಿಂದ ಪ್ರಚೋದನೆ ಪಡೆದರು. ಅಲ್ಲಿಯ ಸ್ನಾನ ಮಾತ್ರದಿಂದಲೇ ದಕ್ಷ ಶಾಪದಿಂದ ಚಂದ್ರನು ತನಗುಂಟಾದ ಕ್ಷಯ ರೋಗವನ್ನು ನಿವಾರಿಸಿಕೊಂಡಂತೆ ತಾವೂ ತಮ್ಮ ಶಾಪತೀಕ್ಷ್ಣತೆಯನ್ನು ನಿವಾರಿಸಿಕೊಳ್ಳಲು ಅಲ್ಲಿಗೆ ಹೊರಟುಸಿದ್ಧರಾದರು.

ಶ್ರೀಕೃಷ್ಣನು ತನ್ನ ಏಕಾಂತ ಭಕ್ತನಾದ ಉದ್ಧವನಿಗೆ ಆತನ ಕೋರಿಕೆಯ ಮೇರೆಗೆ, ಪರಮಾರ್ಥದ ಉಪದೇಶ ನೀಡಿ, ಅವಧೂತ ಬ್ರಾಹ್ಮಣ ಮತ್ತು ಯದು ಇವರ ಸಂವಾದ ವಿವರಿಸಿದನು. ತದನಂತರ, ಭಕ್ತಿಕರ್ಮ, ಜ್ಞಾನ ಸಾಧನೆಗಳನ್ನು, ಜೀವ–ಪರಮಾತ್ಮರ ವಿಚಾರಗಳನ್ನೂ, ಪುರುಷಾರ್ಥ, ಧ್ಯಾನಯೋಗ– ಅಣಿಮಾಸಿದ್ಧಿ ವಿಚಾರಗಳನ್ನು, ಭಗವದ್ವಿಭೂತಿಗಳೂ, ವರ್ಣಗಳು ಮತ್ತು ಆಶ್ರಮಗಳು ನಿಯಮಗಳನ್ನು, ಭಗವದ್ಭಕ್ತಿಯ ಮೇಲ್ಮೆಯನ್ನು, ತತ್ವಾದಿಗಳ ವಿಚಾರ, ಸೃಷ್ಟಿ ಲಯಾದಿಗಳ ಕ್ರಮಗಳು, ಐಲಗೀತೆ ಮತ್ತು ಭಗವದಾರಾಧನಾ ಕ್ರಮಗಳನ್ನು ತಿಳಿಸಿದನು.

"ಭಕ್ತೋತ್ತಮಾ! ಉದ್ಧವಾ! ಇನ್ನು ನೀನು ನನ್ನ ಆಜ್ಞಾನುಸಾರ ನಾರಾಯಣಾಶ್ರಮವೆಂದು ಹೆಸರಾದ ಬದರಿಕಾಶ್ರಮಕ್ಕೆ ತೆರಳು," ಎಂದು ಶ್ರೀಕೃಷ್ಣನಿಂದ ಆಜ್ಞಪ್ತನಾಗಿ, ತನ್ನ ಶೇಷ ಜೀವನವನ್ನು ಬದರಿಕಾಶ್ರಮದಲ್ಲಿ ಕಳೆದು ಮುಕ್ತಿ ಪಡೆದನು.[೬೬]

ಹೀಗೆ ಉದ್ಧವನಿಗೆ ತತ್ವೋಪದೇಶ ನೀಡಿ ಉದ್ಧರಿಸಿದ – ಶ್ರೀಕೃಷ್ಣಾವತಾರದ –**ಶ್ರೀಹರಿಯು.**

**ಮಧುಮಥನ ಕೈಟಭವಿದಾರಣ ।**
**ಕುಧರವರ ಅನಂತವರ್ಣಾ – ।**
**ಭಿದ ಜನಾರ್ದನ ಸಾಮಗಾಯನವೇದ್ಯ ಅನವೇದ್ಯ ॥**
**ವಿಧಿ, ನಿಷೇದಾಲಿಪ್ತ ಸತತವಿ – ।**
**ಬುಧನಿಯಾಮಕ ನಿರ್ಭಯಾತ್ಮ ತ್ರಿ – ।**
**ವಿಧಜನಾಶ್ರಯ ಕುಶಶಯನ ಸಾರಂಗಪಾಣೆ ನಮೋ** ॥ ೬ ॥

೬೬. ಶ್ರೀಮದ್ಭಾಗವತ ಏಕಾದಶಸಾಂಧ

**೮೪. ಮಧುಮಥನ**

**೮೫. ಕೈಟಭ ವಿದಾರಣ**

ಕಲ್ಪಾದಿಯಲ್ಲಿ ವಿಷ್ಣು ವಟಪತ್ರಶಾಯಿಯಾಗಿ ಮಲಗಿದ್ದಾಗ ಆತನ ಕಿವಿಯ ಮಲದಿಂದ ಮಧು–ಕೈಟಭರೆಂಬ ಇಬ್ಬರು ಜನಿಸಿ, ನಾಭಿ ಕಮಲದಲ್ಲಿದ್ದ ಬ್ರಹ್ಮನನ್ನು ಪೀಡಿಸತೊಡಗಿದಾಗ, ಬ್ರಹ್ಮ ವಿಷ್ಣುವಿನ ಮೊರೆಹೋಗಲು, ವಿಷ್ಣು ಉಪಾಯದಿಂದ ಅವರನ್ನು ತನ್ನ ತೊಡೆಯ ಮೇಲೆಯೇ ಕೊಲ್ಲುತ್ತಾನೆ. ಹೀಗೆ ಅವರಿಬ್ಬರನ್ನೂ ಕೊಂದದ್ದರಿಂದ ಅವನಿಗೆ, "ಮಧುಹರ" "ಕೈಟಭಾರಿ" ಇತ್ಯಾದಿ ಹೆಸರುಗಳನ್ನು ಪಡೆದಂಥ[೬೭-೬೮] – **ಶ್ರೀಹರಿಯು.**

**೮೬. ಕುಧರವರ –**

ಕು=ಭೂದೇವಿ, ಕುಧರ=ಭೂಪಾಲಕ=ಅರಸು

(೧) ಅರಸರಲ್ಲಿಯೇ ಶ್ರೇಷ್ಠನಾದ – ರಾಮಾವತಾರದ – **ಶ್ರೀಹರಿಯು**[೬೯]

(೨) ನಾಲ್ಕು ಭುಜಗಳುಳ್ಳ – "ರಾಜರಾಜೇಶ್ವರ" ನೆಂಬ ಪರಮಾತ್ಮನು ಹದಿನಾಲ್ಕು ಮನ್ವಂತರಗಳಲ್ಲಿ ಇರತಕ್ಕ ಚಕ್ರವರ್ತಿಗಳಲ್ಲಿದ್ದು ದುಷ್ಟರಾಜರನ್ನು ಧ್ವಂಸ ಮಾಡುತ್ತ ಈ ಜಗತ್ತನ್ನು ರಕ್ಷಿಸುತ್ತಿರುವಂಥ – **ಶ್ರೀಹರಿಯು**[೬೯(ಅ)]

**೮೭. ಅನಂತ ವರ್ಣಾಭಿದ**

ಓಂ ಏತೇನ ಸರ್ವೇ ವಾಖ್ಯಾತಾ ವ್ಯಾಖ್ಯಾತಾಃ ಓಂ ॥ ೨೯ ॥

– ಬ್ರಹ್ಮಸೂತ್ರ ಅಧ್ಯಾಯ ೧ – ಪಾದ ೪ ಅಧಿಕರಣ ೭ ಸೂತ್ರ ೨೯

ಈ ಸೂತ್ರದಿಂದ ತೋರಿದ "ಯದಧೀನಂ ಯಸ್ಯ ಸತ್ತಾ ತತ್ತತ್ ಶಬ್ದೇನ ಭಣ್ಯತೆ" ಎಂಬ ನಿಯಮಾನುಸಾರ ಜಗತ್ತು ಅವನ ಅಧೀನವೇ ಆಗಿರುವದರಿಂದ ಜಗತ್ತೆಲ್ಲವೂ ಅವನ ಶಬ್ದದಿಂದಲೇ ವ್ಯವಹರಿಸಲಾಗಿರುತ್ತದೆ. ಮತ್ತು "ನಾ ಮಾನಿಸರ್ವಾಣಿ ಯಾಮಾ ವಿಶಂತಿ" ಎಂಬ ಶ್ರುತಿಯು ಸ್ಪಷ್ಟ ಪ್ರತಿಜ್ಞಾರೂಪವಾಗಿ ಹೇಳುವದರಿಂದಲೂ ಜಗತ್ತೆಲ್ಲವೂ ಅವನಿಂದಲೇ ಸ್ಥಿತವಾಗಿರುವದರಿಂದ **ಸತ್** ಎಂದೂ, ಅವನಿಂದಲೇ ನಾಶವೂ ಹೊಂದುವುದರಿಂದ **ಅಸತ್** ಎಂತಲೂ ಲಯಕಾಲದಲ್ಲಿ ಜಗತ್ತನ್ನೇ ಸೂಕ್ಷ್ಮವಾಗಿ ಕುಗ್ಗಿಸಿ ಶೂನ್ಯಪ್ರಾಯದಾಗಿಸುವುದರಿಂದ **ಶೂನ್ಯ**ನೆಂದು, ಅಯೋಗ್ಯರಿಗೆ ದುಃಖ ಪ್ರದನಾದ ತಾನೇ ಆದುದರಿಂದ **ತುಚ್ಛ**ನೆಂದೂ, ಯಾರ ಭಾವನೆಗೂ ನಿಲುಕದವನಾದುದರಿಂದ ಅಭಾವನೆಂದೂ ಹೀಗೆಯೆಲ್ಲಾ ಯುಕ್ತಿಕ ಪ್ರಮಾಣಗಳಿಂದ **ಸರ್ವ** ಶಬ್ದ ವಾಚ್ಯನಾದಂಥ,[೭೦]–**ಶ್ರೀಹರಿಯು.**

---

೬೭. ಶ್ರೀ ಪ್ರಸನ್ನ ವೆಂಕಟದಾಸರ ಭಾಗವತ_" ಮೈಸೂರ ವಿಶ್ವವಿದ್ಯಾನಿಲಯದ ಕನ್ನಡ ಸಂಸ್ಥೆಯ ಪ್ರಕಟಣೆ ಪುಟ – ೧೫೦

೬೮. ಪುರಾಣನಾಮ ಚೂಡಾಮಣಿಯ ಪುಟ – ೧೯೨

೬೯. "ಕು" ಶಬ್ದದ ಅರ್ಥವಿವರಣೆಗಾಗಿ – ಶ್ರೀವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಶ್ರೀ ಸತ್ಯಸಂಧರ ಟೀಕೆ ನಾಮ ೫೯೨ "ಕುಮುದಃ" ಹಾಗೂ ನಾಮ ೫೯೩ ಕುವಲೇಶಯಃ" ಈ ನಾಮಗಳಿಗೆ

೬೯ಅ. ಶ್ರೀಮದ್ಭಾಗವತ ಎರಡನೇ ಸ್ಕಂದ ಏಳನೇ ಅಧ್ಯಾಯ.

೭೦. ಪಂಡಿತ ರತ್ನ ಭೀಮಸೇನಾಚಾರ್ಯ – ಸಂತೆ ಬಿದನೂರ ಕೃತ "ಬ್ರಹ್ಮಸೂತ್ರ ಭಾಷ್ಯಕ್ಕೆ ಪ್ರತಿಪದಾರ್ಥಚಂದ್ರಿಕೆ"ಯ ಪುಟ – ೨೧೯.



**೮೮. ಜನಾರ್ದನ**

(೧) ನಿತ್ಯರೆಂದು ಪ್ರಸಿದ್ಧರಾದ ರಮಾದೇವಿ, ಪ್ರಕೃತಿ, ಕಾಲ ಹಾಗೂ ಜೀವಾತ್ಮರು ಭಗವದಾಧೀನರಾಗಿ ಒಂದಿಲ್ಲೊಂದು ವಿಶೇಷವನ್ನು ಹೊಂದುವ ಪ್ರಯುಕ್ತ ಜನ್ಮ ಉಳ್ಳವರು ಗಳಾದರೆ ಭಗವಂತನು ಮಾತ್ರ ಜನ್ಮರಹಿತನಾದ್ದರಿಂದ, "ಜನಾರ್ದನ" ನೆನಿಸಿಕೊಳ್ಳುವಂಥ – **ಶ್ರೀಹರಿಯು.**

**ವಿ.ವಿ : "ನ ಜಾಯತೆ – ಅರ್ದಯತಿ ಚ ಸಂಸಾರಮಿತಿ – ಜನಾರ್ದನಃ । ನ ಜಾಯತೆ ಇತಿ ಜನಃ । ಅರ್ದಯತಿ – ಹಿನಸ್ತಿ ಸಂಸಾರಮಿತಿ – ಅರ್ದನಃ ।**

– ಬಾಭ್ರವ್ಯಶಾಖಾ – ಗೀತಾಭಾಷ್ಯ ೧೦–೧೮.

(೨) ಜೀವಾತ್ಮರನ್ನೂ ಸ್ವಗುಣಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾಗಳಿಂದ ತನ್ನ ಜ್ಞಾನವನ್ನು ಮುಚ್ಚಿ ಸಂಸಾರದಲ್ಲಿಯೇ ಸುತ್ತುವಂತೆ ಮಾಡುವ ಭಗವಂತನು ತನ್ನ ಪ್ರೀತಿಗೆ ಪಾತ್ರರಾದವರನ್ನು ಮಾತ್ರ ಈ ಆಚ್ಛಾದನೆಗಳಿಂದ ಬಿಡುಗಡೆ ಮಾಡಿ ಅವರ ಸಂಸಾರಬಂಧನವನ್ನು ನಾಶಮಾಡುವನು; ಹಾಗೂ ಅವರು ಜನ್ಮಾದಿಗಳನ್ನೊಳಗೊಂಡು ಸಂಸಾರಕ್ಕೊಳಗಾಗದಂತೆ ಅನುಗ್ರಹಿಸಿ "ಜನಾರ್ದನ" ನೆನಿಸಿಕೊಳ್ಳುವಂಥ – **ಶ್ರೀಹರಿಯು.**

(೩) ಸಮುದ್ರದಲ್ಲಿರುವ – ಜನ – ಎನಿಸುವ ದೈತ್ಯ ವಿಶೇಷರನ್ನು ನಾಶಪಡಿಸಿ, ಲೋಕ ರಕ್ಷಣೆಗಾಗಿ ದುಷ್ಟ ನಿಗ್ರಹ ಮಾಡಿದಂಥ,[೭೧] – **ಶ್ರೀಹರಿಯು.**

(ಸಮುದ್ರ ದಾಟುವ ಕಾಲಕ್ಕೆ ವರುಣನ ಪ್ರಾರ್ಥನೆಯಂತೆ)

(೪) ತ್ರಿವಿಧ ಜೀವಾತ್ಮರಿಗೆ, ಅವರವರಿಗೆ ಯೋಗ್ಯವಾದ ಗತಿಯನ್ನು ಹೊಂದಿಸಿ; ಮುಕ್ತಿಯೋಗ್ಯ ಜೀವಾತ್ಮರ ಲಿಂಗದೇಹವನ್ನು ಭೇದಿಸುವಂಥ,[೭೨] – "ಜನಾರ್ದನ" ನಾಮಕ – **ಶ್ರೀಹರಿಯು.**

**೮೯. ಸಾಮಗಾಯನ ವೇದ್ಯ**

ವೇದ್ಯ = ತಿಳಿಯಲ್ಪಡುವವ

ಸಾಮಗಾಯನದಿಂದ ಪ್ರೀತನಾಗಿ ತನ್ನ ಬಗ್ಗೆ ಜ್ಞಾನವನ್ನು ಕಲ್ಪಿಸಿಕೊಡುವಂಥ – **ಶ್ರೀಹರಿಯು.**

**೯೦. ಅನವೇದ್ಯ**

ಅನಂತಗುಣ ಪರಿಪೂರ್ಣನಾದ ಕಾರಣ ಸಾಕಲ್ಯೇನ ಅಂದರೆ ಸಂಪೂರ್ಣವಾಗಿ ತಿಳಿಯಲು ಅಶಕ್ಯನಾದ ಕಾರಣ – ಅನವೇದ್ಯನೆನಿಸಿಕೊಂಡಂಥ – **ಶ್ರೀಹರಿಯು.**

**೯೧. ವಿಧಿನಿಷೇಧಾಲಿಪ್ತ**

ವಿಧಿ = ನಿಯಮ, ನಿಬಂಧನೆಗಳು ನಿಶೇಧ = ಅಕಾರ್ಯ, ಅಲಿಪ್ತ = ಒಳಗಾಗದವನು.

ಯಾವ ನಿಯಮ ನಿಬಂಧನೆಗಳಿಗೂ ಒಳಗಾಗದ – **ಶ್ರೀ ಹರಿಯು.**

---

೭೧. ರಾಮಾಯಣ

೭೨. ಶ್ರೀವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಟೀಕೆ – ನಾಮ ೧೩೦ – "ಜನಾರ್ದನ" ನಾಮಕ್ಕೆ ಪುಟ – ೪೫೪.

**೯೨. ಸತತವಿಬುಧ ನಿಯಾಮಕ**

ವಿಬುಧ = ವಿಶೇಷಬುದ್ಧಿಶಾಲಿಗಳು = ಆತ್ಮವಿಜ್ಞಾನಿಗಳು.

ಯಾವಾಗಲೂ ಮುಕ್ತಿ ಯೋಗ್ಯರಾದ ಆತ್ಮಜ್ಞಾನಿಗಳನ್ನು ಅವರಿಗೆ ಮುಕ್ತಿಯನ್ನು ದಯಪಾಲಿಸಲೋಸುಗ, ನಿಯಂತ್ರಿಸುವಂಥ – **ಶ್ರೀಹರಿಯು.**

**೯೩. ನಿರ್ಭಯಾತ್ಮ**

ಜಗತ್ಕರ್ತೃವು ತಾನೇ ಆದ್ದರಿಂದ, ಯಾವಕಾಲಕ್ಕೂ ಯಾವುದರಿಂದಲೂ ಭಯವಿಲ್ಲದಂಥ – **ಶ್ರೀಹರಿಯು.**

**೯೪. ತ್ರಿವಿಧ ಜನಾಶ್ರಯ**

ತಮೋಗುಣವನ್ನು ಹೊಂದಿದ ಅಸುರರು ತಾಮಸ ಕರ್ಮಗಳಿಂದಲೂ, ಜ್ಞಾನದಿಂದಲೂ, ನಿಶ್ಚಯವಾಗಿ ತಮಸ್ಸನ್ನು ಹೊಂದುತ್ತಾರೆ. ಸತ್ವಗುಣವನ್ನು ಹೊಂದಿದ ದೇವತೆಗಳು ಸತ್ಕರ್ಮಗಳಿಂದಲೂ, ಸಮೀಚೀನ ಜ್ಞಾನದಿಂದಲೂ ಉತ್ತಮವಾದ ವಿಷ್ಣು ಲೋಕವನ್ನು ಹೊಂದುತ್ತಾರೆ. ಈ ಕ್ಲುಪ್ತ ನಿಯಮಕ್ಕೆ ಎಂದೂ, ಎಲ್ಲಿಯೂ ವ್ಯತಿರೇಕ ಉಂಟಾಗುವುದಿಲ್ಲ. (ಮನುಷ್ಯೋತ್ತಮರು ಮುಕ್ತಿ ಯೋಗ್ಯರು–ದೇವಸ್ವಭಾವದ ಗುಂಪಿಗೆ ಸೇರುತ್ತಾರೆ) ಮಿಶ್ರಜ್ಞಾನವುಳ್ಳ ಮನುಷ್ಯರು ಸುಖದುಃಖ ಮಿಶ್ರವಾದ ಗತಿಯನ್ನು ಹೊಂದುತ್ತಾರೆ. ಹೀಗೆ ಮೂರು ವಿಧದ ಜನರಲ್ಲಿದ್ದುಕೊಂಡು ಅವರವರ ಕರ್ಮಗಳಿಗೆ ಉಚಿತವಾದ ಗತಿ ಪ್ರದನಾಗಿ ಆಶ್ರಯದಾತನಾದಂಥ,[೭೩,೭೪] – ಶ್ರೀ ಹರಿಯು.

**೯೫. ಕುಶಶಯನ**

ಧರ್ಭೆಯ ಹಾಸಿಗೆಯಲ್ಲಿ ಮಲಗಿದವ (ರಾಮನು ಯುದ್ಧಕ್ಕಾಗಿ ಹೊರಟು ಸಮುದ್ರ ದಡಕ್ಕೆ ಬಂದನು. ಸಾಗರ ರಾಜನು ತನ್ನ ವಾನರಸೇನೆಗೆ ಹಾಯ್ದು ಹೋಗಲು ದಾರಿಕೊಟ್ಟರೆ ಆಚೆಯ ದಡಕ್ಕೆ ಅಂದರೆ ಲಂಕೆಗೆ ಹೋಗಲು ಸುಲಭವಾಗುವದೆಂದು ತಿಳಿದು, ಮೊದಲು ಸಾಮೋಪಾಯದ ಮಾರ್ದವ ಧರ್ಮತೋರಿಸಲು ದರ್ಭದ ಹಾಸಿಗೆಯಲ್ಲಿ ಮೂರು ದಿನ ಮಲಗಿದರೂ ದಾರಿ ಕಾಣದವನಾಗಿ ಸಮುದ್ರ ರಾಜನ ಮೇಲೆ ಕುಪಿತನಾಗಿ ಕೆಂಗಣ್ಣಿನಿಂದ ಶ್ರೀರಾಮನು ಬಿಲ್ಲಿಗೆ ಬಾಣ ಹೂಡುತ್ತಿರಲು ಸಮುದ್ರಾಭಿಮಾನಿ ದೇವನಾದ ವರುಣನು ತನ್ನ ತಲೆಮೇಲೆ ಪೂಜಾ ಸಾಮಗ್ರಿಗಳನ್ನು ಹೊತ್ತುಕೊಂಡು ಬಂದು ನಮಸ್ಕರಿಸಿ ಶ್ರೀರಾಮನನ್ನು ಪೂಜಿಸಿ, "ಹೇ ಸ್ವಾಮೀಯೇ! ನೀನು ನನ್ನನ್ನು ಒಣಗಿಸಿ ದಾಟಲು ಶಕ್ತಿಇದ್ದರೂ, ಸೇತುವೆಯನ್ನು ಬಂಧಿಸಿ, ಕಪಿಸೈನ್ಯವನ್ನು ದಾಟಿಸು, ಈ ಸೇತುವೆಯ ದರ್ಶನದಿಂದ ಬ್ರಹ್ಮಹತ್ಯಾದಿ ಪಾಪಗಳೂ ಪರಿಹಾರವಾಗಿ ನಿನ್ನ ಕೀರ್ತಿಯು ಬೆಳಗಲಿ" ಅಂತಾ ಪ್ರಾರ್ಥಿಸಿದನು. ಸಮುದ್ರ ರಾಜನಮೇಲೆ ಕೃಪೆದೋರಿ ಶ್ರೀರಾಮನು ಬಿಲ್ಲಿಗೆ ಹೂಡಿದ ಬಾಣನ್ನು ಸಮುದ್ರದಲ್ಲಿ ವಾಸಿಸುತ್ತಿದ್ದ "ಜನ"ರೆಂಬ

---

೭೩. ಸ್ಕಂದ ಪುರಾಣ

೭೪. ಶ್ರೀ ಜಗನ್ನಾಥದಾಸಾರ್ಯವಿರಚಿತ_ "ತತ್ವಸುವ್ವಾಲಿ" ಗೆ ಟಿಪ್ಪಣಿ ಗ್ರಂಥ ಶ್ರೀ ಹರಿದಾಸಭಾರತಿ ಗ್ರಂಥಮಾಲೆಯ – "ವಿಜಯಾಂಕ" ೨ ರ ಪುಟ – ೫೩



ದೈತ್ಯರ ಮೇಲೆಬಿಟ್ಟು ಅವರನ್ನು ಸಂಹರಿಸಿದಂಥ–ಕುಶಶಯನನಾಗಿದ್ದ[೭೫] – ಶ್ರೀರಾಮಾವತಾರದ – **ಶ್ರೀಹರಿಯು.**

**೯೬. ಸಾರಂಗಪಾಣಿ**

ದೇವತಾಪುರುಷರು, ಋಷಿಗಳು ಹಾಗೂ ಸತ್ಪುರುಷರೇ ಗೋಪಿಯರು, ಗೋವಳಿಗರು ಹಾಗೂ ಗೋವೃಂದವಾಗಿ ಜನಿಸಿ ಬಂದಂಥ ತನ್ನ ಪ್ರಿಯಭಕ್ತರನ್ನು, ಕೈಯಲ್ಲಿ ಸಾರಂಗವನ್ನು ಹಿಡಿದು ಅದರ ನಾದದಿಂದ ಅವರೆಲ್ಲರನ್ನೂ ಆನಂದ ಪರವಶತೆಯಿಂದ ಮುಗ್ಧಗೊಳಿಸಿದಂಥ – ಶ್ರೀಕೃಷ್ಣಾವತಾರದ – **ಶ್ರೀ ಹರಿಯು.**

**ವಾಸುದೇವ ಕುಭಾಷ ವಾಹಕ ।**
**ವಾಸುವೀಯ ಕಪಿಲ ಋಷಭ ಮಹಿ – ।**
**ದಾಸ ಯಜ್ಞ ದತ್ತಾತ್ರೆಯ ನಾರಾಯಣ ನಿರಾಮಯ ಭೋ ॥**
**ಶ್ರೀ ಸನಾತನ ಸಕಲಭುವನನಿ – ।**
**ವಾಸ ಸಂಕರುಷಣ ಸದಾಸ್ಮಿತ – ।**
**ಹಾಸ ಸೋಮದಿವಾಕರೇಕ್ಷಣ ಸ್ವಪ್ರಕಾಶ ನಮೋ ॥ ೭ ॥**

**೯೭. ವಾಸುದೇವ**

(೧) ಉತ್ತಾನಪಾದ ರಾಜನ ಹಿರಿಯ ಪತ್ನಿಯಿಂದ ಸುನೀತಿಯ ಉದರದಲ್ಲಿ ಜನಿಸಿದ, "ಧ್ರುವ"ನೆಂಬ ಬಾಲಕನು, ಸುರುಚಿ ಎಂಬ ತನ್ನ ಮಲತಾಯಿಯ ಮಗನಾದ ಉತ್ತಮನೆಂಬವನು ತನ್ನ ತಂದೆಯ ತೊಡೆಯನ್ನೇರಿ ಕುಳಿತಿದ್ದುದನ್ನು ಕಂಡು, ತನ್ನನ್ನೂ ಕೂರಿಸಿಕೊಳ್ಳೆಂದು ಕೇಳಿದನು. ಆಗ ಸುರುಚಿಯು ಸವತಿ ಮಾತ್ಸರ್ಯದಿಂದ ಆ ಎಳೆಯ ಬಾಲಕನನ್ನು ಬೈದು, ಭಂಗಿಸಿನೂಕಲು, ಆ ಅಪಮಾನವನ್ನು ಸಹಿಸಲಾರದೆ ತಪಸ್ಸುಮಾಡಿ ಶ್ರೀಹರಿಯನ್ನು ಮೆಚ್ಚಿಸಿ ತನ್ನ ಸ್ಥಾನವನ್ನು ಗಳಿಸಿಕೊಳ್ಳಬೇಕೆಂದು ಕಾಡಿಗೆ ಹೋಗಿ, ಆ ಸಣ್ಣ ವಯಸ್ಸಿನಲ್ಲಿಯೇ ಧೃಢ ಮನಸ್ಸಿನಿಂದ ಅಗಾಧ ತಪಸ್ಸು ಮಾಡಿದನು. ಭಗವಂತನು ಆ ಬಾಲಕನ ಕಠಿಣ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ, ಸಪ್ತರ್ಷಿ ಮಂಡಲಕ್ಕೂ ಊರ್ಧ್ವಭಾಗದಲ್ಲಿರುವ ತೇಜೋಮಯವಾದ ನಕ್ಷತ್ರ ಮಂಡಲಾಧಿಪತ್ಯವನ್ನು ಆತನಿಗೆ ಅನುಗ್ರಹಿಸಿದನು. ಅದು ಧ್ರುವ ಮಂಡಲವೆಂದು ಪ್ರಸಿದ್ಧವಾಗಿದೆ. ಈ ಬಗೆಯ ಧ್ರುವ ವರಪ್ರದಾತಾ "ವಾಸುದೇವ" ರೂಪಾವತಾರಿ,[೭೬] – **ಶ್ರೀಹರಿಯು.**

(೨) ವಸುದೇವ ಸುತನಾದ – "ವಾಸುದೇವ" ನಾಮಾಭಿಮಾನಿಯದ ಶ್ರೀಕೃಷ್ಣವತಾರಿಯಾದ,[೭೭] – **ಶ್ರೀಹರಿಯು.**

---

೭೫. ಶ್ರೀ – ಹುಲಗಿ ಶ್ರೀನಿವಾಸಾಚಾರ್ಯಕೃತ "ಶ್ರೀಲಘುರಾಮಾಯಣಮ್"ಕ್ಕೆ ಶ್ರೀವಾದಿ–ರಾಜಾಚಾರ್ಯ ಅಗ್ನಿಹೋತ್ರಕೃತ ಕನ್ನಡ ಅನುವಾದ ಗ್ರಂಥದ ಆರನೇಯ ಸರ್ಗದ ಶ್ಲೋಕಗಳು ೭,೮,೯ ಹಾಗೂ ೧೦.

೭೬. ಶ್ರೀಮದ್ಭಾಗವತ ದ್ವಿತೀಯ ಸ್ಕಂಧ – ಏಳನೇಯ ಅಧ್ಯಾಯ

೭೭. ಶ್ರೀವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಸತ್ಯಸಂಧರಟೀಕೆ – "ವಾಸುದೇವಃ" ಈ ನಾಮಕ್ಕೆ ಪುಟ – ೩೯–೪೦.

(೩) ಭಗವಂತನು ಎಲ್ಲವನ್ನೂ ಬಲ್ಲವನು; ಎಲ್ಲವನ್ನೂ ಸೃಷ್ಟಿಸುವವನು; ಮತ್ತು ಯಾವಾಗಲೂ ಕ್ರೀಡಿಸುತ್ತಿರುವವನು – ಆದುದರಿಂದಲೇ **"ವಾಸುದೇವ"** ನೆಂದೆನಿಸಿರುವನೆಂದು ಸಂಕರಾಯಣ ಶ್ರುತಿ ಸಂದೇಶಿಸಿದೆ.[೭೮]

ವಸುದೇವ ಎನಿಸುವ ಶುದ್ಧವಾದ ಅಂತಃಕರಣದಲ್ಲಿ ಭಗವಂತನು ಅಭಿವ್ಯಕ್ತನಾಗುವದರಿಂದಲೇ **"ವಾಸುದೇವ"** ಎಂದೆನಿಸುವನೆಂದು ರುದ್ರದೇವ ತಿಳಿಸಿರುವನು.[೭೯]

ಭಗವಂತನು ಸರ್ವಭೂತಗಳನ್ನು ಆಚ್ಛಾದಿಸುವದರಿಂದ ಅಥವಾ ಸರ್ವಭೂತಗಳ ವಾಸಕ್ಕೆ ಆಶ್ರಯನಾಗಿರುವದರಿಂದ ಹಾಗೂ ಸ್ವಭಾವತಃ ದೇವನಾಗಿರುವದರಿಂದ **"ವಾಸುದೇವ"** ಎಂದೆನಿಸುವನೆಂದು ಮಹಾಭಾರತ ತಿಳಿಸಿದೆ.[೮೦]

**೯೮. ಕುಭಾಷವಾಹಕ**

ಕು+ಭಾಷ+ವಾಹಕ = ಭೂದೇವಿಯ ಮೊರೆ ಕೇಳಿದವ.

"ಕು" ಶಬ್ದದ ಅರ್ಥಕ್ಕೆ – ನಾಮ೮೬ – ಕುಧರವರ ನೋಡಿರಿ

(೧). ರಾಜರೂಪದಿಂದ ದೈತ್ಯಸಂಖ್ಯೆಯು ಹೆಚ್ಚಾಗಿ, ಅವರ ಮದೋನ್ಮತ್ತತೆಯನ್ನು ಸಹಿಸಲಾರದೆ, ಭೂದೇವಿಯು ಗೋರೂಪದಿಂದ ತನ್ನ ಬವಣೆಯನ್ನು ಬ್ರಹ್ಮದೇವನಿಗೆ ನಿವೇದಿಸಿಕೊಂಡಳು. ಆಗ ಬ್ರಹ್ಮದೇವನು ಸಕಲ ದೇವಗಣದೊಂದಿಗೆ ಹಾಗೂ ಗೋರೂಪೀ ಭೂದೇವಿಸಹಿತ ಕ್ಷೀರ ಸಾಗರದೆಡೆ ಬಂದು ಶ್ರೀಹರಿಯನ್ನು ಪ್ರಾರ್ಥಿಸಿದನು. ಅವನ ಪ್ರಾರ್ಥನೆಯನ್ನು ಕೇಳಿ ಶ್ರೀವಿಷ್ಣುವು, "ನಾನು ಭೂಭಾರಹರಣಾರ್ಥವಾಗಿ ಶ್ರೀಲಕ್ಷ್ಮೀಸಹಿತನಾಗಿಯೂ, ಶೇಷದೇವನೊಂದಿಗೆ ಯದುಕುಲದಲ್ಲಿ ವಸುದೇವ ದೇವಕಿಯರಲ್ಲಿ ಅವತರಿಸುವೆನು; ಚಿಂತಿಸದಿರಿ" ಎಂದು ಅಶರೀರವಾಣಿಯಿಂದ ತಿಳಿಸಿದರು. ಆಪ್ರಕಾರ ಶ್ರೀಕೃಷ್ಣ ಬಲರಾಮರಾಗಿ ಅವತರಿಸಿ ಭೂಭಾರ ಹರಣ ಮಾಡಿದಂಥ,[೮೧] – **ಶ್ರೀಹರಿಯು.**

(೨). ದೇವೇಂದ್ರನ ಮೊರೆ ಕೇಳಿ ಭೂಮಿಪುತ್ರನಾದ ನರಕಾಸುರನನ್ನು ಆತನು ಪಡೆದ ವರಗಳಿಗೆ ಚ್ಯುತಿಬಾರದಂತೆ – ಸತ್ಯಭಾಮೆಯಿಂದ ಕೊಲ್ಲಿಸಿ, ತಾನೂ ಸತ್ಯಭಾಮೆಯೂ ಕೂಡಿ ಸ್ವರ್ಗಕ್ಕೆ ಹೋಗಿ ಅಲ್ಲಿ ದೇವೇಂದ್ರನಿಂದ ಆದರಾತಿಥ್ಯಗಳನ್ನು ಸ್ವೀಕರಿಸಿ, ಮರಳಿ ಬರುವಾಗ್ಗೆ ನಂದನ ವನದಲ್ಲಿಯ **"ಪಾರಿಜಾತ"** ಪುಷ್ಪ ವೃಕ್ಷವನ್ನು ಭಾಮೆಯ ಅಪೇಕ್ಷೆಯಂತೆ ಕಿತ್ತುಕೊಂಡು ಗರುಡನ ಮೇಲೆ ಹೇರಿಕೊಂಡು ಶ್ರೀಕೃಷ್ಣನು ಹೊರಟಸುದ್ದಿ ತಿಳಿದು, ಶಚಿದೇವಿಯ ಬಿರು ನುಡಿಗಳಿಗೆ ಕಿವಿಗೊಟ್ಟು ದೇವೇಂದ್ರನು ದೇವ ಪರಿವಾರ ಸಹಿತ ಯುದ್ಧಕ್ಕೆ ಬಂದು, ಶ್ರೀಕೃಷ್ಣನಿಂದ ಪರಾಜಿತನಾಗಿ, ಆತನಿಗೆ ಪೂಜೆ ಸಲ್ಲಿಸಿ ಮರಳಿ ಹೋದನು. ಹೀಗೆ ಸತ್ಯಭಾಮೆಯ ಅಪೇಕ್ಷಿಸಿದ ಆದೇವತರುವನ್ನು ತಂದು ಅವಳ ಮನೆಯಲ್ಲಿ ಶ್ರೀಕೃಷ್ಣನು ನೆಟ್ಟನು. ಹೀಗೆ ತನ್ನ ಭಾರ್ಯೆಯಾದ ಭೂದೇವಿಯ ಮಾತು ನಡೆಸಿಕೊಟ್ಟ ಶ್ರೀಕೃಷ್ಣಾವತಾರದ – **ಶ್ರೀಹರಿಯು.**[೮೨]

---

೭೮. ಸೌಂಕರಾಯಣಶ್ರುತಿ (ಕರ್ಮನಿರ್ಣಯ)
೭೯. ಭಾಗವತ ೪–೩–೨೩ ೮೦. ಮಹಾಭಾರತ ಉದ್ಯೋಗಪರ್ವ – ೭೦–೩
೮೧. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ಮೊದಲನೇಯ ಅಧ್ಯಾಯ.
೮೨. ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧ ಅರವತ್ತೈದನೇಯ ಅಧ್ಯಾಯ



(೩) ನರಕಾಸುರನನ್ನು ಕೊಂದು ಶ್ರೀಕೃಷ್ಣನು ಅಂತಃಪುರಕ್ಕೆ ಬರಲು, ಅಲ್ಲಿದ್ದ ಭೂದೇವಿಯು ಅದಿತಿಯ ಕರ್ಣಕುಂಡಲಗಳನ್ನು ಶ್ರೀಕೃಷ್ಣನಿಗೆ ಅರ್ಪಿಸಿ,

**ನಮಃ ಪಂಕಜನಾಭಾಯ ನಮಃಪಂಕಜಮಾಲಿನೇ ।**
**ನಮಃ ಪಂಕಜನೇತ್ರಾಯ ನಮಸ್ತೇಪಂಕಜಾಂಘ್ರಯೇ ॥**

ಎಂದು ಸ್ತುತಿಸಿ ತನ್ನ ಮೊಮ್ಮಗನಾದ ಭಗದತ್ತನನ್ನು ರಕ್ಷಿಸೆಂದು ಬೇಡಿಕೊಂಡಳು. ಅವಳ ಮಾತಿನಂತೆ ಭಗದತ್ತನಿಗೆ ಆಭಯ ಕೊಟ್ಟು, ಅವನನ್ನು ಆ ರಾಜ್ಯದ ಸಿಂಹಾಸನದಲ್ಲಿ ಸ್ಥಾಪಿಸಿದ ಶ್ರೀಕೃಷ್ಣಾವತಾರದ,[೮೩] – **ಶ್ರೀ ಹರಿಯು.**

**೯೯. ವಾಸವೀಯ**

ವಾಸವಿ = ವಸುರಾಜನಮಗಳು ; ಸತ್ಯವತಿ

ವಾಸವೀಯ = ಸತ್ಯವತಿಯ ಮಗ = ವೇದವ್ಯಾಸರು

ಬ್ರಹ್ಮನಮಗನು ವಸಿಷ್ಠನು ; ವಸಿಷ್ಠನ ಮಗನು ಶಕ್ತಿಯು; ಶಕ್ತಿಯ ಮಗನು ಪರಾಶರನು; ಈತನು, ಹರಿಯೇ ನನಗೆ ಮಗನಾಗಲಿ" ಎಂದು ತಪಸ್ಸು ಮಾಡಿ ವರ ಪಡೆದನು.[೮೪]

ಶ್ರೀ ಹರಿಯ ಭಕ್ತನಾದ ವಸುರಾಜನು ಕಾಡಿನಲ್ಲಿ ಮೃಗಗಳನ್ನು ಕೊಲ್ಲುವುದಕ್ಕಾಗಿ ಸಂಚರಿಸಿಕೊಂಡಿರುತ್ತಿದ್ದಾಗ ಹೆಂಡತಿಯನ್ನು ಮನಸ್ಸಿನಿಂದ ಹೊಂದಿದನು. ಆಗ್ಗೆ ಆತನ ರೇತಸು ಕೆಳಗೆ ಸುರಿದು ಹೋಯಿತು. ಆ ವಸುರಾಜನು ಹೆಂಡತಿಗೋಸ್ಕರ ಆವೀರ್ಯವನ್ನು, ಒಂದು ದೊನ್ನೆಯಲ್ಲಿ ಹಿಡಿದು ಕೊಡುವುದಕ್ಕಾಗಿ ಗಿಡುಗು ಹಕ್ಕಿಯ ಕೈಯಲ್ಲಿ ಕೊಟ್ಟನು. ಮತ್ತೊಂದು ಗಿಡುಗು ಇದರ ಕೂಡ, ಯಮುನಾ ನದಿಯ ಮೇಲಿಂದ ಹಾಯ್ದು ಹೋಗುವಾಗ ಯುದ್ಧಕ್ಕೆ ತೊಡಗಿದಾಗ ವಸುರಾಜನವೀರ್ಯವು ಯಮುನಾ ನದಿಯಲ್ಲಿ ಬಿದ್ದಿತು. ಅದನ್ನು ಒಂದು ಹೆಣ್ಣು ಮೀನವು ನುಂಗಿತು. ಕಾಲಾಂತರದಿಂದ ಮೊಗೆಯರು (ಮೀನುಗಾರರು) ಹಿಡಿದು ಹೋಳಲು, ಆ ಮೀನಿನ ಹೊಟ್ಟೆಯಲ್ಲಿ ಒಂದು ಗಂಡು ಮಗು ಮತ್ತು ಒಂದು ಹೆಣ್ಣು ಮಗು ಕಂಡರು, ಅವನ್ನು ಅವರು ತಮ್ಮ ಸ್ವಾಮಿಯಾದ ದಾಶರಾಜನಿಗೊಪ್ಪಿಸಿದರು. ಆ ದಾಶರಾಜನು ವಸುರಾಜನಿಗೆ ಒಪ್ಪಿಸಿದನು. ಆತನು ಮಗನನ್ನು ಇಟ್ಟುಕೊಂಡು ಮಗಳನ್ನು ದಾಶರಾಜನಿಗೆ ಒಪ್ಪಿಸಿದನು. ವಸುರಾಜನ ಈ ಮಗಳು ಸತ್ಯವತಿಯೆಂಬ ಹೆಸರಿನಿಂದ ನಾವಿಕರ ರಾಜನಾದ ಆದಾಶರಾಜನ ಮನೆಯಲ್ಲಿ ಬೆಳೆದಳು. ಇಂಥ ಸತ್ಯವತಿ – ವಸುರಾಜನ ಮಗಳಾದ್ದರಿಂದ ವಾಸವಿ ಎಂಬಲ್ಲಿ ನಾನು ಅವತರಿಸುವೆನೆಂದು ಪರಾಶರನಿಗೆ ವರವಿತ್ತಿದ್ದನು.[೮೪]

ಪರಾಶರ ಋಷಿಯು; ವಸಿಷ್ಠ– ಯಜ್ಞವಲ್ಕ್ಯ ಮೊದಲಾದ ಮುನಿಗಳ ಸಭೆಯಲ್ಲಿ ವಿವಾಹ ಹೋಮ ಮಾಡಿದ ಮೇಲೆ ತಂದೆಯಾದ ಚಕ್ರವರ್ತಿಯು ಧಾರಾಪೂರ್ವಕವಾಗಿ ಸತ್ಯವತಿಯನ್ನು ದಾನಮಾಡಿದ ಮೇಲೆ – ಯಮುನಾ ನದಿಯನ್ನು ದೋಣಿಯಿಂದ ದಾಟಿಸುವ ಆ ಸತ್ಯವತಿದೇವಿಯನ್ನು ಕ್ರೀಡಿಸಿದನು. ಆ ಸತ್ಯವತಿದೇವಿಯಲ್ಲಿ ಸುಜ್ಞಾನದಿಂದ

---

೮೩. ಶ್ರೀಮದ್ಭಾವತದಶಮಸ್ಕಂಧ ಉತ್ತರಾರ್ಧ – ಅರವತ್ತನಾಲ್ಕನೆಯ ಅಧ್ಯಾಯ.
೮೪. ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಅಧ್ಯಾಯ – ಶ್ಲೋಕ ೪೨ ರಿಂದ ೪೬.

ಪೂರ್ಣನಾದ ಶ್ರೀಹರಿಯು ಅವತರಿಸಿದನು. (ಮಹಾಭಾರತ ತಾತ್ಪರ್ಯನಿರ್ಣಯ ಅಧ್ಯಾಯ ೧೦, ಶ್ಲೋಕ ೪೭) ಹೀಗೆ ಅವತರಿಸಿದ ವೇದವ್ಯಾಸರು ಲೋಕಧರ್ಮಗಳನ್ನು ರಕ್ಷಿಸಬೇಕೆನ್ನುವ ಇಚ್ಛೆಯಿಂದ ಶೀಘ್ರದಲ್ಲಿ ಅಂದರೆ; ಅವತರಿಸಿದ ನಂತರ ಏಳು ದಿವಸದೊಳಗೇನೇ ಬ್ರಾಹ್ಮಣತ್ವವನ್ನು ಹೊಂದಿ, ಮಾತಾ–ಪಿತೃಗಳಿಗೆ, "ಯಾವಾಗ ನನ್ನನ್ನು ಸ್ಮರಿಸುತ್ತೀರೋ ಆಗ ನಿಮ್ಮಿಬ್ಬರಿಗೆ ಪ್ರತ್ಯಕ್ಷನಾಗುವೆನು; ಎಂದು ತಾಯಿಯನ್ನು ಕುರಿತು ವಿಯೋಗ ಕಾಲದಲ್ಲಿ ಈ ವರವನ್ನು ಕೊಟ್ಟರು. (ಮಾ.ಭಾ.ತಾ.ನಿ. ಅ. ೧೦. ಶ್ಲೋಕ ೫೬). ಹೀಗೆ ಸತ್ಯವತಿ ವಾಸವಿ ದೇವಿಯ ಪುತ್ರನಾಗಿ ಅವತರಿಸಿದ್ದರಿಂದ – ವಾಸವೀಯ ನಾದಂಥ ವ್ಯಾಸರೂಪೀ – **ಶ್ರೀಹರಿಯು**[೮೫].

**೧೦೦. ಕಪಿಲ**

ಭಗವಂತನು ಅನಂತ ಸುಖಸ್ವರೂಪಿ. ಜಗತ್ತಿನ ರಕ್ಷಕ ಹಾಗೂ ಸಂಹಾರಕ ; ಆದುದರಿಂದಲೇ ಜ್ಞಾನಿಗಳು ಅವನನ್ನು "ಕಪಿಲ" ಎಂದು ಕರೆಯುವರು.[೮೬]

ಕರ್ದಮ ಮಹರ್ಷಿಯ ತಪಸ್ಸಿಗೆ ಮೆಚ್ಚಿ, ಭಗವಂತನು ಆತನಿಗೆ ವಿವಾಹವಾಗೆಂದು ಹೇಳಿದನು. ಸ್ವಾಯಂಭುವ ಮನುವು ತನ್ನ ಮಗಳಾದ ದೇವಹೂತಿಯನ್ನು ಆತನಿಗೆ ಕೊಟ್ಟು ವಿವಾಹ ಮಾಡಿದನು. ಕರ್ದಮ ಮಹರ್ಷಿಯು ತನ್ನ ಯೋಗಬಲದಿಂದ ವಿಮಾನವನ್ನು ಪಡೆದು, ಪತ್ನಿಯೊಂದಿಗೆ ಆಕಾಶದಲ್ಲಿ ವಿಹರಿಸಿದನು. ಅವರಲ್ಲಿ "ಕಪಿಲ"ರೂಪೀ ಪರಮಾತ್ಮನು ಆದಿಮನ್ವಂತರದಲ್ಲಿ ಅವತರಿಸಿದನು. ಈ ಕಪಿಲರೂಪಿ ಪರಮಾತ್ಮನು, ತನ್ನ ಮಾತಿಗೆ ಸಂಸಾರ ದುಃಖ ನಾಶಕನವಾದ ಸಾಂಖ್ಯಯೋಗ, ಭಕ್ತಿಯೋಗ, ವೈರಾಗ್ಯ ವಿಚಾರಗಳು, ಪುಣ್ಯಪಾಪಕರ್ಮವಿಚಾರ, ಪರಬ್ರಹ್ಮೋಪಾಸನಾಮಾರ್ಗ ಮೊದಲಾದವುಗಳನ್ನು ಬೋಧಿಸಿದನು. ಈ ವಿಚಾರಗಳನ್ನರಿತು ಆಚರಿಸಿ ದೇವಹೂತಿಯು ಮುಕ್ತಳಾದಳು. ಶ್ರೀಹರಿಯು ಅವತರಿಸಿದ ಇಪ್ಪತ್ತುಮೂರು ಅವತಾರಗಳಲ್ಲಿ ಇದು ಮೂರನೇಯದು[೮೭]. ಇಂಥ ಕಪಿಲ–ರೂಪಿಯಾದ– **ಶ್ರೀಹರಿಯು.**

**೧೦೧. ಋಷಭ**

ನಾಭಿರಾಜನ ಭಾರ್ಯೆಯಾದ ಮೇರುದೇವಿಯಲ್ಲಿ, ಬ್ರಾಹ್ಮಣರ ಮಾತನ್ನು ವ್ಯರ್ಥ ಮಾಡಲಾರದೆ – ಜ್ಞಾನ ಮತ್ತು ಕಾಂತಿಯುಕ್ತನಾಗಿ "ಋಷಭ" ನಾಮದಿಂದ ಪುತ್ರನಾಗಿ ಅವತರಿಸಿದನು. ಅಗಾಧ ಜಿತೇಂದ್ರಿಯನೂ ಸರ್ವಸಂಗ ಪರಿತ್ಯಾಗಿಯೂ, ಬ್ರಹ್ಮಜ್ಞಾನಿಯೂ ಆದ ಈತನು ಸನ್ಯಾಸಾಶ್ರಮದ ಸತ್ಸಂಪ್ರದಾಯಗಳನ್ನು ಮುಕ್ತಿಯೋಗ್ಯ ಜೀವರಿಗೆ ಉಪದೇಶಿಸಿದನು. ಇತರರಿಂದ ಸಾಧಿಸಲು ಅಸಾಧ್ಯವಾದ ಅವಧೂತ ಚರ್ಯೆಯಿಂದ ಒಪ್ಪುತ್ತ ಪರಮಹಂಸ ಪದದಲ್ಲಿ ಸುಪ್ರಖ್ಯಾತವಾದಂಥ ಇದು ಶ್ರೀವಿಷ್ಣುವಿನ ಇಪ್ಪತ್ತು ಮೂರು ಅವತಾರಗಳಲ್ಲಿ ಒಂಭತ್ತನೇಯದು. ಋಷಭನಾಮಕ ಅವತಾರಿಯಾದ,[೮೮] – **ಶ್ರೀಹರಿಯು.**

---

೮೫. ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಅಧ್ಯಾಯ – ೧೦ ಶ್ಲೋಕ ೪೨

೮೬. ಬಾಭ್ರವ್ಯ ಶಾಖೆ – ಗೀತಾಭಾಷ್ಯ ೧೦–೨೬

೮೭. ಶ್ರೀಮದ್ಭಾಗವತ ತೃತಿಯಸ್ಕಂಧ – ಅಧ್ಯಾಯಗಳು ೨೬ರಿಂದ ೩೪

೮೮. ಶ್ರೀಮದ್ಭಂಗವತ ಎರಡನೇಯ ಸ್ಕಂದಾ ಏಳನೇಯ ಅಧ್ಯಾಯ ಮತ್ತು ಶ್ರೀಮದ್ಭಾಗವತ ಪಂಚಮಸ್ಕಂಧ ಮೂರನೇಯ ಅಧ್ಯಾಯ



ಶ್ರೇಯಸ್ಸನ್ನು ಬಯಸಿ ನಿತ್ಯವೂ ಪಾರಾಯಣ ಮಾಡಬೇಕೆಂಬುವವರ ಅನುಕೂಲಕ್ಕಾಗಿ ಶ್ರೀ ಋಷಭದೇವರ ಮಹಿಮಾ ಪದ್ಯವನ್ನು ಕೆಳಗೆ ಕೊಡಲಾಗಿದೆ.

**ಶ್ಲೋಕ :**

**ನಿತ್ಯಾನುಭೂತ ನಿಜಲಾಭ ನಿವೃತ್ತತೃಷ್ಣಃ**
**ಶ್ರೇಯಸ್ಯತದ್ರಚನಯಾ ಚಿರಸುಪ್ತ ಬುದ್ಧೇಃ ।**
**ಲೋಕಸ್ಯಯಃ ಕರುಣಯಾಽಭಯ ಮಾತ್ಮಲೋಕ ।**
**ಮಾಖ್ಯಾನ್ನಮೋ ಭಗವತೇ ಋಷಭಾಯ ತ ಸ್ಮೈ ॥ ೩೦ ॥**

**ಅರ್ಥ :–**

ಶ್ರೀಹರಿಯ ಅವತಾರನಾದ ಋಷಭದೇವನು ಯಾವಾಗಲೂ ಸ್ವರೂಪ ಭೂತಾನಂದದ ಅನುಭವವುಳ್ಳವನು. ಆದ್ದರಿಂದಲೇ ಅವನಿಗೆ ಮತ್ತೊಂದರ ಆಸೆಯಿಲ್ಲ. ಅನಾದಿಯಿಂದ ಅಜ್ಞಾನಿಗಳಾಗಿ ಶ್ರೇಯಸ್ಸಿಗೆ ವಿರುದ್ಧ ವ್ಯಾಪಾರಗಳನ್ನು ಮಾಡುತ್ತಾ ಮೋಕ್ಷ ಸಾಧನೆಯನ್ನು ತಿಳಿಯದ ಯೋಗ್ಯ ಜೀವರ ಮೇಲಿನ ಕರುಣದಿಂದ ಆತ್ಮತತ್ವಜ್ಞಾನೋಪದೇಶಕನೂ, ಸಂಸಾರಭಯ ಪರಿಹಾರಕನೂ, ಅಪರೋಕ್ಷ ಜ್ಞಾನವನ್ನು ಅನುಗ್ರಹಿಸುವವನೂ ಆದ ಋಷಭ ಭಗವಂತನಿಗೆ ನಮಸ್ಕಾರ,[೮೯]

**೧೦೨. ಮಹಿದಾಸ**

ಬ್ರಹ್ಮದೇವನ ಮಗನಾದ ವಿಶಾಲನೆಂಬಾತನ ಭಾರ್ಯೆಯಾದ ಇತರಾದೇವಿಯಲ್ಲಿ ಅವತರಿಸಿದ – "ಮಹಿದಾಸ" ರೂಪೀ ಪರಮಾತ್ಮನು ಭಗವಂತನ ಅವತಾರವೆಂದೂ, ಈ ಮಹಿದಾಸರೂಪೀ ಪರಮಾತ್ಮನೇ ಐತರೇಯ ಉಪನಿಷತ್ತಿಗೆ ಋಷಿ ಎಂದೂ ಹೇಳಲ್ಪಟ್ಟಿದೆ. ಇದೇ ಅವತಾರದಲ್ಲಿ, ನಾರದವರಿಗೆ ಪಂಚರಾತ್ರ ಶಾಸ್ತ್ರವನ್ನು ಉಪದೇಶಿಸಿದನು. ಮುಕ್ತಿಗೆ ಕಾರಣವೆನಿಸಿದ, ಕರ್ಮಯೋಗ ಮತ್ತು ಜ್ಞಾನಯೋಗಗಳನ್ನು, ಭಾಗವತವನ್ನು ಉಪದೇಶಿಸಿದನು. ಇದನ್ನು ತಿಳಿಯಬಲ್ಲವರು ವೈಷ್ಣವರೇ ಹೊರತು ಅವೈಷ್ಣವರಲ್ಲ, ಇಂಥ ಮಹಿದಾಸರೂಪೀ[೯೦] – **ಶ್ರೀಹರಿಯು.**

**೧೦೩. ಯಜ್ಞ**

ಋಚಿ ಪ್ರಜೇಶ್ವರ ಮತ್ತು ಅವನ ಪತ್ನಿಯಾದ ಆಕೂತಿದೇವಿಯಲ್ಲಿ ಹರಿಯು ಯಜ್ಞನಾಮಕನಾಗಿ ಅವತರಿಸಿದನು. ಅನಾದಿ ಪತ್ನಿಯಾದ ಲಕ್ಷ್ಮೀದೇವಿಯೂ ದಕ್ಷಿಣಾ ನಾಮಕಳಾಗಿ ಅವತರಿಸಿದಳು. ಯಜ್ಞನು ಪ್ರಥಮ ಮನ್ವಂತರದಲ್ಲಿ ಇಂದ್ರ ಪದವಿಯನ್ನು ಆಳಿದನು. ಆ ಮನ್ವಂತರ ದೇವತೆಗಳಿಗೆ – "ತುಷಿತರು" ಎಂದು ಹೆಸರು. ತನ್ನ ಭಾರ್ಯೆಯಾದ ದಕ್ಷಿಣಾದೇವಿಯಲ್ಲಿ "ಯಮ" ಎಂದರೆ ಇಂದ್ರಿಯನಿಗ್ರಹವುಳ್ಳವರಾದ ಯಮರೆಂಬ ಹನ್ನೆರಡು ಮಂದಿ ದೇವತೆಗಳನ್ನು ಪಡೆದನು. ಲೋಕದ ದುಃಖನಿವಾರಣಾ ಕಾರ್ಯಮಾಡಿದ ಈತನನ್ನು ಮಾತಾಮಹನಾದ ಸ್ವಾಯಂಭುವ ಮನುವು ಪರಿಹರಿಸಿಕೊಂಡನು. ಸಂಸಾರ ಕ್ಲೇಶವನ್ನು ಪರಿಹರಿಸುವದರಿಂದ ಯಜ್ಞನಿಗೆ "ಹರಿ" ಎಂಬ ಹೆಸರು ಸಾರ್ಥಕವಾಯಿತು[೯೦]. ಇಂಥ ಯಜ್ಞನಾಮಕ – **ಶ್ರೀಹರಿಯು.**

---

೮೯. ಶ್ರೀಮದ್ಭಾಗವತ ಪಂಚಮಸ್ಕಂಧ ಆರನೇಯ ಅಧ್ಯಾಯ

೯೦. ಶ್ರೀಮದ್ಭಾಗವತ ದ್ವಿತೀಯಸ್ಕಂಧ – ಏಳನೇಯ ಅಧ್ಯಾಯ.



**೧೦೪. ದತ್ತಾತ್ರೇಯ**

ಅತ್ರಿ ಮಹರ್ಷಿಯು ಭಗವಂತನನ್ನೇ ಪುತ್ರನಾಗಿ ಪಡೆಯಬೇಕೆಂದು ಮಾಡಿದ ತಪಸ್ಸಿಗೆ ಮೆಚ್ಚಿ, ಭಗವಂತನು ಪ್ರತ್ಯಕ್ಷನಾಗಿ, "ಮುನಿವರ್ಯ, ಇದೋ ನಾನೇ ನನ್ನನ್ನು ನಿನಗೆ ಪುತ್ರವನ್ನಾಗಿ ಒಪ್ಪಿಸಿದ್ದೇನೆ" ಎಂದು ಋಷಿ ಪತ್ನಿಯಾದ ಅನುಸೂಯಾದೇವಿಗೆ ಕೈಗೂಸಾಗಿ ಒಪ್ಪಿಸಿಕೊಂಡನು. ಹೀಗೆ ಅವರಿಗೆ ತಾನೇ "ದತ್ತ" ನಾದುದರಿಂದ "ದತ್ತಾತ್ರೇಯ"ನೆಂದು, ತನ್ನ ಪಾದಸೇವೆಮಾಡಿ ಪರಿಶುದ್ದತೆಯನ್ನು ಹೊಂದಿದ ಹೈಹಯರೆಂಬವರಿಗೆ ಅಣಿಮಾದಿ ಅಷ್ಟೈಶ್ವರ್ಯ ಸಿದ್ಧಿಯನ್ನು, ಪಾರಲೌಕಿಕವಾದ ಮೋಕ್ಷವನ್ನು ದಯಪಾಲಿಸಿದ ದತ್ತಾತ್ರೇಯ ರೂಪೀ,[೯೦] – **ಶ್ರೀಹರಿಯು.**

**೧೦೫. ನಾರಾಯಣ**

ಭಗವಂತನು ಧರ್ಮನೆಂಬ ಮುನಿಯ ಪತ್ನಿಯಾದ – ಮೂರ್ತಿ – ದಕ್ಷನ ಹದಿಮೂರನೇಯ ಮಗಳು – ಎಂಬವಳ ಉದರದಲ್ಲಿ – "ನಾರಾಯಣ" ರೂಪದಿಂದ ಅವತರಿಸಿದನು. ಈ ಅವತಾರದಲ್ಲಿ ಭಗವಂತನು ಪ್ರಕಟಿಸಿದ ತಪಶ್ಶಕ್ತಿಯು ವರ್ಣಿಸಲಳವಲ್ಲ. ತಪೋಮಾರ್ಗದ ಉಚ್ಚಾದರ್ಶವನ್ನು ಲೋಕಕ್ಕೆ ತೋರಿಸಲಿಕ್ಕಾಗಿಯೇ ಅಗಾಧವಾದ ತಪಸ್ಸಿನಲ್ಲಿ ನಿರತನಾದ ಈತನನ್ನು ಕಂಡು, ದೇವೇಂದ್ರನು ಭಯಪಟ್ಟು, ತಪೋಭಂಗಕ್ಕಾಗಿ ರಂಭೆ, ಮೇನಕೆ ಮೊದಲಾದ ಅಪ್ಸರ ಸ್ತ್ರೀಯರನ್ನು ಕಳುಹಿದನು. ಅವರು ಎಷ್ಟೋ ಮಟ್ಟಿಗೆ ಹಾವಭಾವ ವಿಲಾಸಗಳಿಂದ ಆತನನ್ನು ಮೋಹಪರವಶನನ್ನಾಗಿ ಮಾಡಲು ಯತ್ನಿಸಿದರು. ಕೊನೆಗೆ ನಾರಾಯಣ ಸ್ವಾಮಿಯು ಅವರೆಲ್ಲರೂ ನೋಡುತ್ತಿದ್ದಂತೆಯೇ ತನ್ನ ತೊಡೆಯಿಂದ ಅವರೆಲ್ಲರ ಸೌಂದರ್ಯವನ್ನು ಮೀರಿಸುವಂತಹ "ಊರ್ವಸಿ" ಎಂಬ ಲೋಕಮೋಹಕ ಸ್ತ್ರೀರೂಪವನ್ನು ಸೃಷ್ಟಿಸಿದನು. ಇದನ್ನು ಕಂಡು ರಂಭಾದಿ ಎಲ್ಲ ಅಪ್ಸರಸ್ತ್ರೀಯರು ನಾಚಿ ಹೊರಟು ಹೋದರು.

ನಾರಾಯಣ ಶಬ್ದದ ಕೆಲ ಮಹತ್ವದ ಅರ್ಥಗಳು –

೧) ಗುಣಗಳಿಗೆ ಆಶ್ರಯನಾಗಿ, "ಸಕಲಗುಣ ಪರಿಪೂರ್ಣ" ನೆನಿಸಿಕೊಳ್ಳುತ್ತಾನೆ.

೨) ದೋಷದೂರನಾಗಿ – "ನಿತ್ಯನಿರ್ಮುಕ್ತ ದೋಷ" ನಾಗಿರುತ್ತಾನೆ.

೩) ವೇದಪ್ರತಿಪಾದ್ಯನಾಗಿ – "ವೇದಗಳಿಗೆ ಆಶ್ರಯ" ನಾಗಿರುತ್ತಾನೆ.

೪) ಮನುಷ್ಯರಿಗೆ – "ಉತ್ಪತ್ತಿದಾಯಕ ಹಾಗೂ ಆಶ್ರಯದಾಯಕ" ನಾಗಿರುತ್ತಾನೆ.

೫) ನರಸಮೂಹಕ್ಕೆ – "ವಂದ್ಯನಾಗಿಯೂ ಆಶ್ರಯನಾಗಿಯೂ" ಇರುವವನು.

೬) ಮನುಷ್ಯರಿಗೆ ಅಧಿಪತಿಯಾದ – ಮುಖ್ಯವಾಯುದೇವರಿಗೆ – "ಪ್ರೇಮಾಸ್ಪದನೂ ಆಶ್ರಯನೂ" ಆಗಿರುವನು.[೯೧]

ಇಂಥ ನಾರಾಯಣರೂಪೀ – **ಶ್ರೀಹರಿಯು.**

---

೯೧. ಶ್ರೀ.ಮು. ಶ್ರೀ ಗುಂಡುರಾವ ಕೃತ – ಶ್ರೀಮನ್ಮಧ್ವಮತ ತತ್ವಸಧಾ – ಶ್ರೀ – ಹರಿವಿಠಲ ಪ್ರಕಾಶನ) ಪುಟ – ೩೮,೩೯.



ನಾರಾಯಣ ಶಬ್ದವು ಅನೇಕ ಅರ್ಥಉಳ್ಳದ್ದು; ಶ್ರೀಹರಿಯ ನಾನಾ ಮಹಿಮೆಗಳನ್ನು ನಿರೂಪಿಸುತ್ತದೆ. ಅವುಗಳಲ್ಲಿ –ಗುಣಪೂರ್ಣತ್ವ, ನಿರ್ದೋಷತ್ವ, ಜ್ಞೇಯತ್ವ (ಯೋಗ್ಯ ಸಾಧನೆಗಳಿಂದ ಯಥಾಯೋಗ್ಯವಾಗಿ ತಿಳಿಯಲ್ಪಡತಕ್ಕವನು) ಗಮ್ಯತ್ವ (ಮುಕ್ತರಿಂದ ಪ್ರಾಪ್ಯನು) ಎಂಬರ್ಥಗಳು ಮುಖ್ಯವಾದವುಗಳು. ಈಗಿನವರೆಗೆ "ನಾರಾಯಣ" ಈ ಶಬ್ದಕ್ಕೆ ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರು ಎಪ್ಪತ್ತೆರಡು ಅರ್ಥಗಳನ್ನು ಕಂಡುಹಿಡಿದಿದ್ದಾರೆ ಇಂಥ ನಾರಾಯಣರೂಪಿ – **ಶ್ರೀಹರಿಯು.**[೯೨]

**೧೦೬. ನಿರಾಮಯ**

ಎಲ್ಲರ ಸರ್ವರೋಗ ಪರಿಹಾರಕನಾಗಿ ತಾನು ಸ್ವತಃ ನಿರೋಗಿಯಾಗಿ ಇದ್ದಂತಹ – **ಶ್ರೀಹರಿಯು.**

**೧೦೭. ಶ್ರೀ ಸನಾತನ**

ಶ್ರೀರಮಾದೇವಿಯವರಿಗಿಂತ ಮೊದಲಿಗನು; ಅಂದರೆ ಶ್ರೀಹರಿಯು ಸೃಷ್ಟಿಯನ್ನು ಮಾಡುವಕಾಲಕ್ಕೆ ಮೊದಲು ಶ್ರೀರಮಾದೇವಿಯು ಸೃಜಿಸುವಂತೆ ಮಾಡಿ; ಆಮೇಲೆ ಎಲ್ಲ ಸೃಷ್ಟಿಯನ್ನು ಸೃಜಿಸಿದನು. ಆದ್ದರಿಂದ ಶ್ರೀಲಕ್ಷ್ಮೀದೇವಿಗಿಂತ ಸನಾತನನು ಅಂದರೆ ಮೊದಲು ಅಥವಾ ಪೂರ್ವಕಾಲದಲ್ಲಿ ಇದ್ದಂಥ – **ಶ್ರೀಹರಿಯು.**

**೧೦೮. ಸಕಲಭುವನ ನಿವಾಸ.**

ವಿರಾಟಪುರುಷನ ನಾಭಿಕಮಲದಿಂದ ಶಿರಃಪರ್ಯಂತ ಏಳು ಲೋಕಗಳು; ನಾಭಿಯಿಂದ ಅಂಗಾಲಿನವರೆಗೆ ಏಳು ಲೋಕಗಳು. ಭೂಲೋಕದ ಮೇಲೆ ಏಳು ಕೆಳಗೆ ಏಳು – ಹೀಗೆ ಒಟ್ಟಿಗೆ ಹದಿನಾಲ್ಕು ಲೋಕಗಳು.

೧. ಸತ್ಯಲೋಕ – ಬ್ರಹ್ಮ – ವಿರಿಂಚೀರೂಪಿ – **ಶ್ರೀಹರಿಯು.**

೨. ತಪೋಲೋಕ –

೩. ಜನೋಲೋಕ –

೪. ಮಹರ್ಲೋಕ – ಉಪೇಂದ್ರರೂಪಿ – **ಶ್ರೀಹರಿಯು.**

೫. ಸ್ವರ್ಗ –

೬. ಅಂತರಿಕ್ಷ – ಸವಿತ್ರಾಂತರ್ಗತ – ಶಿಂಶುಮಾರರೂಪಿ – **ಶ್ರೀಹರಿಯು.**

**೭. ಭೂಲೋಕ –**

**ಆದ್ಯಂ ಸ್ವಯಂ ವ್ಯಕ್ತಮಿದಂ ವಿಮಾನಂ ರಂಗಸಂಜ್ಞಿತಮ್ ।**
**ಶ್ರೀಮುಷ್ಣಂ ವೆಂಕಟಾದ್ರಿಶ್ಚ ಸಾಳಗ್ರಾಮಶ್ಚ ನೈಮಿಶಮ್ ॥**
**ತೋತಾದ್ರಿಃ ಪುಷ್ಕರಂಚೈವ ನರನಾರಾಯಣಾಶ್ರಮಮ್ ।**
**ಅಷ್ಟೌ ಮೇ ಮೂರ್ತಯಃ ಸಂತಿ ಸ್ವಯಂ ವ್ಯಕ್ತಾಃಮಹೀತತೇ ॥**

ಹೀಗೆ ಎಂಟುಮೂರ್ತಿಯುತನಾದ,[೯೨] – **ಶ್ರೀಹರಿಯು.**

**೮. ಅತಲ**

**೯. ವಿತಲ** – ಹಾಟಕೇಶ್ವರ ನಾಮಕ ಶಿವನು ಪಾರ್ವತೀ ಸಹಿತನಾಗಿರುವನು. ಅವನ ಅಂತರ್ಯಾಮಿಯಾಗಿರುವಂಥ – **ಶ್ರೀಹರಿಯು.**

**೧೦. ಸುತಲ** – ವಾಮನರೂಪೀ ಭಗವಂತನು ಗದಾಧಾರಿಯಾಗಿ ಬಲಿಚಕ್ರವರ್ತಿನು ಬಾಗಿಲಲ್ಲಿ ಕಾದಿರುವಂಥ – **ಶ್ರೀಹರಿಯು.**

**೧೧. ತಲಾತಲ** – ರುದ್ರರಕ್ಷಿತ ಮಯದಾನವನು ಭಯವಿಲ್ಲದೆ ಇಲ್ಲಿ ಇರುವನು.

**೧೨. ಮಹಾತಲ** – ಕದ್ರುಪುತ್ರರಾದ, ಅನೇಕ ಹೆಡೆಗಳುಳ್ಳ ಕ್ರೋಧವಶರೆಂಬ ಸರ್ಪಗಣವಿದೆ.

**೧೩. ರಸಾತಲ** – ದಿತಿಪುತ್ರರೂ, ದನುಪುತ್ರರೂ, ನಿವಾತಾಕವಚರೂ, ಕಾಲಕನ್ಯಾಪುತ್ರರೂ ಮೊದಲಾದ ದೇವಶತ್ರುಗಳು ಇಲ್ಲಿ ಇರುತ್ತಾರೆ.

**೧೪. ಪಾತಾಳ** – ವಾಸುಕಿ ಮೊದಲಾದ ನಾಗಪತಿಗಳೂ, ಶಂಖ, ಕುಲಿಕ, ಮಹಾಶಂಖ, ಶ್ವೇತ, ಧನಂಜಯ ಮೊದಲಾದವರು ಇಲ್ಲಿ ವಾಸಿಸುತ್ತಿದ್ದಾರೆ. ಅವರ ಹೆಡೆಗಳಲ್ಲಿರುವ ಮಣಿಗಳು ಅಂಧಕಾರವನ್ನು ಹೋಗಲಾಡಿಸುತ್ತಿವೆ. ಪಾತಾಳ ಲೋಕದ ಕೆಳಗೆ ಮೂವತ್ತು ಸಾವಿರ ಯೋಜನೆಗಳ ದೂರದಲ್ಲಿ ಸಂಕರ್ಷಣಾ ವಿಷ್ವಶೇಷನಿರುವನು. ಮುಕ್ತಿಯೋಗ್ಯ ಉಪಾಸಕರ ಮನಸ್ಸಿನಲ್ಲಿ ಸನ್ನಿಹಿತರಾಗಿ, ಅವರಲ್ಲಿರುವ ಅಜ್ಞಾನ, ಅನ್ಯಥಾ ಜ್ಞಾನಗಳನ್ನು ಬೇಗ ಹೋಗಲಾಡಿಸುವಂಥ – ಶೇಷದೇವಾಂತರ್ಗತ ಸಂಕರ್ಷಣರೂಪೀ – **ಶ್ರೀ ಹರಿಯು "ಸಿದ್ಧಾದಿವಿನುತ ಸಂತತ ಪಾತಾಳವಾಸಿ" ಕಪಿಲರೂಪೀ ಭಗವಂತನು.**[೯೩]

ಹೀಗೆ ಹದಿನಾಲ್ಕು ಲೋಕಗಳಲ್ಲಿ ಬೇರೆಬೇರೆ ರೂಪಗಳಿಂದ ವಾಸಿಸುವಂಥ – **ಶ್ರೀಹರಿಯು.**[೯೪]

**೧೦೯. ಸಂಕರುಷಣ**

ಶ್ರೀಮನ್ನಾರಾಯಣನು ಲೋಕೋಪಕಾರಕ್ಕಾಗಿ ನಿರ್ವಿಕಾರವಾದ ಭಗದ್ರೂಪ ಪ್ರಾದುರ್ಭಾವವಾದ – ಶುದ್ಧಸೃಷ್ಟಿಯ ನಿಮಿತ್ತ ಮೊದಲು ವಾಸುದೇವ ರೂಪತಾಳಿ; ತದನಂತರ ಸಂಕರ್ಷಣ ರೂಪ ತಾಳಿದನು. ಈ ರೂಪವು ಸಕಲ ಸಂಹಾರ ಕಾರಣವಾಗಿ ಲಯಕಾರಕವಾಗಿದೆ. ಈ ಅವತಾರದಲ್ಲಿ ಲಕ್ಷ್ಮಿಯು **'ಜಯಾ'** ಎಂಬ ರೂಪತಾಳಿರುವಳು.

**ಸೋಯಂವಿಹಾರ ಇಹಮೇ ತನುಭೃತ್ಸ್ವಭಾವ ।**
**ಸಂಭೂತಯೇ ಭವತಿ ಭೂತಿ ಕೃದೇವ ಭೂತ್ಯಾಃ ॥ ೫ ॥**

**ಸಂಕರ್ಷಣಶ್ಚಸ ಬಭೂವ ಪುನಃ ಸುನಿತ್ಯಃ ।**
**ಸಂಹಾರಕಾರಣ ವಪುಸ್ತದನುಜ್ಞಯೈವ ॥ ೬ ॥**

೯೨. ಶ್ರೀ.ವಿ.ಸ.ನಾಸ್ತೋತ್ರಕ್ಕೆ ಉಡುಪಿಟೀಕೆ – ನಾಮ – ೪೦ "ಪುಷ್ಕರಾಕ್ಷಃ" ಈ ನಾಮಕ್ಕೆ ಪುಟ – ೧೯೮.
೯೩. ವಿಜಯದಾಸರ ಸುಳಾದಿ – ಗುರುರಾಜ ಪ್ರಕಾಶನದ ಸಾಪ್ತಾಹಿತ ರೂಪ ಭಗವತ – ಟೀಕೆ– ವೇಣುಗೋಪಾಲದಾಸ ಕೃತ – ಪುಟ –೧೨೩
೯೪. ಶ್ರೀಮದ್ಭಗವತ ಪಂಚಮಸ್ಕಂಧ – ಇಪ್ಪತ್ತು ಮೂರನೇಯ ಅಧ್ಯಾಯ



**ದೇವಿಜಯೇತ್ಯನು ಬಭೂವ ಸ ಸೃಷ್ಟಿ ಹೇತೋಃ ।**
**ಪ್ರದ್ಯುಮ್ನತಾಮುಪಗತಃ ಕೃತಿತಾಂ ಚ ದೇವೀ ॥ ೭ ॥**

**– ಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೧**

**೧೧೦. ಸದಾಸ್ಮಿತಹಾಸ**

ಯಾವಾಗಲೂ ಶಾಂತಚಿತ್ತದಿಂದ ಆನಂದಾತಿಶಯದಲ್ಲಿಯೇ ತಲ್ಲೀನನಾಗಿ ಮುಗುಳು ನಗೆಯಿಂದಲೇ ತನ್ನ ಭಕ್ತರನ್ನು ಸಂತೋಷಬಡಿಸುವಂಥ – **ಶ್ರೀಹರಿಯು.**

**ಸೋಮ ದಿವಾಕರೇಕ್ಷಣ: = ಈ ಕ್ಷಣನೋಡು**

**೧೧೧. ಸೋಮಕರೇಕ್ಷಣ;** **೧೧೨. ದಿವಾಕರೇಕ್ಷಣ**

ಚಂದ್ರಸೂರ್ಯರನ್ನು ಸೃಷ್ಟಿಸಿ, ಅವರಿಗೆ ಉಚಿತವಾದ ಕಾರ್ಯ, ಬಲ ಹಾಗೂ ಚಲಿಸಲಿಕ್ಕೆ ಆಕಾಶದಲ್ಲಿ ಮಾರ್ಗ ನಿರ್ಮಿಸಿಕೊಟ್ಟ ವರುಣ ನಾಮಕಾಭಗವಂತನು ತನ್ನ ಆದೇಶಾನುಸಾರವಾಗಿ ಯಾವಾಗಲೂ ಸಂಚರಿಸಲು ಸೂರ್ಯನಿಗೆ ಆಕಾಶದಲ್ಲಿ ಉತ್ತಮವಾದ ಮಾರ್ಗವನ್ನು ರಚಿಸಿಕೊಟ್ಟನೆಂದು ಋಗ್ವೇದ ಸಂದೇಶಿಸಿದೆ,[೯೫] ಇಂಥ – **ಶ್ರೀಹರಿಯು.**

**೧೧೩. ಸ್ವಪ್ರಕಾಶ**

ಪರರ ಸಹಾಯವೂ ಪ್ರೇರಣೆಯೂ ಇಲ್ಲದೆ ತಾನೇ ಸ್ವತಃ ಅತ್ಯಂತ ಪ್ರಕಾಶಮಾನ ವಾಗಿರುವಂಥ – **ಶ್ರೀಹರಿಯು.**

**೧೧೪. ಶೇಷಶಯನ**

**ಶೇಷಶಯನ ಜಗಚ್ಚರಾಚರ – ।**
**ಪೋಷಕಾಧಾರಕ ಸ್ವಜನಹೃದ್ – ।**
**ಭೂಷಣಾಪರಿಚ್ಛಿನ್ನ ಅಪ್ರೇಯಾದಿಶೃತಿವಕ್ತ ॥**
**ಘೋಷವರ್ಣ ಸಂಪೂರ್ಣವಾಚ್ಯಾ – ।**
**ಶೇಷ, ದೋಷವಿದೂರ ಖಳಜನ – ।**
**ಭೀಷಣಾಪ್ರಾಕೃತ ಅನುಪಮ ಪರಮಪುರುಷ ನಮೋ ॥ ೮ ॥**

ಕ್ಷೀರಸಾಗರದಲ್ಲಿ ಶ್ರೀಲಕ್ಷ್ಮೀದೇವಿ ಹಾಗೂ ತನ್ನ ಏಕಾಂತ ಭಕ್ತರಾದ ವಾಯು, ಗರುಡದಿಂದ ಸೇವೆಗೊಳ್ಳುತ್ತ ಶೇಷದೇವರನ್ನು ಹಾಸಿಗೆಯನ್ನಾಗಿ ಮಾಡಿಕೊಂಡು ಪವಡಿಸಿದಂಥ – **ಶ್ರೀಹರಿಯು.**

ನಾಮ – ೧೯೭ ಅಪುಶಯನ ನೋಡಿರಿ

**ಜಗಚ್ಚರಾಚರಪೋಷಕಾಧಾರಕ**

**೧೧೫. ಜಗತ್ಚರ ಪೋಷಕ** **೧೧೬. ಜಗತ್ ಅಚರ ಪೋಷಕ**

**೧೧೭. ಜಗತ್ ಚರ ಆಧಾರಕ** **೧೧೮. ಜಗತ್ ಅಚರ ಆಧಾರಕ.**

೯೫. ಋಗ್ವೇದ ೨೪–೮ ಹಾಗೂ ಭಾಷ್ಯ

ಭಗವಂತನ ಸತ್ಯತ್ವ ಲಕ್ಷಣದ ವಿವರಣೆಗಾಗಿ ತೈತ್ತಿರೀಯೋಪನಿಷತ್ತು ಆಕಾಶಾದಿ ಪಂಚಭೂತಗಳೂ ಭಗವಂತನಿಂದ ಉಂಟಾದವು; ಎಂದು ಹೇಳಿದೆ.[೯೬] ಅವುಗಳ ಜೊತೆಗೆ, ಆಯಾಯ ಭೂತ ಪದಾರ್ಥಗಳ ಅಭಿಮಾನಿ ದೇವತೆಗಳಿಗೆ ಆಯಾಯಭೂತ ಪದಾರ್ಥಗಳಲ್ಲಿ ಅಭಿಮಾನ ಹುಟ್ಟುವಂತೆಯೂ, ದೇವತೆಗಳ ಶರೀರ ಹುಟ್ಟುವಂತೆಯೂ ಭಗವಂತನು ಮಾಡಿರುವನು. ಹಾಗೆಯೇ ಈ ಮೂವರ ನಿಯಾಮಕನಾಗಿ ತಾನೂ ಐದು ರೂಪಗಳಿಂದ ಆಕಾಶಾದಿ ಪಂಚಭೂತಗಳ ಜೊತೆಗೆ ಅಭಿವ್ಯಕ್ತನಾಗಿರುವನು.[೯೭, ೯೮]

**೧೧೯. ಸ್ವಜನ ಹೃದ್ ಭೂಷಣ**

ತನಗೆ ಅತ್ಯಂತ ಪ್ರಿಯಳಾದ ಶ್ರೀರಮಾದೇವಿ ಹಾಗೂ ತನ್ನ ಏಕಾಂತಭಕ್ತರಾದ ಬ್ರಹ್ಮ, ವಾಯು, ಶೇಷ, ಗರುಡ ಮೊದಲಾದವರ ಹೃದಯದಲ್ಲಿ ಇದ್ದು ಭೂಷಣನಾದಂಥ – **ಶ್ರೀಹರಿಯು.**

**೧೨೦. ಅಪರಿಚ್ಛಿನ್ನ**

(೧) ಪರಮಾತ್ಮನು ಭೂತ, ವರ್ತಮಾನ ಹಾಗೂ ಭವಿಷ್ಯತ್ತೆಂಬ ತ್ರಿವಿಧ ಪರಿಚ್ಛೇದ ಶೂನ್ಯನು. ಆದ್ದರಿಂದ ಅವನು – ಅಪರಿಚ್ಛಿನ್ನನು[೯೯].

(೨) ಶ್ರೀಹರಿಯು – ಅಪರಿಚ್ಛಿನ್ನನು – ಅಂದರೆ ಅಳತೆಗೆ ಸಿಗದವನು[೧೦೦].

ಹೀಗೆ ಅಪರಿಚ್ಛಿನ್ನನಾದ – **ಶ್ರೀಹರಿಯು.**

**೧೨೧. ಅಪ್ರಮೇಯ**

ಸಾಕಲ್ಯೇನ ಪ್ರಮಾಣಾದಿಗಳಿಂದ ತಿಳಿಯಲಶಕ್ಯನಾದಂಥ – **ಶ್ರೀಹರಿಯು.**

**೧೨೨. ಆದಿಶ್ರುತಿವಕ್ತ.**

ಆದಿಭೂತರಾದ ಬ್ರಹ್ಮದೇವರಿಗೆ ವೇದೋಪದೇಶ ಮಾಡಿದಂಥ,[೧೦೧] – **ಶ್ರೀಹರಿಯು.**

**೧೨೩. ಘೋಷವರ್ಣ**

ಆಘೋಷವರ್ಣಗಳಿಂದ ಮುಖ್ಯ ವಾಚ್ಯನದಂಥ – ಶ್ರೀಹರಿಯು

ಸಮುದ್ರದಧ್ವನಿ, ಘಂಟಾನಾದ ಹಾಗೂ ನದಿಯು ಹರಿಯುವಾಗ ಬರುವ ಧ್ವನಿಗೆ **"ಘೋಷ"**ವೆನ್ನುತ್ತಾರೆ. ಆ ಘೋಷ ಪ್ರತಿಪಾದ್ಯ ಶಬ್ದಗಳಲ್ಲಿ – ಧ್ವನ್ಯಾತ್ಮಕ ಹಾಗೂ ವರ್ಣಾತ್ಮಕ ವೆಂದು ಎರಡು ವಿಧ. ಧ್ವನಿಯೇ "ಘೋಷ"[೧೦೨] – ಅದರಿಂದ ಪ್ರತಿಪಾದ್ಯಾನಾದಂಥ – **ಶ್ರೀಹರಿಯು.**

---

೯೬. ತೈತಿರಿಯೋಪನಿಷತ್ತು ೨–೧ ಹಾಗೂ ಯಜುಃ ಸಂಹಿತಾ.
೯೭. ಅನುವ್ಯಾಖ್ಯಾನ ೧–೧–೨೦೧ ಹಾಗೂ ೨೦೬ ಇಂಥ – ಶ್ರೀಹರಿಯು
೯೮. ವಿಷ್ಣುಸಹಸ್ರನಾಮ ಸ್ತೋತ್ರಕ್ಕೆ – ಉಡುಪಿಟೀಕೆ – ನಾಮ –೫ "ಭೂತಕೃತ್" ಈ ನಾಮಕ್ಕೆ ಪುಟ – ೧೯.
೯೯. ಕನ್ನಡ ಅಧ್ಯಯನ ಸಂಸ್ಥೆಯ – ಭಾರತೀಯದರ್ಶನ" ಪುಟ – ೫೦೧.
೧೦೦. ಶ್ರೀಮದ್ಭಾಗವತ ದ್ವಿತೀಯಸ್ಕಂಧ – ತೃತೀಯ ಅಧ್ಯಾಯ.
೧೦೧. ಭಾಗವತ ಆದಿಶ್ಲೋಕ – "ತೆನೆಬ್ರಹ್ಮಾಹೃದಾಯಾ ಆದಿವ್ರವಿಯೇ" ೧೦೫.ಐತರೇಯ ಭಾಷ್ಯ.
೧೦೨. ನ್ಯಾಯಸುಧಾ ೧ನೇಯ ಅಧ್ಯಾಯ ೪ನೇ ಪಾದ – ಇದಕ್ಕೆ ಶ್ರೀನಿವಾಸ ತೀರ್ಥರವ್ಯಾಖ್ಯಾನ.



**೧೨೪. ಸಂಪೂರ್ಣವಾಚ್ಯ**

ಭಗವಂತನು ಎಲ್ಲ ವಿಷಯಗಳಲ್ಲಿ ಪರಿಪೂರ್ಣನಾಗಿದ್ದುದರಿಂದ, ಸಂಪೂರ್ಣ ವಾಚ್ಯನೆಂದು ಕರೆಯಿಸಿಕೊಳ್ಳುವಂಥ – **ಶ್ರೀಹರಿಯು.**

**೧೨೫. ಅಶೇಷ ದೋಷವಿದೂರ**

**ನಮೋ ನಮೋಽಶೇಷದೋಷದೂರ ಪೂರ್ಣಗುಣಾತ್ಮನೇ ।**
**ವಿರಂಚಿ ಶರ್ವಪೂರ್ವೇಧ್ಯ ವಂದ್ಯಾಯ ಶ್ರೀವರಾಯತೇ ॥ ೧ ॥**
**– ಶ್ರೀ ಮದಾಚಾರ್ಯಕೃತ – ಶ್ರೀಮದಣುಭಾಷ್ಯದ ಅಂತ್ಯಶ್ಲೋಕ.**

**ಅರ್ಥ :–** ಬ್ರಹ್ಮರುದ್ರಾದಿ ದೇವತೆಗಳಿಂದ ವಂದ್ಯನೂ, ಗುಣಪೂರ್ಣನೂ, ಸಮಸ್ತ ದೋಷದೂರನೂ, ಆದ ಶ್ರೀಲಕ್ಷ್ಮೀಪತಿಯೇ ನಿನಗೆ ಅನಂತ ವಂದನೆಗಳು ॥ ೧ ॥

ಅಸ್ವಾತಂತ್ರ್ಯ, ಅಪೂರ್ಣತೆ, ಯಾವದಾದರೊಂದು ರೀತಿಯ ಜನನ ಹಾಗೂ ಯಾವದಾರೊಂದು ರೀತಿಯ ನಾಶ – ದೋಷಗಲು ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರಲ್ಲೂ ಇದೆ. ಸ್ವತಂತ್ರನಾಗಿರುವ ಹಾಗೂ ಪರಿಪೂರ್ಣನಾಗಿರುವ ಭಗವಂತನೊಬ್ಬನೇ ಉಳಿದವರೆಲ್ಲ ಸಾಧಾರಣವೆನಿಸಿರುವ ಯಾವದೇ ರೀತಿಯ ಉತ್ಪತ್ತಿಗೂ, ನಾಲ್ಕು ವಿಧದ ನಾಶಕ್ಕೂ ಒಳಗಾಗದೆ ಸರ್ವದೋಷಗಳಿಂದಲೂ ದೂರನಾಗಿರುನು[೧೦೩].

ಜ್ಞಾನರೂಪಿಯಾದ ಅವನಲ್ಲಿ ಅವಿದ್ಯೆಯಾಗಲಿ[೧೦೪] ಪ್ರಕೃತಿಗೂ ನಿಯಾಮಕನಾಗಿರುವ ಅವನಲ್ಲಿ ಸಂಪರ್ಕಪ್ರಯುಕ್ತವಾಗಿ ಹುಟ್ಟುವ ಕಾಮಕ್ರೋಧಾದಿ ದೋಷಗಳು ಬರಲಾರವು.[೧೦೫] ಸ್ವರೂಪಭೂತನಾದ ಜ್ಞಾನಾನಂದಾತ್ಮಕ ಶರೀರವನ್ನು ಹೊಂದಿರುವ ಅವನು ಜರಾಮರಣಾದಿಗಳಿಂದಲೂ ಅತೀತನು.[೧೦೬] ಆದ್ದರಿಂದಲೇ ಶ್ರೀವಿಷ್ಣುವನ್ನು ಪರಿಚಯಿಸಲು ಹೊರಟ ಮಹೋನಿಷತ್ತು ಅವನ **ಸರ್ವದೋಷವಿದೂರತ್ವವನ್ನೆ** ಮೊದಲು ಉಲ್ಲೇಖಿಸಿದೆ[೧೦೭] ವೇದಾದಿ ಸಚ್ಛಾಸ್ತ್ರಗಳಲ್ಲಿ ಎಲ್ಲಾದರೂ ಮೇಲ್ನೋಟಕ್ಕೆ ಭಗವಂತನಲ್ಲಿ ದೋಷಗಳನ್ನು ಬೋಧಿಸುತ್ತಿರುವಂತೆ ಕಂಡರೂ ಅವನ್ನು ಗುಣಬೋಧಕಗಳನ್ನಾಗಿ ವ್ಯಾಖ್ಯಾನಿಸಬೇಕೆಂದು ಪ್ರಮಾಣಗಳು ಎಚ್ಚರಿಸಿವೆ.[೧೦೮] ದೋಷಗಳ ವ್ಯವಸ್ಥೆಯೇ ಭಗವದಧೀನವೆಂದ ಮೇಲೆ, ಅಂತಹ ಗುಣವಂತನಲ್ಲಿ ಯಾವದೋಷವಾಗಲಿ ಹೇಗೆ ತಾನೇ ಬಂದೀತು? ಎಂದು ಶ್ರೀಮದಾಚಾರ್ಯರು ಯುಕ್ತಿಪೂರ್ವಕವಾಗಿ ಸಮರ್ಥಿಸಿರುವರು.[೧೦೯] ಹೀಗೆ ದೋಷವಿದೂರ ನಾದಂಥ,[೧೧೦] – **ಶ್ರೀಹರಿಯು.**

**೧೨೬. ಖಳಜನಭೀಷಣ**

**ಖಳಜನ = ದುಷ್ಟಜನರು – ರಾಕ್ಷಸರು**

ಹಿರಣ್ಯಾಕ್ಷ – ಹಿರಣ್ಯಕಶ್ಯಪು; ರಾವಣ – ಕುಂಭಕರ್ಣ; ಶಿಶುಪಾಲ – ದಂತವಕ್ರ; ಬಕ,

---

೧೦೩. ಮಹಾವಿಷ್ಣುಪುರಾಣ – ಗೀತಾತಾತ್ಪರ್ಯ – ೨–೨೦; ಮಹಾವರಾಹ ಪುರಾಣ – ಗೀತಾತಾತ್ಪರ್ಯ ೨–೧೭; ಹಾಗೂ ಅಣುವ್ಯಾಖ್ಯಾನ – ೨–೩–೯
೧೦೪. ಉಪನಿಷತ ಖಂಡಾರ್ಥ
೧೦೫. ಶ್ರೀಮದ್ಭಾಗವತ ೧೦–೨೫–೫
೧೦೬. ಶ್ರೀಮದ್ಭಾಗವತ ೧೧–೩–೩೮
೧೦೭. ಮಹೋಪನಿಷತ್ – ವಿಷ್ಣುತತ್ವವಿನಿರ್ಣಯ
೧೦೮. ಬ್ರಹ್ಮಸೂತ್ರಭಾಷ್ಯ ೨–೧–೩೮)
೧೦೯. ಅಣುವ್ಯಾಖ್ಯಾನ ೨–೧–೧೧೧)
೧೧೦. ಶ್ರೀವಿ.ಸ.ನಾ.ಸ್ತೋತ್ರಕ್ಕೆ – ಉಡುಪಿ ಟೀಕೆ ನಾಮ ೧೦ – "ಪೂತಾತ್ಮಾ" ಇದಕ್ಕೆ ಪುಟ – ೩೯–೪೦.

ಚಕ್ರವಂತ, ಚಾಣೂರ, ಮಾರೀಚ ಮೊದಲಾದ ದುಷ್ಟಸ್ವಭಾವದ ರಾಕ್ಷಸರಿಗೆ ಭಯಂಕರನೆನಿಸಿ, ಅವರನ್ನೆಲ್ಲ ಸದೆಬಡೆದಂಥ – **ಶ್ರೀಹರಿಯು.**

**೧೨೭. ಅಪ್ರಾಕೃತ**

ಶ್ರೀಕೃಷ್ಣ ಪರಮಾತ್ಮನು ಉದ್ಧವನಿಗೆ ಉಪದೇಶಿಸುತ್ತ – **"ಭಗವಂತನು ವಿಶ್ವವನ್ನು ಸೃಜಿಸಿ, ಪಾಲಿಸಿ, ಸಂಹರಿಸುವಂತೆ ತಾನೇ ತನ್ನನ್ನೂ ಸೃಷ್ಟಿಸಿಕೊಳ್ಳುವನು."** ಎಂದು ತಿಳಿಸಿರುವನು.[೧೧೧] ಭಗವಂತನ ಸೃಷ್ಟ್ಯಾದಿಗಳು ಲೋಕದ ಸೃಷ್ಟ್ಯಾದಿಗಳಿಗಿಂತ ವಿಲಕ್ಷಣವಾದವುಗಳು. ಒಂದು ದೀಪದಿಂದ ಇನ್ನೊಂದು ದೀಪವು ಹುಟ್ಟಿಕೊಳ್ಳುವಂತೆ, ಒಂದು ರೂಪದಿಂದ ಮತ್ತೊಂದು ರೂಪದ ಅಭಿವ್ಯಕ್ತಿತ್ವವೇ ಭಗವಂತನ ಸೃಷ್ಟಿ.[೧೧೨] ಈ ಬಗೆಯ ಕ್ರಿಯಾದಿಗಳಿಂದ ಅ ಪ್ರಾಕೃತನಾದಂಥ,[೧೧೨] – **ಶ್ರೀಹರಿಯು.**

**೧೨೮. ಅನುಪಮ**

ಶ್ರೀರಮಾಬ್ರಹ್ಮಾದಿಗಳಿಗೂ ನಿಲುಕದ ಅನಂತ ಮಹಿಮೆಯುಳ್ಳ, ದುಷ್ಟ ಶಿಕ್ಷಕ – ಶಿಷ್ಟ ಪರಿಪಾಲಕನಾದ ಶ್ರೀಹರಿಯು (೧) ಸಮಗ್ರ ಪ್ರಭುತ್ವ (೨) ಸಾಮರ್ಥ್ಯ (೩) ಯಶಸ್ಸು (೪) ಸ್ವರೂಪ ಸೌಂದರ್ಯ (೫) ಜ್ಞಾನ ಹಾಗೂ (೬) ವಿಜ್ಞಾನ; ಈ ಆರು ಗುಣಗಳನ್ನು ಆತ್ಯಂತಿಕವಾಗಿಯೂ ಶಾಶ್ವತವಾಗಿಯೂ ಪಡೆದು, **"ಭಗ"** ಎನಿಸಿಕೊಳ್ಳುವಂಥ.[೧೧೩] ಶ್ರೀಹರಿಯನ್ನು ಸಮಗಟ್ಟುವವರೇ ಇಲ್ಲದಾಗ ಅವನಿಗಿಂತ ಹೆಚ್ಚಿನವರು ಇರುವದೇ ಸಾಧ್ಯವಿಲ್ಲ; ಈತನಿಗೆ ಉಪಮೆ ತೋರಿಸುವಂಥ ಇನ್ನೊಬ್ಬನು ಇಲ್ಲವಾದ್ದರಿಂದ – ಅನುಪಮನಾದಂಥ,[೧೧೪] – **ಶ್ರೀಹರಿಯು.**

**೧೨೯. ಪರಮಪುರುಷ**

ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀಕೃಷ್ಣನು, ತಾನೇ ಪುರುಷೋತ್ತಮನೆಂದೂ, ವೇದೇತಿಹಾಸಗಳಲ್ಲಿ ಪ್ರಸಿದ್ಧನಾಗಿರುವನೆಂದೂ ಹೇಳಿಕೊಂಡಿದ್ದಾನೆ.

"ಪುರುಷರೆಂದು ಕರೆಯಲ್ಪಡುವವರು ಇಬ್ಬರು – ನಶ್ವರದೇಹವುಳ್ಳ ಜೀವರು ಮತ್ತು ನಿತ್ಯವೂ ಅಪ್ರಾಕೃತ ದೇಹವುಳ್ಳ ಶ್ರೀಲಕ್ಷ್ಮೀದೇವಿಯು. ಜೀವರು– ಕ್ಷರ ಪುರುಷರು; ಲಕ್ಷ್ಮೀಯು – ಅಕ್ಷರ ಪುರುಷಳು. ಈ ಉಭಯರಿಂದ ಭಿನ್ನನೂ, ಉತ್ತಮನೂ, ಆದ ಪುರುಷನೇ ಪುರುಷೋತ್ತಮನೆಂದು ಶ್ರುತಿಗಳಲ್ಲಿಯೂ, ಪುರಾಣಾದಿ ಪೌರು–ಷೆಯಾ ಪೌರುಷೇಯ ಗ್ರಂಥಗಳಲ್ಲಿಯೂ ಪ್ರಸಿದ್ಧನಾಗಿರುವನು"[೧೧೫]

ಭಗವಂತನಿಗೆ ಪುರುಷ ಎಂಬ ಮೂರು ಸ್ವರೂಪಗಳಿವೆ. [೧೧೬, ೧೧೭, ೧೧೮]

೧೧೧.ಶ್ರೀಮದ್ಭಾಗವತ ೧೧–೨೮–೬ ೧೧೬.ಶ್ರೀಮದ್ಭಾಗವತ ತಾತ್ಪರ್ಯ ನಿರ್ಣಯ ೧೧–೨೮–೬

೧೧೨.ಶ್ರೀ.ವಿ.ಸ.ನಾಸ್ತೋತ್ರಕ್ಕೆ ಉಡುಪಿ ಟೀಕೆ ನಾಮ ೭ ಭಾವಃ" ಇದಕ್ಕೆ ಪುಟ–೨೫

೧೧೩.ವಿಷ್ಣು ಪುರಾಣ ೬–೫–೭೪)

೧೧೪.ಶ್ರೀ.ವಿ.ಸ.ನಾ.ಸ್ತೋತ್ರಕ್ಕೆ ಉಡುಪಿ ಟೀಕೆ ನಾಮ – ೩ "ವಷಟ್ಕಾರಃ" ಈನಾಮಕ್ಕೆ ಪುಟ – ೧೦.

೧೧೫.ಶ್ರೀಮದ್ಭಗವದ್ಗೀತಾ ಅಧ್ಯಾಯ ೧೫ ಶ್ಲೋಕಗಳು ೧೬,೧೭ ಹಾಗೂ ೧೮

೧೧೬. ಮಹಾತ್ಮ್ಯ – (ಭಾಗವತ ತಾತ್ಪರ್ಯ ನಿರ್ಣಯ ೧೧–೪–೩)

೧೧೭.ಶ್ರೀಜಗನ್ನಾಥದಾಸಾರ್ಯವಿರಚಿತ – "ತತ್ವಸುವ್ವಾಲಿಗೆ" ಟಿಪ್ಪಣಿ ಗ್ರಂಥ ಶ್ರೀಹರಿದಾಸಭಾರತೀಯ ಗ್ರಂಥಮಾಲೆಯ ವಿಜಯಾಂಕ ರತ್ನ –೭" ಪುಟ ೧೫೬

೧೧೮.ವಿ.ಸ.ನಾ.ಸ್ತೋತ್ರಕ್ಕೆ ಉಡುಪಿಟೀಕೆ ನಾಮ ೧೪ "ಪುರುಷಃ" ಕ್ಕೆ ಪುಟ – ೬೧–೬೨; ಮತ್ತು ನಾಮ ೨೪ – ಪುರುಷೋತ್ತಮಃ" ಕ್ಕೆ ಪುಟ – ೮೯–೯೦. ನಾಮ – ೨೦ ಹಾಗೂ ೨೧ "ಸದಾಗಮಜ್ಞೇಯ" "ಆದಿಪುರುಷ" ನೋಡಿರಿ.



(೧) ಮಹತ್ತತ್ವಾದಿಗಳನ್ನು ಸೃಷ್ಟಿಸಿದ ರೂಪ.

(೨) ಸೃಷ್ಟಿಸಿದ ಬ್ರಹ್ಮಾಂಡದೊಳಗೆ ಹೊಕ್ಕರೂಪ

(೩) ಬ್ರಹ್ಮಾಂಡದ ಸಕಲದೇಹಿಗಳ ದೇಹದಲ್ಲಿರುವ ರೂಪ.

**ಇಹದ್ಭಯ, ಕ್ಷಯಕರ ಗುಣತ್ರಯ – ।**
**ರಹಿತ ವೃದ್ಧಿಹ್ರಾಸವರ್ಜಿತ ।**
**ವಿಹಗ ವಿಶ್ವ – ತೈಜಸ – ಪ್ರಾಜ್ಞ, ಅವಸ್ಥಾತ್ರಯದಾತಾ ॥**
**ಅಹಿತನಾಶ ಪರೇಶ ಗಹನಾತ್ – ।**
**ಗಹನ ಅವ್ಯಯ ಅತಿಶಯಾದ್ಭುತ ।**
**ಬಹುಳ, ಜೀವಾಂತರೀಯ ಅಂತರ್ಬಹಿಃ ಸ್ವತಂತ್ರ ನಮೋ ॥ ೯ ॥**

**೧೩೦. ಮಹದ್ಭಯಕ್ಷಯಕರ : ಮಹತ್+ಭಯ+ಕ್ಷಯಕರ**

ಮಹತಾಂ – ಅಂದರೆ ದೊಡ್ಡವರಾದ ರುದ್ರಾದಿಗಳಿಗೆ ಬಂದಂಥ ಸಂಕಟ ನಿವಾರಿಸಿದಂಥ – **ಶ್ರೀಹರಿಯು.**

(೧) ತ್ರಿಪುರಾಸುರ ಸಂಹಾರ ಕಾಲಕ್ಕೆ ರುದ್ರದೇವರು ಕೊಂದಂಥ ಅಸುರರನ್ನು ಮಯ ನಿರ್ಮಿತವಾದ ಅಮೃತ ಕುಂಡದಲ್ಲಿ ದೈತ್ಯರು ಚೆಲ್ಲುತ್ತಿದ್ದರು. ಅದರಿಂದ ಅವರು ಪುನಃ ಸಜೀವರಾಗುತ್ತಿದ್ದರು. ಹೀಗಾಗುವದರಿಂದ ರುದ್ರ ದೇವರಿಗೆ ಉಂಟಾದ ಜಯಾಪಜಯದ ಭಯವನ್ನು ನಿವಾರಿಸಲು ಶ್ರೀಹರಿಯನ್ನು ಪ್ರಾರ್ಥಿಸಲಾಗಿ ಆತನು, ತಾನು ಗೋರೂಪಿಯಾಗಿಯೂ ಬ್ರಹ್ಮನಿಗೆ ಕರುವಿನ ರೂಪಕೊಟ್ಟು ಆ ಅಮೃತಕುಂಡಲ್ಲಿಯ ಎಲ್ಲ ಅಮೃತವನ್ನು ಕುಡಿದು ಬಿಟ್ಟು, ರುದ್ರದೇವರ ಭಯವನ್ನು ಪರಿಹರಿಸಿದನು. ಹಾಗೂ ರುದ್ರದೇವರು ಬಿಟ್ಟ ಬಾಣದಲ್ಲಿಯೂ ತಾನು ಸನ್ನಿಹಿತನಾಗಿ ತ್ರಿಪುರರನ್ನು ಸಂಹರಿಸಲಿಕ್ಕೆ ರುದ್ರದೇವರಿಗೆ ಅನುವು ಮಾಡಿಕೊಟ್ಟಂಥ – **ಶ್ರೀಹರಿಯು.**

(೨) ಶಕುನಿಯ ಮಗನಾದ ವೃಕನೆಂಬ ಅಸುರನು, ನಾರದರಿಂದ ಶಿವನು ಬೇಗ ವರವನ್ನು ಕೊಡುವವನೆಂದು ತಿಳಿದು, ಕೇದಾರಕ್ಕೆ ಹೋಗಿ ದೇಹದ ಮಾಂಸವನ್ನೇ ಆರುದಿನ ಅಗ್ನಿಯಲ್ಲಿ ಹೋಮಿಸಿದನು. ಶಿವನು ಬರಲಿಲ್ಲ. ಆದೈತ್ಯನು ತನ್ನ ಕೊರಳನ್ನು ಕತ್ತರಿಸಲು ಸಿದ್ಧನಾದಾಗ ಶಿವನು ಪ್ರತ್ಯಕ್ಷನಾಗಿ ವರವನ್ನು ಕೇಳೆಂದನು. ವೃಕಾಸುರನು, "ಯಾರತಲೆಮೇಲೆ ನನ್ನ ಹಸ್ತವನ್ನಿಡುವೆನೋ ಅವನು ಆ ಕೂಡಲೆ ಸಾಯಬೇಕು". ಎಂದು ವರವನ್ನು ಕೇಳಿದನು. ಶಿವನು ಆಗಲಿ ಎಂದನು. ಆ ವರವನ್ನು ಪರೀಕ್ಷಿಸಲು ಅಸುರನು ಶಿವನ ತಲೆಯ ಮೇಲೆ ತನ್ನ ಕೈಯಿಡಲು ಬಂದನು. ರುದ್ರನು ಭೀತನಾಗಿ ಎಲ್ಲ ಲೋಕಗಳಿಗೂ ಓಡಿಹೋಗಿ ಕೊನೆಗೆ ವೈಕುಂಠಕ್ಕೆ ಬಂದನು. ಇದನ್ನು ಕಂಡ ನಾರಾಯಣನು ವಟುರೂಪಿಯಾಗಿ ಬಂದು, **"ವೃಕಾಸುರನೇ! ಬಳಲಿರುವೆ. ವಿಶ್ರಾಂತಿಯನ್ನು ಹೊಂದು. ಏಕೆ ಬಂದಿರುವಿ?"** ಎಂದು ಕೇಳಿದನು. ವೃಕನು ನಡೆದ ಸಂಗತಿಯನ್ನು ಹೇಳಿದನು. ವಟುರೂಪೀ ಶ್ರೀಹರಿಯು, **"ಶಿವನ** ಮಾತನ್ನು ನಾನು ಎಷ್ಟು ಮಾತ್ರಕ್ಕೂ ನಂಬಲಾರೆ ಅವನು ಸುಳ್ಳು ಹೇಳುತ್ತಾನೆ ಅವನ

ಮಾತನ್ನು ನಂಬುವುದಾದರೆ, ನಿನ್ನ ತಲೆಯ ಮೇಲೆ ಕೈಯಿಟ್ಟುಕೊಂಡರೆ, ಅವನ ಮಾತು ಸತ್ಯವೋ ಸುಳ್ಳೋ ಎಂಬುದು ನಿಶ್ಚಯವಾಗುವುದು". ಎಂದು ನುಡಿದನು.

ಭಗವಂತನ ಮಾತುಗಳಿಂದ ಮೋಹಿತನಾದ ಆ ವೃಕಾಸುರನು ತನ್ನ ತಲೆಯ ಮೇಲೆ ತನ್ನ ಕೈಯಿಟ್ಟುಕೊಂಡನು. ಕೂಡಲೆ ಅವನ ತಲೆ ಸೀಳಿ ಹೋಗಿ ಸತ್ತು ಬಿದ್ದನು. ಶಿವನು ಶ್ರೀಹರಿಗೆ ವಂದಿಸಿ ಕೈಲಾಸಕ್ಕೆ ತೆರಳಿದನು. ಹೀಗೆ, ಮಹದ್ಭಯಕ್ಷಯಕರನಾದಂಥ,[೧೧೯] – **ಶ್ರೀಹರಿಯು.**

**೧೩೧. ಗುಣತ್ರಯರಹಿತ**

ಸತ್ವ, ರಜ ಹಾಗೂ ತಮೋಗುಣಗಳಿಗೆ ಒಳಪಡಲಾರದ, ಪ್ರಕೃತಿ ನಿಯಾಮಕನಾದ ಭಗವಂತನಲ್ಲಿ ಪ್ರಾಕೃತಿಕ ಸತ್ವ, ರಜ, ತಮೋಗುಣಗಳ ಪ್ರಯುಕ್ತ ಲೋಭಕ್ರೋಧಾದಿ ವಿಕಾರಗಳಿಗೆ ಅವಕಾಶವಿಲ್ಲದಂಥ[೧೨೦] – **ಶ್ರೀಹರಿಯು.**

**ನಾಮ – ೧೨೫ – ಅಶೇಷದೋಷವಿದೂರ ನೋಡಿರಿ.**

**ವೃದ್ಧಿಹ್ರಾಸವರ್ಜಿತ**

**೧೩೨. ವೃದ್ಧಿವರ್ಜಿತ**

**೧೩೩. ಹ್ರಾಸ ವರ್ಜಿತ**

ಕ್ಷರಾಕ್ಷರ ಪುರುಷರಿಗಿಂತ ಉತ್ತಮನಾದ ಭಗವಂತನಿಗೆ ಜನನ ಹಾಗೂ ಮುಪ್ಪುಗಳು ಇರುವುದಿಲ್ಲ. "ಕರ್ಮಾಧ್ಯಕ್ಷನಾದ ಭಗವಂತನ ಮೇಲೆ ಕರ್ಮಯಾವದೇ ರೀತಿಯ ಪ್ರಭಾವವನ್ನು ಬೀರಲಾರದು; ಪುಣ್ಯಕರ್ಮದಿಂದ ವೃದ್ಧಿಯನ್ನಾಗಲೀ, ಪಾಪಕರ್ಮದಿಂದ ಹ್ರಾಸವನ್ನಾಗಲೀ ಹೊಂದಲಾರನು." ಹೀಗೆ ಯಾವಾಗಲೂ ಶಶ್ವದೇಕ ಪ್ರಕಾರದಿಂದ ಇರುವಂಥ,[೧೨೧] –**ಶ್ರೀಹರಿಯು.**

**೧೩೪. ವಿಹಗ**

**ನಾಮ–೯–"ಗರುಡಗಮನ" – ನೋಡಿರಿ**

**ವಿಶ್ವ–ತೈಜಸ–ಪ್ರಾಜ್ಞ–ಅವಸ್ಥಾತ್ರಯದಾತಾ.**

**೧೩೫–ವಿಶ್ವ .**
**೧೩೬–ತೈಜಸ .** } ಅವಸ್ಥಾ ತ್ರಯುಗತಾ
**೧೩೭–ಪ್ರಾಜ್ಞ ಅವಸ್ಥಾತ್ರಯದಾತಾ**

**ಪೂರ್ಣಾನಂದ ಜ್ಞಾನಶಕ್ತಿಸ್ವರೂಪಂ ನಿತ್ಯಮವ್ಯಯಂ ।**
**ಚತುರ್ಧಾ ಸರ್ವಭೋಕ್ತಾಂ ವಂದೇ ವಿಷ್ಣುಂ ಪರಂ ಪದಂ ॥**

– ಮಾಂಡೂಕ್ಯೋಪನಿಷದ್ಭಾಷ್ಯ – ಮಂಗಳಶ್ಲೋಕ

ಓಂಕಾರ ಶಬ್ದ ವಾಚ್ಯನೂ, ಅಕ್ಷರ ನಾಮಕನೂ, ರಮಾಬ್ರಹ್ಮಾದಿನಿಯಾಮಕನೂ ಆದ ಶ್ರೀಹರಿಯು ತನ್ನ ಸ್ವರೂಪಭೂತಗಳಾದ ನಾಲ್ಕು ಅಂಶಗಳುಳ್ಳವನು. ಸರ್ವಜೀವರಿಗೆ

೧೧೯.ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧ – ತೊಂಭತ್ತೆರಡನೇಯ ಅಧ್ಯಾಯ.

೧೨೦. ಶ್ರೀಮದ್ಭಾಗವತ – ೧೦–೨೫–೫

೧೨೧. ಬೃಹದಾರಣ್ಯಕೋಪನಿಷತ್ತು ೬–೪–೨೨. ಮತ್ತು ಶ್ರೀ.ವಿ.ಸ.ನಾಮ.ಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೧೩ "ಅವ್ಯಯಃ" ಇದಕ್ಕೆ ಪುಟ – ೫೩.



ನಿಯಾಮಕನಾಗಿ ಆಯಾ ಜೀವಗಳಲ್ಲಿ ವೈಶ್ವಾನರನಾಗಿ ಬಲಗಣ್ಣಿನಲ್ಲಿ ನಿಂತು ಬಾಹ್ಯಪದಾರ್ಥಗಳ ಜ್ಞಾನವನ್ನುಂಟು ಮಾಡುವನು. ಜೀವರ ಬಲಗಣ್ಣಿನಲ್ಲಿ ನಿಂತು, ಕೊಟ್ಟು–ತೆಗೆದುಕೊಳ್ಳುವ ವ್ಯಾಪಾರ ಮಾಡುವನು. ಇವನೇ –**ವಿಶ್ವ**– ನಾಮಕನಾಗಿ ಜೀವರ ಜಾಗ್ರತಾವಸ್ಥಾ ಪ್ರೇರಕನು.

**"ತೈಜಸ"** ವೆಂಬ ಭಗವದ್ರೂಪವು ಬಾಹ್ಯ ಪದಾರ್ಥ ಜ್ಞಾನದಿಂದುಂಟಾಗುವ ಮತ್ತು ಆ ವಾಸನೆಯಿಂದ ಪರಿಣಾಮವಾಗುವ, ಪರಿಣಮಿಸುವ ಪದಾರ್ಥಗಳ ಅನುಭವವನ್ನು ತಂದುಕೊಟ್ಟು ಸ್ವಪ್ನಾವಸ್ಥೆಗೆ ಪ್ರೇರಕನಾಗಿ ಕಂಠ ಪ್ರವೇಶದಲ್ಲಿರುವನು. ವಿಶ್ವನಾಮಕನು ಬಾಹ್ಯಪ್ರಜ್ಞನಾದರೆ ತೈಜಸನು ಅಂತಃಪ್ರಜ್ಞನು.

"ಪ್ರಾಜ್ಞ" ನಾಮಕ ಭಗವದ್ರೂಪವು 'ಸುಷುಪ್ತಾವಸ್ಥೆ (ನಿದ್ರೆಗೆ) ಪ್ರೇರಕವಾಗಿರುತ್ತದೆ ಈ ಅವಸ್ಥೆಯಲ್ಲಿ ಜೀವನು ಸುಖರೂಪಿಯಾದ ಪರಮಾತ್ಮನನ್ನು ಹೊಂದಿ ಬೇರೆ ಯಾವುದನು ಅಪೇಕ್ಷಿಸುವದಿಲ್ಲ; ಕಾಮಿಸುವದಿಲ್ಲ. ಈ ಕಾಲದಲ್ಲಿ ವಿಶ್ವ, ತೈಜಸ ಭಗವದ್ರೂಪಗಳು ಪ್ರಾಜ್ಞನಲ್ಲಿ ಏಕೀಭಾವವನ್ನು ಹೊಂದಿರುತ್ತವೆ. ಪ್ರಾಜ್ಞನಿಗೆ – "ಪ್ರಜ್ಞಾನಘ" ನೆಂದು ಹೆಸರು. ಇವನು ಪೂರ್ಣಾನಂದ ಸ್ವರೂಪಿಯು.

ಮೇಲೆ ನಿರೂಪಿಸಿದ ಭಗವದ್ರೂಪಗಳುಳ್ಳ ಶ್ರೀಹರಿಯು ಸಕಲ ಜಗನ್ನಿಯಾಮಕನು, ಸರ್ವಸ್ವಾಮಿಯು, ಸರ್ವಜ್ಞ ಶಿಖಾಮಣಿಯಾಗಿ ಸಕಲವನ್ನು ತಿಳಿಯುವನು. ಸಕಲ ಜೀವರಾಶಿಯ ಹುಟ್ಟು ಸಾವುಗಳಿಗೆ ಕಾರಣನು; ಇವುಗಳಲ್ಲದೆ, "ತುರೀಯ" ವೆಂಬ ಭಗವದ್ರೂಪಉಂಟು. ಅವನು ಅಂತಃಪ್ರಜ್ಞನೂ ಅಲ್ಲ; ಬಾಹ್ಯಪ್ರಜ್ಞನೂ ಅಲ್ಲ; ಪ್ರಜ್ಞಾನಘನೂ ಅಲ್ಲ; ಆದರೆ ಅವನು ಮುಕ್ತರಿಗೆ ಸ್ವಯೋಗ್ಯವಾದ ಜ್ಞಾನವನ್ನು ಕೊಡುತ್ತಾನೆ. ನಾನು ನನ್ನದೆಂಬ ಮಮತೆಯನ್ನು ನಾಶಪಡಿಸುವನು. (ಅಹಂ ಮಮತಾದಿ ಮಿಥ್ಯಾಧ್ಯವಸಾಯಿ ನಿವರ್ತಕಂ) ಇಂತಹ ಮಹಿಮೋಪೇತನೇ ತುರೀಯನು.

**ಏಕೋಪಿ ನಿರ್ವಿಶೇಷೋಽಪಿ ಚತುರ್ಧಾವ್ಯವಹಾರಭಾಕ್ ।**
**ಯಸ್ತಂ ವಂದೇ ಚಿದಾತ್ಮಾನಂ ವಿಷ್ಣುಂ ವಿಶ್ವಾದಿರೂಪಿಣಂ ॥**

– ಮಾಂಡೂಕ್ಯೋನಿಷದ್ಭಾಷ್ಯ – ಅಂತ್ಯಮಂಗಳಶ್ಲೋಕ.

ಶ್ರೀಹರಿಯು ತನ್ನ ಅವತಾರ, ಮೂಲರೂಪಗಳಲ್ಲಿ, ಗುಣ ಕ್ರಿಯೆಗಳಿಗೆ ಭೇದವಿಲ್ಲದೆ, ಸ್ವಗತ ಭೇದವಿವರ್ಜಿತನಾಗಿದ್ದರೂ, ಪ್ರಾಕೃತ ವಿಷಯ ರಹಿತನಾಗಿದ್ದರೂ, ವಿಶ್ವ, ತೈಜಸ, ಪ್ರಾಜ್ಞ, ತುರೀಯಗಳೆಂಬ ನಾಲ್ಕು ರೂಪಗಳಿಂದ ಜಗಚ್ಚೇಷ್ಟಕನಾಗಿ ವ್ಯವಹಾರವನ್ನು ಹೊಂದಿರುತ್ತಾನೆ. ಇಂತಹ ಮಹಿಮೋಪೇತ ವಿಶ್ವಾದಿ ರೂಪಗಳುಳ್ಳ ಜ್ಞಾನಾನಂದಾದಿ ಸದ್ಗುಣಭರಿತನೂ ಸರ್ವತ್ರ ವ್ಯಾಪ್ತನೂ ಆದ,[೧೨೨]– **ಶ್ರೀಹರಿಯು.**

**೧೩೮. ಅಹಿತನಾಶ**

ತನ್ನ ಜ್ಞಾನಾಸಕ್ತರಾದ ಸುಜೀವಿಗಳಿಗೆ ಅವರವರ ಪ್ರಾರಬ್ಧ ಕರ್ಮಗಳಿಂದ ಬರತಕ್ಕ ದುರಿತಗಳನ್ನು ಹೋಗಲಾಡಿಸುವಂಥ – **ಶ್ರೀಹರಿಯು.**

೧೨೨. ಶ್ರೀಹರಿವಿಠಲಪ್ರಕಾಶನದ – ಶ್ರೀ –ಮು.ಶ್ರೀ.ಗುಂಡುರಾವಕೃತ "ಶ್ರೀಮನ್ಮಧ್ವಮತ ತತ್ವ ಸುಧಾ" ಪುಟ ೫೫ ಹಾಗೂ ೫೬

**೧೩೯. ಪರೇಶ**

ಪರಾಃ ಅಂದರೆ ರಮಾಬ್ರಹ್ಮಾದಿಗಳಿಗೂ ಈಶ ಅಂದರೆ ಒಡೆಯನಾದಂಥ – ಶ್ರೀಹರಿಯು.

**೧೪೦. ಗಹನಾತ್ ಗಹನ**

ಆತ್ಮಾಚ್ಛಾದಿಕಾ ಹಾಗೂ ಪರಮಾಚ್ಛಾದಿಕೆಗಳಿಂದ ತನ್ನ ಗುಣ, ರೂಪ, ಕ್ರಿಯೆಗಳನ್ನು ತಿಳಿಯಗೊಡನಾದ್ದರಿಂದಲೂ, ತನ್ನ ಜ್ಞಾನವನ್ನು ತಿಳಿಯಲುಬಹು ಕಷ್ಟತರನಾದ್ದರಿಂದ ಗಹನಾತ್ಗಹನನಾದಂಥ – **ಶ್ರೀಹರಿಯು**.

**೧೪೧. ಅವ್ಯಯ**

ಚೇತನರಲ್ಲಿ ಜನನ ಮರಣಾದಿ ವಿಕಾರಗಳನ್ನು ಉಂಟು ಮಾಡುವುದು ಪುಣ್ಯಪಾಪಾತ್ಮಕ ವಾದ ಕರ್ಮಗಳು. ಕರ್ಮಾಧ್ಯಕ್ಷನಾದ ಭಗವಂತನ ಮೇಲೆ ಕರ್ಮ ಯಾವದೇ ರೀತಿಯ ಪ್ರಭಾವವನ್ನು ಬೀರಲಾರದು. ಪುಣ್ಯಕರ್ಮದಿಂದ ಅವನು ವೃದ್ಧಿಯನ್ನಾಗಲೀ ಪಾಪಕರ್ಮದಿಂದ ಹ್ರಾಸವನ್ನಾಗಲೀ ಹೊಂದಲಾರನು[೧೨೩]. (ನಾಮ೧೩೨&೧೩೩ ವೃದ್ಧಿ –ಹ್ರಾಸ–ವರ್ಜಿತ ನೋಡಿರಿ) ಆದ್ದರಿಂದ ಅವನು ಸಹಜವಾಗಿ ನಿರ್ವಿಕಾರಿ ಎಂಬುದು ಸಿದ್ಧವಾಗುವುದು[೧೨೪]. ಈ ಅಭಿಪ್ರಾಯದಿಂದಲೇ ಬೃಹದಾರಣ್ಯಕೋಪನಿಷತ್ತು ಕರ್ಮದಿಂದ ಅವನು ವೃದ್ಧಿಹ್ರಾಸ ಗೊಳಗಾಗುವದಿಲ್ಲವೆಂದು ಋಙ್ಮಂತ್ರದ ಸಂವಾದ ಸಹಿತವಾಗಿ ಸಂದೇಶಿಸಿದೆ[೧೨೫].

ಇತರ ಚೇತನರು ತಮ್ಮ ತಮ್ಮ ಕರ್ಮಾನುಸಾರವಾಗಿ ಪಂಚಭೌತಿಕ ಶರೀರವನ್ನು ಪಡೆದು ಆಮೂಲಕ ಜನ್ಮ,ವೃದ್ಧಿ, ಕ್ಷಯ, ಮರಣ, ಹಸಿವು, ನೀರಡಿಕೆ, ಬಳಲಿಕೆ,ಮೂರ್ಛೆ, ಶೋಕ, ಮೋಹ ಮೊದಲಾದ ವಿಕಾರಗಳಿಗೆ ಒಳಗಾಗುವರು. ಭಗವಂತನಾದರೋ ಯಾವಾಗಲೂ ಸ್ವರೂಪಾತ್ಮಕ ದೇಹವನ್ನೇ ಹೊಂದಿರುವ ಕಾರಣ ದೇಹ ಪ್ರಯುಕ್ತವಾಗಿ ಯಾವದೇ ವಿಕಾರವನ್ನು ಹೊಂದಲಾರ[೧೨೬].

ಜೀವಾತ್ಮರು ದೇಹದಲ್ಲಿದ್ದುಕೊಂಡು ಜನ್ಮಾದಿ ವಿಕಾರಗಳಿಗೊಳಗಾಗುವಾಗ, ಭಗವಂತನು ಆ ಶರೀರದಲ್ಲೇ ಇರುವನಾದರೂ ಅವನು ಆ ಶರೀರ ಪ್ರಯುಕ್ತವಾಗಿ ಜನ್ಮಾದಿ ವಿಕಾರಗಳನ್ನು ಹೊಂದಲಾರ[೧೨೭]. ಪ್ರಕೃತಿ ನಿಯಾಮಕನಾದ ಅವನಲ್ಲಿ ಪ್ರಾಕೃತಿಕ ಸತ್ವ, ರಜ, ತಮೋ ಗುಣ ಪ್ರಯುಕ್ತ ಲೋಭಕ್ರೋಧಾದಿ ವಿಕಾರಗಳಿಗೂ ಅವಕಾಶವಿಲ್ಲ[೧೨೮]. ಅವನ ಪ್ರತಿಯೊಂದು ಗುಣವೂ ಪ್ರತಿಯೊಂದು ಕ್ರಿಯೆಯೂ ಅವನ ಸ್ವರೂಪಾತ್ಮಕವಾದುದೇ ಆಗಿದ್ದು ನಿತ್ಯವೆನಿಸಿದೆ. ಆದ್ದರಿಂದ ಅವುಗಳ ಉತ್ಪತ್ತಿನಾಶಗಳಿಂದಾಗಿಯೂ ಅವನಲ್ಲಿ ವಿಕಾರ ಉಂಟಾಗದು[೧೨೯]. ಭಗವಂತನೊಬ್ಬನೇ ಯಾವದೇ ವಿಕಾರಕ್ಕೆ ಒಳಗಾಗದವನು[೧೩೦]. ಲೋಕತ್ರಯವನ್ನು ಪ್ರವೇಶಿಸಿ, ಅದರ ಧಾರಣೆ,

---

೧೨೩. ಬೃಹದಾರಣ್ಯಕೋಪನಿಷತ್ತು ೬–೪–೨೨ ೧೨೪. ಗೀತಾಭಾಷ್ಯ ೧೧–೩೨

೧೨೫. ಬ್ರಹದಾರಣ್ಯಕೋಪನಿಷದ್ಭಾಷ್ಯ ೬–೪–೨೩

೧೨೬. ಮಧ್ಯಂದಿನಶ್ರುತಿ – ಭಾಗವತ – ತಾತ್ಪರ್ಯನಿರ್ಣಯ; ೧೦–೭೫–೪೯; ಭಾಗವತ ೧೧–೩–೩೯ ಹಾಗೂ ಛಾಂದೋಗ್ಯೋಪನಿಷತ್ತು ೮–೧–೨

೧೨೭. ಶ್ರೀಮದ್ಭಾಗವತ ೭–೭–೧೮; ಹಾಗೂ ಭಗವತ ತಾತ್ಪರ್ಯ ನಿರ್ಣಯ

೧೨೮. ಶ್ರಿಮದ್ಭಾಗವತ ೧೦–೨೫–೫ ೧೨೯ ಅಥರ್ವಣೋಪನಿಷದ್ಭಾಷ್ಯ ೧–೩–೧೦

೧೩೦. ಬ್ರಹ್ಮಸೂತ್ರ ೨–೩–೭; ಹಾಗೂ ಬ್ರಹತ್ಸಹಿತಾ – ಬ್ರಹ್ಮಸೂತ್ರಭಾಷ್ಯ



ಪೋಷಣೆ ನಡೆಸುವ ಭಗವಂತನಿಗೆ ಆ ಪ್ರಯುಕ್ತ ಯಾವದೇ ವಿಕಾರವಿಲ್ಲವೆಂದು, "ಅವ್ಯಯ"ವೆಂಬ ವಿಶೇಷಣವನ್ನು ಗೀತಾಚಾರ್ಯನು ನೀಡಿರುವನು[೧೩೦ಅ]. ಭಗವಂತನು ಸ್ವರೂಪಾತ್ಮಕವಾದ ದೇಹಹೊಂದಿರುವದರಿಂದ ಸ್ವರೂಪತಃ ನಿತ್ಯನಿದ್ದು, ದೈಹಿಕವಾಗಿಯೂ ಅವನಿಗೆ ನಾಕವಿಲ್ಲ[೧೩೧]. ವರುಣ ನಾಮಕ ಭಗವಂತನು ತನ್ನ ಆದೇಶಾನುಸಾರವಾಗಿ ಯಾವಾಗಲೂ ಸಂಚರಿಸಲು ಸೂರ್ಯನಿಗೆ ಆಕಾಶದಲ್ಲಿ ಉತ್ತಮವಾದ ಮಾರ್ಗವನ್ನು ರಚಿಸಿಕೊಟ್ಟನೆಂದು ಋಗ್ವೇದ ಸಂದೇಶಿಸಿದೆ[೧೩೨].

**೧೪೨. ಅತಿಶಯಾದ್ಭುತ**

ಶ್ರೀಹರಿಯ ಗುಣ, ರೂಪ, ಕ್ರಿಯೆಗಳು ಧ್ಯಾನ ವಿಷಯಗಳು. ಕೇವಲ ರೂಪ ಚಿಂತನೆಯಿಂದ ಧ್ಯಾನ ಫಲವಿಲ್ಲ. ಶ್ರವಣ, ಮನನ, ಧ್ಯಾನಗಳೆಂಬ ಸಾಧನೆಗಳಲ್ಲಿ, ಧ್ಯಾನವು ಗುಣಕ್ರಿಯೆಗಳ ಸಹಿತವಾದ ಭಗವದ್ರೂಪ ಚಿಂತನವಾಗಿರುವುದು. ಗುಣಗಳು ಸತ್, ಚಿತ್, ಆನಂದ, ಆತ್ಮ ಇತ್ಯಾದಿಗಳು; ಸೃಷ್ಟಿ, ಸ್ಥಿತಿ, ಲಯ, ನಿಯಮನ ಮೊದಲಾದ ವಿಶ್ವಸಂಬಂಧವುಳ್ಳ ಅಷ್ಟವಿಧ ಭಗವದ್ವ್ಯಾಪಾರಗಳು, ಮತ್ತು ನಾನಾ ಅವತಾರಗಳಲ್ಲಿ ಪ್ರಕಟವಾಗುವ ಅದ್ಭುತ ಮಹಿಮಾದ್ಯೋತಕ ಕ್ರಿಯೆಗಳಿಂದ ಅತಿಶಯಾದ್ಭುತ – ಮಹಿಮೆಯುಳ್ಳಂಥ,[೧೩೩] – **ಶ್ರೀ ಹರಿಯು**.

**೧೪೩. ಬಹುಳಜೀವಾಂತರೀಯ**

ಎಲ್ಲವನ್ನೂ ಸೃಷ್ಟಿಸಿದ ಭಗವಂತನು ಸೃಷ್ಟಿಯ ಮರುಕ್ಷಣದಲ್ಲಿಯೇ ಎಲ್ಲ ಪದಾರ್ಥಗಳಲ್ಲಿಯೂ ಪ್ರೇರಕವಾಗಿ ಪ್ರವೇಶಿಸಿದನೆಂದು – **ತೈತ್ತಿರಿಯೋಪನಿಷತ್ತು** ಪ್ರತಿಪಾದಿಸಿದೆ. ಭಗವಂತನು ಸಸ್ಯಗಳನ್ನು ಮನುಷ್ಯರನ್ನೂ ಪಶುಗಳನ್ನು, ಉಳಿದ ಚರಾಚರಭೂತಗಳನ್ನು ಪ್ರವೇಶಿಸಿರುವನೆಂದು – ಮಹಾನಾರಾಯಣೋಪನಿಷತ್ತು ತಿಳಿಸಿದೆ. ಹೀಗೆ ಎಲ್ಲದರಲ್ಲೂ ಒಳಹೊಕ್ಕು ಬಹುಳ ಜೀವಾಂತರೀಯನಾದಂಥ – **ಶ್ರೀಹರಿಯು**.

**ಅಂತರ್ಬಹಿಃಸ್ವತಂತ್ರ**

**೧೪೪. ಅಂತರ್ ಸ್ವತಂತ್ರ;** **೧೪೫. ಬಹಿಃ ಸ್ವತಂತ್ರ**

ಭಗವಂತನು "**ಕ್ಷೇತ್ರಜ್ಞ**" ಎಂಬ ಹೆಸರಿನಿಂದ ಜೀವಾತ್ಮರ ಸ್ವರೂಪದಲ್ಲೇ ಇರುವನು.[೧೩೪] ಅಲ್ಲದೆ "ಪುರುಷ" ನಾಮಕನಾಗಿ ಜೀವನ ಜೊತೆಗೆ ಶರೀರದಲ್ಲೂ ಇರುವನು.[೧೩೫]

---

೧೩೦ಅ. ಶ್ರೀಮದ್ಭಗವದ್ಗೀತಾ ೧೫, ೧೭

೧೩೧. ವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ವಿದ್ಯಾಧಿರಾಜೀಯಟೀಕೆ

೧೩೨. ಋಗ್ವೇದ ೨೪–೮; ಹಾಗೂ ಭಾಷ್ಯ; ವಿಷ್ಣುಸಹಸ್ರನಾಮಸ್ತೋತ್ರಕ್ಕೆ – ಸತ್ಸಂಧರಬೇಕೆವಿ.ವಿ. ಶ್ರೀ.ವಿ.ಸ.ನಾ. ಸ್ತೋತ್ರಕ್ಕೆ ಉಡುಪಿಟೀಕೆ, ನಾಮಣ – ಅವ್ಯಯಃ"ಕ್ಕೆ ಪುಟಗಳು–೫೩,೫೪ ಹಾಗೂ ೫೫.

೧೩೩. ಶ್ರೀಜಗನ್ನಾಥದಾಸಾರ್ಯವಿರಚಿತ – "ಸುವ್ವಿಸುವ್ವಾಲಿ"ಗೆ ಬೇಕಾಗ್ರಂಥ – ಶ್ರೀಹರಿದಾಸಭಾರತಿಯ_" "ವಿಜಯಾಂಕರತ್ನ"ದ ಪುಟ–೪೩.

೧೩೪. ತತ್ವನಿರ್ಣಯ – ಭಾಗವತ – ತಾತ್ಪರ್ಯನಿರ್ಣಯ – ೭–೭–೧೨

೧೩೫. ಶ್ರೀಮದ್ಭಾಗವತ ೭–೧೪–೩೮ ಮತ್ತು ಶ್ರೀ.ವಿ.ಸ.ನಾ.ಸ್ತೋತ್ರಕ್ಕೆ ಉಡುಪಿಟೀಕೆ "ಭಾವನಃ" ನಾಮ ೩೭ಕ್ಕೆ ಪುಟ ೧೧೫.

ಸರ್ವಪ್ರಾಣಿಗಳಿಗೂ ಒಳಗಿದ್ದು ಜ್ಞಾನಕೊಡುವ ಭಗದ್ರೂಪ "ಪುರುಷ" ಎನಿಸಿದರೆ, ಜ್ಞಾನಾದಿಗಳಿಗೆ ಫಲನೀಡುವ ಹೊರಗಿನ ಭಗವದ್ರೂಪ, "ಈಶ್ವರ" ಎನಿಸಿದೆ.[೧೩೬]

ಸ್ವಾತಂತ್ರ್ಯವು ಭಗವಂತನ ಅಸಾಧಾರಣ ಗುಣವಾಗಿದೆ – ತತ್ವಸಂಖ್ಯಾನ.[೧೩೭]

"ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ ।– ಪುರುಷ ಸೂಕ್ತ. ಹೀಗೆ ಅಂತರ್ಬಹಿಃ ಸ್ವತಂತ್ರನಾದಂಥ – **ಶ್ರೀಹರಿಯು.**

**ಪೂರ್ಣಕಾಮಾಂಬೋಧಿ ಶ್ರೀವಟ – ।**
**ಪರ್ಣತಲ್ಪ ಪರಾತ್ಪರಾ ಪ್ರತಿ – ।**
**ವರ್ಣ, ನಿಗಮಾಗಮ ಅತರ್ಕ್ಯಾನಂತ ಸದ್ಗುಣನಿಧೆ ॥**
**ನಿರ್ಣಯಾತೀತಾನಿರುದ್ಧ ಸು – ।**
**ಖಾರ್ಣವಾಚ್ಯುತ ಸೌಖ್ಯಾಕರ ನವ – ।**
**ತೀರ್ಣವಿಗ್ರಹ ಪದ್ಮನಾಭ ಉದಾರಲೀಲ ನಮೋ** ॥ ೧೦ ॥

**೧೪೬. ಪೂರ್ಣಕಾಮಾಂಬೋದಿ**

ಎಲ್ಲ + ಇಚ್ಛೆ + ಸಮುದ್ರ

ಪೂರ್ಣ + ಕಾಮ + ಅಂಬೋಧಿ (ಅಂಬುಧಿ)

ತನ್ನ ಎಲ್ಲ ಇಚ್ಛೆಗಳನ್ನು ಪೂರೈಸಿಕೊಳ್ಳುವದರಲ್ಲಿ ಸಮುದ್ರದಂತೆ ವಿಶಾಲನಾದಂಥ – **ಶ್ರೀಹರಿಯು.**

**೧೪೭. ಶ್ರೀವಟಪರ್ಣತಲ್ಪ**

ಪ್ರಳಯಕಾಲದಲ್ಲಿ ಶ್ರೀಹರಿಯು ವಟಪತ್ರದಲ್ಲಿ ಪವಡಿಸಿದನೆಂಬುದು "ಶ್ರುತಿ" ಪ್ರಸಿದ್ಧವು. ಆ ವಟಪತ್ರವು ಅಂದರೆ ಶ್ರೀ ದುರ್ಗಾರೂಪೀ ಲಕ್ಷ್ಮೀದೇವಿಯೇ ಶ್ರೀಹರಿಗೆ ಹಾಸಿಗೆಯಾಗಿ ಒಂದು ರೂಪತಾಳಿರುವಳು. ಹೀಗೆ ನಿತ್ಯ ಮುಕ್ತಳೂ, ಅಪ್ರಾಕೃತ ಸ್ವರೂಪಳೂ, ಸದ್ಗುಣ ಪರಿಪೂರ್ಣಳೂ ಹಾಗೂ ಸರ್ವಜ್ಞಳೂ ಆದ ಶ್ರೀದೇವಿಯ ಒಂದು ರೂಪವಾದ ಆಲದ ಎಲೆಯ ಮೇಲೆ ಪ್ರಳಯ ಕಾಲದಲ್ಲಿ ಮಲಗಿದಂಥ,[೧೩೮] – **ಶ್ರೀಹರಿಯು.**

**೧೪೮. ಪರಾತ್ಪರಾ**

ಪಾಂಡವರು ವನವಾಸದಲ್ಲಿದ್ದಾಗ ಧರ್ಮರಾಜನಿಗೂ ಭೀಮಸೇನನಿಗೂ ವಾದವಿವಾದದಲ್ಲಿ – ಜೀವಸ್ವಭಾವವೆಂಬುದೇ ಯೋಗ್ಯತೆಯು; ಅದು "ಹಠ" ಎಂದೂ ಕರೆಯಲ್ಪಡುತ್ತದೆ ಈ

೧೩೬. ಮತ್ಸಪುರಾಣ – ಭಾಗವತ ತಾತ್ಪರ್ಯನಿರ್ಣಯ ೧೧–೨೨–೧೧ ಮತ್ತು ಶ್ರೀವಿ.ಸ.ಸ್ತೋತ್ರಕ್ಕೆ ಉಡುಪಿಬೇಕೆ – "ಈಶ್ವರಃ" ನಾಮ ೩೬ಕ್ಕೆ ಪುಟ – ೧೨೫.

೧೩೭. ಶ್ರೀ.ವಿ.ಸ.ನಾ. ಸ್ತೋತ್ರಕ್ಕೆ ಉಡುಪಿ ಟೀಕೆ – "ಸ್ವಯಂಭೂಃ" ನಾಮ ೩೨ಕ್ಕೆ ಪುಟ ೧೨೭

೧೩೮. (೧) ಶ್ರೀ ಜಗನ್ನಾಥದಾಸಾರ್ಯವಿರಚಿತ – "ಸುವಿಸುವ್ವಾಲಿ"ಗೆ ಟಿಪ್ಪಣಿ ಗ್ರಂಥ – ಶ್ರೀಹರಿದಾಸಭಾರತಿಯ – "ವಿಜಯಾಂಕ ರತ್ನ ೨" ರ ಪುಟ –೧೦೦ ಹಾಗೂ ೧೦೧. ಹಾಗೂ ಶ್ರೀ.ವಿ.ಸ.ನಾ. ಸ್ತೋತ್ರಕ್ಕೆ – ಸತ್ಯಸಂಧರಟೀಕೆ "ಸುಪರ್ಣಃ" ನಾಮ ೮೫ಕ್ಕೆ ಪುಟ – ೯೯.



ಯೋಗ್ಯತೆ ಅಥವಾ ಹಠವು ಸರ್ವಜೀವರಲ್ಲಿ ಅನಾದಿ ಸಿದ್ದಿಯಾಗಿರುವುದು' ಅದುನಿತ್ಯವೂ ಆಗಿದೆ ಜೀವರ ನಾನಾವಿಧ ಕರ್ಮಪ್ರವೃತ್ತಿಗೆ ಇದು ಮೊದಲನೇ ಕಾರಣ; ಅನಾದಿ ಕರ್ಮವು ಎರಡನೇಯ ಕಾರಣ; "ಪೌರುಷ" ವೆಂದು ಕರೆಯಲ್ಪಡುವ ಜೀವ ಪ್ರಯತ್ನವು ಮೂರನೇಯ ಕಾರಣ; ಈ ಮೂರೂ ಸರ್ವದಾ ಶ್ರೀವಿಷ್ಣುವಶದಲ್ಲಿವೆ ವಿಷ್ಣು ಮಾತ್ರ ಯಾರ ವಶನೂ ಅಲ್ಲ; ಅವನು ಪರಾತ್ಪರನೂ, ಸರ್ವೋತ್ತಮನೂ, ಸ್ವತಂತ್ರನೂ ಆಗಿರುತ್ತಾನೆ. ಇಂಥ ಪರಾತ್ಪರನಾದಂಥ,[೧೩೯] – **ಶ್ರೀಹರಿಯು**

**ಪ್ರತಿವರ್ಣನಿಗಮಾಗಮ ಅತರ್ಕ್ಯ**

**೧೪೯. ಪ್ರತಿವರ್ಣನಿಗಮ; ೧೫೦ ಆಗಮ; ೧೫೧. ಅತರ್ಕ್ಯ**

ಪ್ರತಿಯೊಂದು ವರ್ಣಗಳು ಮತ್ತು ನಿಗಮ ಹಾಗೂ ಆಗಮಗಳಿಂದ ಊಹಿಸಲು ಅಶಕ್ಯನಾದಂಥ – **ಶ್ರೀ ಹರಿಯು.**

**೧೫೨. ಅನಂತ ಸದ್ಗುಣನಿಧೆ**

ಅನಂತ ಅಂದರೆ ಎಣಿಕೆ ಇಲ್ಲದಷ್ಟು ಸದ್ಗುಣ – ಒಳ್ಳೇ ಗುಣಗಳನ್ನು ಹೊಂದಿದಂಥ – **ಶ್ರೀ ಹರಿಯು.**

**೧೫೩. ನಿರ್ಣಯಾತೀತ**

ತನ್ನ ರೂಪ, ಕ್ರಿಯೆ, ಹಾಗೂ ಗುಣಗಳ ಬಗ್ಗೆ ಯಾರಿಂದಲೂ, ಯಾವ ಕಾಲಕ್ಕೂ ಯಾವ ರೀತಿಯಿಂದಲೂ ನಿರ್ಣಯ ತೆಗೆದುಕೊಳ್ಳಲು ಬಾರದಂಥವನಾದ – **ಶ್ರೀಹರಿಯು.**

**೧೫೪. ಅನಿರುದ್ಧ**

(೧) ಜಗತ್ಸೃಷ್ಟಿಯೇ ಮೊದಲಾದ ತನ್ನ ಚಟುವಟಿಕೆಗಳನ್ನು ನಿರ್ವಹಿಸುವಲ್ಲಿ ಯಾರಿಂದಲೂ ತಡೆಯಲ್ಪಡದವನು.

(೨) ಯಾವದೇ ದೋಷದಿಂದ ಪ್ರತಿಬಂಧಿಸಲ್ಪಡದೆ ಇರುವವನು.

(೩) ನಿತ್ಯವೂ ಸರ್ವಗುಣಗಳಿಂದ ಪರಿಪೂರ್ಣನಾಗಿರುವ ಭಗವಂತನು ಅಶೇಷ ದೋಷಗಳಿಂದಲೂ ದೂರನಾಗಿರುವನು – ದ್ವಾದಶಸ್ತೋತ್ರ.

(೪) ಭಗವಂತನ ಅನಿರುದ್ಧ ನಾಮಕ ರೂಪವು ಜೀವ ಎಂದೆನಿಸಿ, ಜೀವಾತ್ಮರ ಪ್ರಾಣಧಾರಣೆಯನ್ನು ನಡೆಸುವುದು.[೧೪೦]

(೫) ಜೀವಾತ್ಮರಪಾಲನೆಯನ್ನು ಭಗವಂತನು ತನ್ನ ಅನಿರುದ್ಧರೂಪದಿಂದಲೇ ನಡೆಸುವನು.[೧೪೧]

೧೩೯. ಶ್ರೀಮದಾನಂದತೀರ್ಥರ – ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಧರ್ಮ – ಭೀಮರ ಸಂವಾದ ಹಾಗೂ ಶ್ರೀಜಗನ್ನಾಥದಾಸಾರ್ಯ ವಿರಚಿತ – "ಸುವ್ವಿಸುವ್ವಾಲಿಗೆ" ಬೇಕಾ ಗ್ರಂಥ ಶ್ರೀಹರಿದಾಸಭಾರತಿಯ – "ವಿಜಯಾಂಕ ರತ್ನ ೨"ರ ಪುಟ ೧೫೩.

೧೪೦. ಛಾಂದೋಗ್ಯೋಪನಿಷದ್ಭಾಷ್ಯ ೬–೨–೨

೧೪೧. ಮಹಾಭಾರತ ತಾತ್ಪರ್ಯನಿರ್ಣಯ ೧–೮

(೬) ಶ್ರೀವಿಷ್ಣುವು ಮೂರು ವೇದಗಳನ್ನು, ಮೂರು ಕಾಲಗಳನ್ನು, ಸತ್ವಾದಿ ಮೂರು ಗುಣಗಳನ್ನು, ಮೂರು ಲೋಕಗಳನ್ನು, ಮೂರು ವಿಧದ ಜೀವರನ್ನು ಹಾಗೂ ಚೇತನ, ಅಚೇತನ ಮತ್ತು ಚೇತನಾಚೇತನಗಳ ಮೂರನ್ನೂ ರಕ್ಷಕನಾಗಿ, ಸೃಷ್ಟಾರನಾಗಿ, ಸಂಹಾರಕನಾಗಿ, ಮೋಚಕನಾಗಿ, ಅತಿಕ್ರಮಿಸುವನೆಂದು ಹೇಳುಹೊರಟ ವಿಷ್ಣುಸೂಕ್ತವು – ಶ್ರೀವಿಷ್ಣುವು ಯಾರಿಂದಲೂ ತಡೆಯಲ್ಪಡದವನೆಂಬುದಾಗಿ ಪ್ರಾರಂಭದಲ್ಲಿಯೇ ಉಲ್ಲೇಖಿಸಿದೆ.[೧೪೨]

**೧೫೫. ಸುಖಾರ್ಣವಾಚ್ಯುತಿ – ಸುಖ + ಅರ್ಣವ = ಕಾಡು + ಅಚ್ಯುತ**

ತನ್ನ ಭಕ್ತರ ಸುಖವೆಂಬ ಕಾಡು ಬೆಳೆಯಲಿಕ್ಕೆ ಚ್ಯುತಿತರದಂಥವ ಅಂದರೆ ತನ್ನ ಭಕ್ತರ ಸುಖಕ್ಕೆ ಯಾವ ತೊಂದರೆಯೂ ಬರದಂತೆ ನೋಡಿಕೊಳ್ಳುವಂತಹ – **ಶ್ರೀಹರಿಯು.**

**೧೫೬. ಸೌಖ್ಯಕರ**

ತನ್ನ ನಂಬಿದವರಿಗೆ ಯಾವಾಗಲೂ ಸುಖವನ್ನೀಯುವಂಥ – **ಶ್ರೀಹರಿಯು**

**೧೫೭. ನವತೀರ್ಣವಿಗ್ರಹ**

ಕ್ಷಣಕ್ಷಣಕ್ಕೂ ನೂತನವಾಗುವ ಪ್ರಕೃತಿಯನ್ನು ದಾಟಿದ ಅಪ್ರಾಕೃತ ದೇಹವುಳ್ಳಂಥ – **ಶ್ರೀ ಹರಿಯು.**

**೧೫೮. ಪದ್ಮನಾಭ**

(೧) ಭಗವಂತನ ನಾಭಿಯಲ್ಲಿ ಕಮಲವೊಂದಿದೆ ಸಕಲ ಭುವನಗಳು ಆ ಕಮಲದಲ್ಲಿವೆ; ಎಂದು ಋಗ್ವೇದ ಸಂದಶಿಸಿದೆ[೧೪೩] ಸ್ಕಾಂದವು ಈ ಶ್ರುತಿಯ ಅಭಿಪ್ರಾಯವನ್ನು ಸ್ಪಷ್ಟೀಕರಿಸಿದೆ

(೨) ಚತುರ್ಮುಖನು ಆಶ್ರಯಿಸಿಕೊಂಡಿರುವಂಥ ಹೊಕ್ಕಳುಉಳ್ಳವನು.[೧೪೪]

(೩) ತನ್ನ ಪದತಲದಲ್ಲಿ ಲಕ್ಷ್ಮೀದೇವಿಯನ್ನು ಹೊಂದಿರುವವನು; ಹಾಗೂ ವೃಷಭಾವತಾರದಲ್ಲಿ ನಾಭಿರಾಜನ ಮಗನಾಗಿ ಅವತರಿಸಿದಂಥ,[೧೪೫] – **ಶ್ರೀಹರಿಯು.**

**೧೫೯. ಉದಾರಲೀಲ**

ಜೀವಾತ್ಮರು ಪದೇಪದೇ ಮಾಡುವ ತಪ್ಪುಗಳನ್ನು ಕ್ಷಮಿಸಿ, ತನ್ನ ಬಗ್ಗೆ ಜ್ಞಾನವನ್ನಿತ್ತು ಅವರವರ ಯೋಗ್ಯತೆಗನುಸಾರ ಉತ್ತಮ ಗತಿಯನ್ನು ದಯಪಾಲಿಸುವಂಥ ಉದಾರ ಚರತ್ರೆಯುಳ್ಳಂಥ – **ಶ್ರೀ ಹರಿಯು.**

**ಮೋಕ್ಷವಲ್ಲಭ ಭವ ಮಲಘ್ನ ಮು – ।**
**ಮುಕ್ಷುವರದ ಮುನೀಂದ್ರ, ಸುಮನೋ – ।**

---

೧೪೨. ಋಗ್ವೇದ – ೭೭ –೧೮ ಹಾಗೂ ಋಗ್ಭಾಷ್ಯ ಹಾಗೂ ಶ್ರೀ.ವಿ.ಸ.ನಾ.ಸ್ತೋತ್ರಕ್ಕೆ – ಉಡುಪಿಟೀಕೆ ನಾಮ ೬೪೨ ಹಾಗೂ ನಾಮ ೧೮೯ "ಅನುರಿದ್ಧಃ" ಇದಕ್ಕೆ ಪುಟ ೭೦೮.

೧೪೩. ಋಗ್ವೇದ ೧೦–೮೨–೬ ಹಾಗೂ ಸ್ಕಂದ–ಬ್ರಹ್ಮಸೂತ್ರಭಾಷ್ಯ ೧–೧–೧

೧೪೪. ಬ್ರಹ್ಮಪುರಾಣ – ಭಾಗವತ ತಾತ್ಪರ್ಯನಿರ್ಣಯ ೩–೧–೨೬

೧೪೫. ಶ್ರೀ.ವಿ.ಸ.ನಾ.ಸ್ತೋತ್ರಕ್ಕೆ ಉಡುಪಿ ಟೀಕೆ ನಾಮಗಳು ೪೮ ಹಾಗೂ ೨೦೦ "ಪದ್ಮನಾಭಃ"ಗಳಿಗೆ ಪುಟ ೧೬೮ ಹಾಗೂ ೭೪೦.



**ಧ್ಯಕ್ಷ ದಾಮೋದರ ದಯಾಪರ ಜಿತದಿತಜ ಸಮರ ॥**
**ಭಿಕ್ಷುಕಾನ್ವಯಪ್ರಿಯ ಸಮಾಧಿಕಾ – ।**
**ಪಕ್ಷ ಸೃಷ್ಟ್ಯಾದ್ಯಷ್ಟ ಕಾರಣ ।**
**ದಕ್ಷಾಧ್ವರ ಪರಬ್ರಹ್ಮನಿವಹಾದ್ಭಿನ್ನರೂಪ ನಮೋ ॥ ೧೧ ॥**

**೧೬೦. ಮೋಕ್ಷವಲ್ಲಭ**

ಸತ್ವಗುಣವುಳ್ಳ ಸುಜೀವಿ ಮುಮುಕ್ಷುಗಳಿಗೆ ಅವರವರ ಯೋಗ್ಯತೆಗೆ ತಕ್ಕಂತೆ (೧) ಸಾಲೋಕ್ಯ (೨) ಸಾರೂಪ್ಯ (೩) ಸಾಮಿಪ್ಯ (೪) ಸಾಯುಜ್ಯ ಮೋಕ್ಷವನ್ನು ದಯಪಾಲಿಸುವಂಥ – **ಶ್ರೀಹರಿಯು.**

**೧೬೧. ಭವಮಲಘ್ನ**

ಭವ ಅಂದರೆ ಸಂಸಾರದಲ್ಲಿದ್ದ ಜೀವಿಗಳಿಗೆ ಮಲ ಅಂದರೆ ಕರ್ಮಗಳು ಮೂರು ವಿಧ –ಸಂಚಿತ, ಪ್ರಾರಬ್ದ ಮತ್ತು ಆಗಾಮಿಗಳೆಂದು. ಈವರೆಗೆ ಹಿಂದೆ ಆಚರಿಸಲಾದ (ಜನ್ಮಾಂತರಗಳಲ್ಲಿ ಸಹ) ಕರ್ಮಗಳು ಸಂಚಿತವೆನಿಸುವವು. ಇವುಗಳ ಪರ್ವತಾಕಾರದ ರಾಶಿಯೇ ಪ್ರತಿಯೊಬ್ಬನ ಬೆನ್ನು ಹಿಂದೆ ಇದೆ. ಅದರಲ್ಲಿ ಯಾವ ಕರ್ಮದ ಅದೃಷ್ಟ ಫಲವನ್ನು ಈಗ ಅನುಭವಿಸಲು ಆರಂಭಮಾಡಿರುವೆವೋ ಅದು ಪ್ರಾರಬ್ಧವು. ಮುಂದೆ ಸಂಭವಿಸುವ ಕರ್ಮಗಳು "ಆಗಾಮಿ"

**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇತಾರಾ" – ಗೀತಾ ೫–೭ ಪಾಪ್ತ**

ಜ್ಞಾನವೆಂಬ ಅಗ್ನಿಯಿಂದ ಸನ್ನಿಹಿತವಾದ ಕರ್ಮಗಳು ಸುಟ್ಟು ಬೂದಿಯಾಗುತ್ತವೆ, ಎಂದು ಹೇಳಲಾಗಿದೆ ಹೀಗೆ ತನ್ನ ಜ್ಞಾನವನ್ನು ದಯಪಾಲಿಸಿ ಜೀವಾತ್ಮರ ಭವದಲ್ಲಿಯ ಕರ್ಮನಿರ್ಮಿತ ಪಾಪವೆಂಬ ಮಲವನ್ನು ನಾಶಪಡಿಸುವಂಥ – **ಶ್ರೀಹರಿಯು.**

**೧೬೨. ಮುಮುಕ್ಷುವರದ**

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಮುಕ್ತಸ್ಯಯೋಗಿನಃ ॥**

**– ಶ್ರೀಮದ್ಭಗವದ್ಗೀತಾ – ಅಧ್ಯಾಯ – ೮; ಶ್ಲೋಕ ೧೪**

"ಸತತ ಅನನ್ಯ ಮನಸ್ಕನಾಗಿ ಯಾರು ನಿತ್ಯವೂ ನನ್ನನ್ನು ಸ್ಮರಿಸುವನೋ, ಅಂಥ ಸಾಧಕನಿಗೆ (ಮರಣಕಾಲದಲ್ಲಿ ನಾನು ಸುಲಭವಾಗಿ ಸ್ಮೃತಿ ಪಥಕ್ಕೆ ಬಂದು) ಅನಾಯಾಸವಾಗಿ ಪ್ರಾಪ್ಯನಾಗುವೆ"ನೆಂದು ಅರ್ಜುನನಿಗೆ ಶ್ರೀಕೃಷ್ಣನು ತಿಳಿಸಿದಂತೆ ಮುಮುಕ್ಷುಗಳಿಗೆ ವರಪ್ರದನಾದಂಥ – **ಶ್ರೀಹರಿಯು.**

**೧೬೩. ಮುನೀಂದ್ರಸುಮನೋಧ್ಯಕ್ಷ**

ಮುನೀಂದ್ರ – ಮುನಿಶ್ರೇಷ್ಠ+ಸು+ಮನ+ಅಧ್ಯಕ್ಷ

ಮುನಿಶ್ರೇಷ್ಠರ ಮನಸ್ಸಿನಲ್ಲಿ ಅಗ್ರಸ್ಥಾನಪಡೆದು, ಅವರಿಂದ ಆರಾಧಿತನಾಗುವಂಥ – **ಶ್ರೀಹರಿಯು.**

**೧೬೪. ದಾಮೋದರ**

ಒಮ್ಮೆ ಯಶೋಧೆಯು ಮೊಸರನ್ನು ಕಡೆಯುತ್ತಿದ್ದಾಗ ಶ್ರೀಕೃಷ್ಣನು, ಸ್ತನ್ಯಪಾನ ಮಾಡಿಸೆಂದು ಕಡೆಗೋಲನ್ನು ಹಿಡಿದು ನಿಲ್ಲಿಸಿ ಬಿಟ್ಟನು. ಅವನು ಯಶೋದೆಯ ತೊಡೆಯ ಮೇಲೆ ಮಲಗಿ ಸ್ತನ್ಯಪಾನ ಮಾಡುತ್ತಿದ್ದನು. ಯಶೋದೆ ಹಾಲು ಉಕ್ಕುತ್ತಿರುವದನ್ನು ಕಂಡು, ಆ ಹಾಲಿನ ಪಾತ್ರೆಯನ್ನು ಕೆಳಗಿಳಿಸಬೇಕೆಂದು ತೊಡೆಯಮೇಲಿದ್ದ ಕೃಷ್ಣನನ್ನು ಎತ್ತಿ ನೆಲದ ಮೇಲೆ ಕುಕ್ಕಿ ಓಡಿ ಹೋದಳು. ಶ್ರೀಕೃಷ್ಣನು, ತನ್ನ ಸ್ತನ್ಯಪಾನರೂಪಸೇವೆಗಿಂತ ಹಾಲಿನ ರಕ್ಷಣೆ ಲಾಭದಾಯಕವೆಂದು ತಿಳಿದ ಯಶೋಧೆಗೆ ಬುದ್ಧಿಗಲಿಸಬೇಕೆಂದು, ಮೊಸರಿನ ಗಡಿಗೆಯನ್ನು ಒಡೆದು, ಅದರಲ್ಲಿಯ ಬೆಣ್ಣೆಯನ್ನು ತೆಗೆದುಕೊಂಡು ಓಡಿಹೋಗಿ ಅಂಗಳದಲ್ಲಿದ್ದ ಕಟ್ಟಿಗೆಯ ಉರಳಿನ ಮೇಲೆ ಕುಳಿತು ಬೆಣ್ಣೆಯನ್ನು ಬೆಕ್ಕಿಗೂ ಕೊಟ್ಟು ತಾನೂ ತಿನ್ನುತ್ತಿದ್ದನು. ಯಶೋದೆಗೆ ಕೋಪ ಬಂದಿತು. ಹಗ್ಗದಿಂದ ಅವನನ್ನು ಕಟ್ಟಿ ಹಾಕಿದಳು. ನಡಕ್ಕೆ ಹಗ್ಗದಿಂದ ಕಟ್ಟಿಸಿಕೊಂಡು ದಾಮೋದರನಾದ ಶ್ರೀಕೃಷ್ಣಾವತಾರದ,[೧೪೬] – **ಶ್ರೀಹರಿಯು.**

**೧೬೫. ದಯಾಪರ**

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

– ಶ್ರೀಮದ್ಭಗವದ್ಗೀತಾ – ಅಧ್ಯಾಯ ೯ – ಶ್ಲೋಕ ೨೬

ವಿಹಿತ ಪತ್ರ, ಪುಷ್ಪ, ಜಲಾದಿ ಅಲ್ಪ ವಸ್ತುಗಳನ್ನಾದರೂ ಭಕ್ತಿಯಿಂದ ಅರ್ಪಿಸಿದರೆ ಸ್ವೀಕರಿಸುವೆನೆಂದು ಶ್ರೀಕೃಷ್ಣನೇ ಪ್ರತಿಜ್ಞೆ ಮಾಡಿ ಹೇಳಿರುವನು. ಭಕ್ತರು ಅರ್ಪಿಸಿದುದು ಅಲ್ಪವಾದರೂ ಅನಂತಪಟ್ಟು ಅಧಿಕವಾದ ಫಲವನ್ನು ದಯಪಾಲಿಸುತ್ತಾನೆ. ಭಕ್ತಿಯೇ ಕಾರಣವಲ್ಲದೆ, ಪೂಜಾದ್ರವ್ಯದ ಅಲ್ಪತ್ವ ಮಹತ್ವಗಳು ಕಾರಣವಲ್ಲ. ಇದಕ್ಕೆ ಕುಚೇಲನೆಂಬ ಕಡು ಬಡವ ಬ್ರಾಹ್ಮಣ ತಂದಿದ್ದ ಒಂದು ಹಿಡಿ ಅವಲಕ್ಕಿಗೆ ಪ್ರೀತನಾಗಿ ಆತನಿಗೆ ಮಹದೈಶ್ವರ್ಯವನ್ನು ಕರುಣಿಸಿದ ದಯಾಪರನಾದಂಥ – ಶ್ರೀಕೃಷ್ಣಾವತಾರದ,[೧೪೭] – **ಶ್ರೀಹರಿಯು.**

**೧೬೬. ಜಿತ ದಿತಿಜಸಮರ** ದಿತಿ+ಜ++ಸಮರ+ಜಿತ

ದಿತಿಯಲ್ಲಿ ಹುಟ್ಟಿದಂಥ ರಾಕ್ಷಸರು ನಡೆಸಿದ ಸಮರಗಳನ್ನೆಲ್ಲ ದೇವಪರವಾಗಿ ಗೆದ್ದಂಥ – **ಶ್ರೀಹರಿಯು.**

**೧೬೭. ಭಿಕ್ಷುಕಾನ್ವಯಪ್ರಿಯ**

ಭಿಕ್ಷುಕ ಅಂದರೆ ಪರಮಹಂಸ ರೂಪಿಗಳಾದ ಸನಕಾದಿಗಳ ವಂಶದಲ್ಲಿ ಅಂದರೆ ಶಿಷ್ಯ ಪರಂಪರಾ ಬಂದ ಭಕ್ತ ಜನರಿಗೆ ಪ್ರಿಯನಾದ – **ಶ್ರೀಹರಿಯು.**

---

೧೪೬. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ಹತ್ತನೇಯ ಅಧ್ಯಾಯ ಹಾಗೂ ಶ್ರೀವಾದಿರಾಜಕೃತ – "ಶ್ರೀಕೃಷ್ಣಬಾಲಲೀಲೆ"ಯ ಪೂರ್ವಾರ್ಧ ನುಡಿ – ೪೪೧ರಿಂದ ೪೫೮ ರವರೆಗಿನಸಾರ.

೧೪೭. ಶ್ರೀ ಜಗನ್ನಾಥದಾಸಾರ್ಯವಿರಚಿತ – "ಸುಳ್ಳಿಸುಳ್ಳಾಲಿ" –ಗೆ ಟೀಕಾಗ್ರಂಥ ಶ್ರೀಹರಿದಾಸಭಾರತಿಯ "ವಿಜಯಾಂಕರತ್ನ–೭" ರ ಪುಟ ೧೫೭



**ಕಾಲಾಶ್ಚ ದೇಶಗುಣತೊಸ್ಯ ನ ಬಾದಿರಂತೋ**
**ವೃದ್ಧಿಕ್ಷಯೆ ನತು ಪರಸ್ಯ ಸದಾತನಸ್ಯ ।**
**ನೈತಾದೃಶಃ ಶ್ವ ಚ ಬಭೂವ ನ ಚೈವ ಭಾವ್ಯೋ**
**ನಾಸ್ತುತ್ತರಃ ಕಿಮು ಪರಾತ್ ಪರಮಸ್ಯ ವಿಷ್ಣೋಃ ॥ ೧೨ ॥**

– ಮಹಾಭಾರತ ತಾತ್ಪರ್ಯನಿರ್ಣಯ ಅಧ್ಯಾಯ ೧ ಶ್ಲೋಕ ೧೨.

**೧೬೮. ಸಮಾಧಿಕಾಪಕ್ಷ**

**ಅರ್ಥ :–**

ಸದಾ ಒಂದೇ ತೆರನಾಗಿರುವ ಸರ್ವೋತ್ತಮನಾದ ಭಗವಂತನಿಗೆ ಕಾಲದಿಂದಾಗಲೀ, ದೇಶ ಮತ್ತು ಗುಣಗಳಿಂದಾಗಲಿ, ಮೊದಲಾಗಲೀ, ಕೊನೆಯಾಗಲೀ. ಇಲ್ಲ; ವೃದ್ಧಿ ಮತ್ತು ಕ್ಷಯಗಳೂ ಇಲ್ಲ; ಬ್ರಹ್ಮಾದ್ಯುತ್ತಮರಾದ ಮಹಾಲಕ್ಷ್ಮಿಗೂ ಮಿಗಿಲಾದ ವಿಷ್ಣುವಿಗೆ ಸಮನಾದವನು ಎಲ್ಲೂ ಈ ಹಿಂದೆ ಆಗಿಲ್ಲ; ಮುಂದೆ ಆಗುವುದಿಲ್ಲ; ಈಗಲೂ ಇಲ್ಲವೇ ಇಲ್ಲ; ಹೀಗೆ ಸಮನೇ ಇವನಿಗೆ ಇಲ್ಲದಿರುವಾಗ ಉತ್ತಮನು ಇಲ್ಲವೆಂದು ಬೇರೆ ಹೇಳಬೇಕೇನು?

**"ಬಲೇನವಿದ್ಯಮಾನಾಽಪಿ ನ ಸಮಸ್ತತ್ವತಂ ವಿನಾ" ಇತಿ ತತ್ವನಿರ್ಣಯ ವಾಕ್ಯ ಆಚಾರ್ಯೇಣ ಉದ್ಧರತಾ ।**

– ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ಈ ಮೇಲಿನ ಶ್ಲೋಕಕ್ಕೆ ಶ್ರೀ ಜನಾರ್ದನ ಭಟ್ಟಿಯವರ – "ಪದಾರ್ಥದೀಪಿಕಾ" ಎಂಬ ಟೀಕೆ.

**"ಲಕ್ಷ್ಮೀಕಾಂತ ಸಮಂತತೋ ವಿಕಲಮನ್ ನೈವೇಶಿತುಸ್ತೇಸಮಂ**
**ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ ರಸೋಯೋಽಷ್ಟಮಃ ।**

**– ಶ್ರೀಮದ್ವಾಚಾರ್ಯರ – "ನಖಸ್ತುತಿ"**

**ಅರ್ಥ :–** ಹೇ ಲಕ್ಷ್ಮೀದೇವಿಗೆ ಮನೋಹರನಾದ ನರಸಿಂಹನೇ! ವೇದಮೊದಲಾದ ಎಲ್ಲ ಶಾಸ್ತ್ರಗಳಲ್ಲಿ ವಿಚಾರಿಸಿ ನೋಡಲು ಸ್ವಾಮಿಯಾದಂಥನಿಗೆ ಸರಿಯಾದ ವಸ್ತುವನ್ನು ನಾನು ನಿಶ್ಚಯವಾಗಿ ಕಾಣಲಿಲ್ಲ. ನಿನಗೆ ಸಮವೇ ಇಲ್ಲವೆಂದ ಮೇಲೆ ಉತ್ತಮವಾದ ವಸ್ತುವು ಇಲ್ಲವೇ ಇಲ್ಲ. ಆದಕಾರಣ ನೀನು ಎಂಟನೇ ರಸ ಶಬ್ದವಾಚ್ಯನು.

**ಶುಭ ನಿಕೇತನ ಸೌಖ್ಯದ ಭವ –।**
**ನ್ನಿಭರನನ್ಯರಗಾಣೆನಧಿಕ ।**
**ತ್ರಿಭುವನದಿ ನಾಲ್ಗೆರಡನೇ ರಸದಂತೆ ಸನ್ಮಹಿತಾ ॥**
**ವಿಭುವಿಭೂತಿದ ಭೂಜಲೇಂದ್ರ।**
**ಪ್ರಭೃತಿ ರಸ ಸಪ್ತೋತ್ತಮನೆ ಯನ ।**
**ಗಭಯಕೊಡು ಪ್ರಲ್ಹಾದನುತಪ್ರಾಣೇಶ ವಿಠ್ಠಲನೇ ॥**

– ಪ್ರಾಣೇಶ ವಿಠ್ಠಲದಾಸರು – ವಾಯುಸ್ತುತಿಗೆ ಕನ್ನಡಪದ್ಯ.

**೧೬೯. ಸೃಷ್ಟ್ಯಾದ್ಯಷ್ಟ ಕಾರಣ**

(೧) ಸೃಷ್ಟಿ (೨) ಸ್ಥಿತಿ (೩)ನಿಯಮನ (೪) ಲಯ (೫) ಜ್ಞಾನ (೬) ಅಜ್ಞಾನ (೭) ಬಂಧ (೮) ಮೋಕ್ಷ ಇವೇ ಮೊದಲಾದ ಅಷ್ಟಕಾರ್ಯಗಳನ್ನು ತನ್ನ ಇಚ್ಛಾಶಕ್ತಿಯಿಂದಲೇ ನಡೆಸುವಂಥ – ಸೃಷ್ಟ್ಯಾದ್ಯಷ್ಟಕಾರಣನಾದ – **ಶ್ರೀಹರಿಯು.**

**೧೭೦. ದಕ್ಷಾಧ್ವರ ಪರಬ್ರಹ್ಮ ನಿವಹಾದ್ಭಿನ್ನ ರೂಪ**

ದಕ್ಷಾಧ್ವರ ಪರಬ್ರಹ್ಮ ಅಧಕ್ಷನು ಮಾಡಿದ ಯಜ್ಞ ನಾಶಗೊಳಿಸಿದ = ರುದ್ರ

ನಿವಹ, ಜೀವಸಮೂಹ.

ರುದ್ರ ಗಣ ಹಾಗೂ ಗಣ ಜೀವ ಸಮೂಹಕ್ಕಿಂತ ಭಿನ್ನನಾದಂಥ – ಶ್ರೀಹರಿಯು.

**ಕಂಠಕೌಸ್ತುಭ, ಭೂಷಣಾಂಶಾಽ – ।**
**ಕುಂಠಿತಾತ್ಮೈಶ್ವರ್ಯ ಅಶುಭವಿ – ।**
**ಲುಂಠಿಕಾಧೋಕ್ಷಜ ಉಪೇಂದ್ರ ಶ್ರೀ ಶ್ರೀಶ ಅನಿರುದ್ಧ ॥**
**ಕುಂಠಿತ+ಜನನಮರಣ ಶಿರಿವೈ – ।**
**ಕುಂಠ ಪದ್ಮಾಮ್ಲಾನ ತುಲಸೀ ।**
**ಕಂಠ ಮಾಲಾನ್ವಿತಸುಗಂಧ ಜ್ಞಾನಕೋಶ ನಮೋ** ॥ ೧೨ ॥

**೧೭೧. ಕಂಠ ಕೌಸ್ತುಭಿ ಭೂಷಣ**

ತನ್ನ ಕೊರಳಲ್ಲಿ ಭೂಷಣಾರ್ಥವಾಗಿ – **"ಕೌಸ್ತುಭಿ"** ಮಾಲೆಯನ್ನು ಧರಿಸಿಕೊಂಡಂಥ – **ಶ್ರೀಹರಿಯು.**

**ಅಂಶಾಽಕುಂಠಿತಾತ್ಮೈಶ್ವರ್ಯ** **ಅಂಶ+ಅಕುಂಟಿತಾತ್ಮೈಶ್ವಾರ್ಯ**

**೧೭೨. ಅಂಶ**

**೧೭೩. ಅಕುಂಠಿತಾತ್ಮೈಶ್ವರ್ಯ**

ಮತ್ಸ, ಕೂರ್ಮ, ವರಾಹಾದಿ ಅನೇಕ ಅಂಶ ರೂಪಗಳಲ್ಲಿಯೂ ಅಕುಂಠಿತವಾದ ಅಂದರೆ ಯಾವದೇ ತರಹದ ಚ್ಯುತಿರಹಿತವಾದಂಥ ಅಷ್ಟಕರ್ತೃತ್ವ ಶಕ್ತಿಯುಳ್ಳಂಥ – **ಶ್ರೀಹರಿಯು.** ಉದಾಹರಣೆಗಾಗಿ – ಶ್ರೀಕೃಷ್ಣನು ಕೃಷ್ಣ ಕೇಶದಿಂದಲೇ ಅವತರಿಸಿದರೂ ಪೂರ್ಣ ಸಾಮರ್ಥ್ಯಉಳ್ಳವನಾಗಿದ್ದನು.

**(೧) ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್‌ಪೂರ್ಣಮಿದಮುಚ್ಯತೆ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ ॥**

**– ಋಗ್ವೇದ**

**(೨) ಯಥೈವ ಕೃಷ್ಣಕೇಶಸ್ಯ ಕೃಷ್ಣಸ್ಯ ಬ್ರಹ್ಮತಾಖಿಲಾ ।**
**ದರ್ಶಿತಾಚೈವ ಪಾರ್ಥಾಯ ನಿಶ್ಶಿಮಾಶಕ್ತಯೋಶ್ಯಹಿ ॥**

**– ಅನುವ್ಯಾಖ್ಯಾನ**



**೧೭೪. ಅಶುಭವಿಲುಂಠಿಕಾ**

ಸುಜೀವಿಗಳಿಗೆ ಅವರವರ ಕರ್ಮಾನುಸಾರ ಒದಗಬಹುದಾದ ಅಶುಭ ಘಟನೆಗಳನ್ನು ತಡೆಯುವಂಥ – **ಶ್ರೀಹರಿಯು**

**೧೭೫. ಅಧೋಕ್ಷಜ.**

ಎಂದೆಂದೂ ಅಪಕರ್ಷವನ್ನು ಹೊಂದದೆ ಇರುವದರಿಂದ ಅಧೋಕ್ಷಜ ಎನಿಸಿರುವಂಥ,[೧೪೮] – **ಶ್ರೀಹರಿಯು.**

**೧೭೬. ಉಪೇಂದ್ರ**

**ಉಪ**

(೧) ಉಪೋಪಸರ್ಗಸ್ಯ ಉತ್ಕೃಷ್ಟಾರ್ಥಕತ್ವಂ – "ಪ್ರಪಂಚೋಪಶಮಂ"[೧೪೯]

(೨) ತೂರಿಯನಾಮಕ ಭಗವತಃ ವಿಶೇಷಣ ವ್ಯಾಖ್ಯಾವಸಾರೆ – ಶ್ರೀಮದಾಚಾರ್ಯೈಃ ಪ್ರದರ್ಶಿತಮ್; **"ಉತ್ಕೃಷ್ಟನಂದ ರೂಪತ್ವಾದುಪಶಬ್ದ: ಪ್ರಕೀರ್ತಿತಃ"** ಇತಿ

**ಇಂದ್ರ :–**

ಸರ್ವೋತ್ಕೃಷ್ಟನಾದ ಭಗವಂತನು – ವ್ಯಾಸ, ಕೃಷ್ಣ, ಕಪಿಲ, ರಾಘವಾದಿ ರೂಪಗಳುಳ್ಳ ತನ್ನನ್ನು ಅತ್ಯಂತ ಪರಿಪೂರ್ಣನಾಗಿಕಂಡು– "ಇದಂ" ಎನಿಸುವನು.[೧೫೦]

**"ಇದಂ"** ಎನಿಸುವ ತನ್ನ ಸ್ವರೂಪವನ್ನು ಕಾಣುವದರಿಂದಲೇ ಭಗವಂತನು, ಇದಂದ್ರ ಎಂದು ಪ್ರಸಿದ್ಧನಾಗಿರುವನು; ಹೀಗೆ "ಇದಂದ್ರ" ಎನಿಸುವ ಭಗವಂತನನ್ನು ಪರೋಕ್ಷ ಪ್ರಿಯರಾದ ದೇವತೆಗಳು – ರಮಾ – ಬ್ರಹ್ಮಾದಿಗಳು ಸಹ – "ಇಂದ್ರ" ನೆಂದು ಕರೆಯುವರು.[೧೫೧]

ಅಸುರಾದಿಗಳಿಗೆ ಭಗವಂತನ **"ಇದಂದ್ರ"** ತಾ ತಿಳಿಯಬಾರದೆಂದು ಶೃತಿಯು ಅವನನ್ನು ಪರೋಕ್ಷವಾಗಿ – **"ಇಂದ್ರ"** ಎಂದೇ ಕರೆಯುವದು. ಐತರೇಯೋಪನಿಷದ್ಭಾಷ್ಯ.

ಪದ್ಮವೂ ಇಂದ್ರ ಶಬ್ದಕ್ಕೆ ದ್ರಷ್ಟತ್ವವೇ ಪ್ರವೃತ್ತಿ ನಿಮಿತ್ತವೆಂದು ತಿಳಿಸಿ, ಅದು ಮುಖ್ಯವಾಗಿ ಕೇಶವನಲ್ಲೇ ಇರುವದರಿಂದ, ಅವನೇ ಇಂದ್ರನೆಂದು ಬೋಧಿಸಿದೆ.[೧೫೨]

ಭಗವಂತನು ಎಲ್ಲರಿಗಿಂತ ಮೇಲೆ ಇದ್ದು; ಪರಮ ಐಶ್ವರ್ಯಶಾಲಿಯಾಗಿರುವನು.[೧೫೩] ಆದ್ದರಿಂದಲೇ ಗಾರ್ಗ್ಯರು ಭಗವಂತನನ್ನು ಸಕಲ ಜೀವಿಗಳಿಗೆ ತಲೆಯ **(ಮೂರ್ಧಾ)** ಸ್ಥಾನದಲ್ಲಿರುವನೆಂಬುದಾಗಿ ತಾನು ಉಪಾಸಿಸುವನೆಂದು ಅಜಾತಶತ್ರುವನ್ನು ಕುರಿತು ಉಪದೇಶಿಸಿರುವನು.[೧೫೪]

---

೧೪೮. ಮಹಾಭಾರತ ಉದ್ಯೋಗ ಪರ್ವ (೭೦–೧೦)
೧೪೯. ಮಾರ್ಕಂಡೇಯ ಉಪನಿಷತ್ತು ೨–೧–೧
೧೫೦. ಮಂತ್ರಾರ್ಥಮಂಜರಿ – ಋಗ್ಭಾಷ್ಯಬೇಕಾ ೨–೪.
೧೫೧. ಐತರೇಯೋಪನಿಷತ್ತು – ೨–೩–೩, ೧೦,೧೧.
೧೫೨. ಪಾದ್ಮ – ಭಾಗವತ ತಾತ್ಪರ್ಯನಿರ್ಣಯ – ೧೦–೯೪–೩೨. ೧೫೩. ಋಗ್ಭಾಷ್ಯ–೩–೪
೧೫೪. ಬೃಹದಾರಣ್ಯಕೋಪನಿಷತ್ತು ೪–೧.೭ ಹಾಗೂ ಭಾಷ್ಯ

ಪರಮೈಶ್ವರ್ಯಉಳ್ಳವನೇ ಇಂದ್ರ ಎನಿಸುತ್ತಿದ್ದು; ಭಗವಂತನೇ ಮುಖ್ಯವಾಗಿ ಪರಮೈಶ್ವರ್ಯವುಳ್ಳವನಾಗಿರುವದರಿಂದ ಅವನೇ ಮುಖ್ಯವಾಗಿ ಇಂದ್ರನು. ಶಚಿಪತಿಯಾದರೋ ಮುಖ್ಯವಾಗಿ ಪರಮೈಶ್ವರ್ಯವನ್ನು ಹೊಂದದ ಪ್ರಯುಕ್ತ ಇಂದ್ರ ಎನಿಸಲಾರನು. ಭಗವಂತನೇ ಭೂತಾಧಿಪತ್ಯ ರೂಪವಾದ ಮಹೈಶ್ವರ್ಯವನ್ನು ಹೊಂದಿರುವದರಿಂದ ಅವನೇ ಇಂದ್ರನು. ಬೃಹತೀಸಹಸ್ರವು ಅವನ ಯಶಸ್ಸೇ ಆಗಿದೆ; ಎಂದು ಮಹಿದಾಸನು ಸಂದೇಶಿಸಿರುವನು.[೧೫೫]

ಯಜ್ಞನಾಮಕ ಭಗವಂತನೇ ಪ್ರಥಮ ಮನ್ವಂತರದಲ್ಲಿ ಸ್ವೇಚ್ಛೆಯಿಂದ ಇಂದ್ರನಾಗಿರುವನು. ಉಳಿದ ಹನ್ನೆರಡು ಮಂದಿಗೆ ಭಗವಂತನಿಂದ ಅನುಗ್ರಹಿತವಾದ ಇಂದ್ರತ್ವವೇ ಹೊರತು ಮುಖ್ಯವಾದುದಲ್ಲ,[೧೫೬] ಆದ್ದರಿಂದ ವೇದಗಳು ಮುಖ್ಯವಾಗಿ ಶ್ರೀಹರಿಯನ್ನೇ ಇಂದ್ರ ಎಂಬ ಹೆಸರಿನಿಂದ ಕರೆಯುವವು.

ಬಲಗಣ್ಣಿನಲ್ಲಿ ಇರುವ ಭಗವಂತನು ಪ್ರಕಾಶಿಸುವ[೧೫೭] ಪ್ರಯುಕ್ತ **"ಇಂದ್ರ"** ಎನಿಸುವನು. ಆದರೆ ಪರೋಕ್ಷಪ್ರಿಯರಾದ ಜ್ಞಾನಿಗಳು ಅವನನ್ನು "ಇಂಧ" ಎನ್ನುವಬದಲು **"ಇಂದ್ರ"** ಎಂದು ಕರೆಯುವರು[೧೫೮]. ಎಂದು ಕಣ್ವಶ್ರುತಿ ಸಂದೇಶಿಸಿದೆ.[೧೫೯]

ಇಂದ್ರಾದಿಗಳಿಗೆ ಅನುಗ್ರಹಿಸುವದಕ್ಕಾಗಿ ಇಂದ್ರನ ತಮ್ಮನಾಗಿ ಅವತರಿಸಿರುವವನು.[೧೬೦]

ಬಲಿಯು ಸ್ವರ್ಗಾಧಿಪತಿಯಾಗಿ ದೇವತೆಗಳ ಐಶ್ವರ್ಯವನ್ನೆಲ್ಲ ಕಸಿದುಕೊಂಡಾಗ, ಇಂದ್ರಾದಿ ದೇವತೆಗಳಿಗೆ ಅನುಗ್ರಹಿಸುವದಕ್ಕಾಗಿ ಅದಿತಿಯಲ್ಲಿ ಕಶ್ಯಪನಿಂದ ಭಗವಂತನು ವಾಮನನಾಗಿ ಅವತರಿಸಿದನು. ಅದಿತಿಯಲ್ಲಿ ಇಂದ್ರಾದಿಗಳ ಅವತಾರವಾದ ಬಳಿಕ ಸಂಭವಿಸಿದ ಪ್ರಯುಕ್ತ ಈ ವಾಮನಾವತಾರವೇ **"ಉಪೇಂದ್ರ"** ಎಂದೆನಿಸಿದೆ. ಭಗವಂತನೇ ಕೃಷ್ಣಾವತಾರದ ಸಂದರ್ಭದಲ್ಲಿ ವಸುದೇವ–ದೇವಕಿಯರೆದುರು – ತಾನು ಅವರಲ್ಲಿ ಹಿಂದೆ, **"ಉಪೇಂದ್ರ"**ನೆಂದು ಪ್ರಸಿದ್ಧವಾದ ಅವತಾರವನ್ನು ತಾಳಿರುವದಾಗಿ ತಿಳಿಸಿರುವನು.[೧೬೧] ಇಂಥ ಉಪೇಂದ್ರರೂಪೀ – **ಶ್ರೀ ಹರಿಯು.**

**೧೭೭. ಶ್ರೀಶ್ರೀಶ.**

ಯಾವ ಕಾಲದಲ್ಲೂ ಯಾವ ಅವತಾರದಲ್ಲೂ ಶ್ರೀದೇವಿ – ರಮಾದೇವಿಯ ಈಶ – ಅಂದರೆ ವಲ್ಲಭನಾದಂಥ – **ಶ್ರೀಹರಿಯು.**

ಶಿಶುಪಾಲಾದಿ ರಾಜರನ್ನು ಬಿಟ್ಟು ನನ್ನನ್ನೇ ಏಕೆವರಿಸಿದೆ ಎಂದು ಶ್ರೀಕೃಷ್ಣನು ರುಕ್ಮಿಣಿಗೆ ಹಾಸ್ಯಮಾಡಿ ಕೇಳಿದ್ದಕ್ಕೆ – ಶ್ರೀರಮಾವತಾರಳಾದ ರುಕ್ಮಿಣಿಯು "ರಾಜ್ಯೈಶ್ವರ್ಯಾದಿ ಗಳುಳ್ಳವರೆಂದು ನಿನ್ನಿಂದ ಹೇಳಲ್ಪಟ್ಟ ರಾಜರೆಂಬವರು ಕಾಮಮೋಹಿತರಾಗಿ ಸ್ತ್ರೀಯರ ಅಂತಃಪುರದಲ್ಲಿ, ಹೇಸರಕತ್ತೆ, ಗೋ, ಅಶ್ವ, ಬೆಕ್ಕುಗಳಂತೆ ಅವರ ದಾಸನಾಗಿರುವರು. ಇಂಥ ಹೇಡಿಗಳಾದ

೧೫೫. ಐತರೇಯೋಪನಿಷದ್ಭಾಷ್ಯ – ೨–೧–೨–೧೫ ಹಾಗೂ ೨–೨–೬–೧೨ ಐತರಿಯೋಪನಿಷತ್ತು ೨–೨–೬–೧೨; ಭಾಷ್ಯ ಹಾಗೂ ಟೀಕಾ ತಾಮ್ರಪರ್ಣಿಯ.

೧೫೬. ಐತಿರಿಯೋಪನಿಷದ್ಭಾಷ್ಯ ೨–೨–೬–೧೨ ೧೫೭. ಋಗ್ಭಾಷ್ಯ ೨–೪

೧೫೮. ಬೃಹದಾರಣ್ಯಕೋಪನಿಷತ್ ೬–೨–೨ ೧೫೯. ಮಂತ್ರಾರ್ಥ ಮಂಜರಿ

೧೬೦. ವಿದ್ಯಾಧಿರಾಜೀಯ ಟೀಕೆ – ಉಪೇಂದ್ರ – ನಾಮಕ್ಕೆ.

೧೬೧. ಶ್ರೀಮದ್ಭಾಗವತ ೧೦–೩–೪೨ ಹಾಗೂ ಶ್ರೀ.ವಿ.ಸ.ನಾ.ಸ್ತೋತ್ರಕ್ಕೆ ಉಡುಪಿಟೀಕೆ – ನಾಮ – ೧೫೫ "ಉಪೇಂದ್ರ" ಇದಕ್ಕೆ ಪುಟ ೫೬೬ ರಿಂದ ೫೭.



ಮೃತಪ್ರಾಯರಾದ ರಾಜರನ್ನು ಹೊಂದಲು, ನಿನ್ನ ಪಾದಪದ್ಮಗಳ ಮಕರಂದವನ್ನು ಎಂದೂ ಆಘ್ರಾಣಿಸದೆ ಮೂರ್ಖಳಾದ ಸ್ತ್ರೀ ಮಾತ್ರ ಪತಿತ್ವೇನ ಕೇವಲ ಕಾಮೋಪಶಾಂತಿಗಾಗಿ ಇಚ್ಛಿಸಬಹುದು. ಉತ್ತಮ ಸ್ತ್ರೀಯರು ತಮ್ಮನ್ನಾಳಲು ಶಕ್ತರಾದ, ಗುಣಗಳಿಂದ ಉತ್ತಮರಾದ ಪುರುಷರನ್ನು ಪತಿಯನ್ನಾಗಿ ಅಪೇಕ್ಷಿಸುವರಲ್ಲದೆ, ತಮ್ಮ ಆಜ್ಞಾಪಾಲಕರಾಗಿ ವರ್ತಿಸುವ ಹೇಡಿಗಳನ್ನಲ್ಲ". ಎಂದು ನುಡಿದಳು.[೧೬೨]

ಇಂಥ ಶ್ರೀದೇವಿಯ ಈಶನಾದಂಥ – **ಶ್ರೀಹರಿಯು.**

**೧೭೮. ಅನಿರುದ್ಧ.**

ನಾಮ ೧೫೪ – ಅನಿರುದ್ಧ – ನೋಡಿರಿ

**ಕುಂಠಿತ ಜನನ ಮರಣ**

**೧೭೯. ಕುಂಠಿತ ಜನನ;** **೧೮೦.ಕುಂಠಿತ ಮರಣ**

ನಾಮ – ೧೩೨ **"ವೃದ್ಧಿ ವರ್ಜಿತ"** ೧೩೩ **"ಹ್ರಾಸ ವರ್ಜಿತ"** ನೋಡಿರಿ

**೧೮೧. ಶಿರಿ ವೈಕುಂಠ**

ಶ್ರೀವಿಷ್ಣುವು ಪತ್ನಿಯಾದ ರಮಾದೇವಿ ಹಾಗೂ ಏಕಾಂತಭಿಕ್ತರಾದ ವಾಯು, ಗರುಡ, ಇವರಿಂದ ಸೇವೆಗೊಳ್ಳುತ್ತ ವೈಕುಂಠದಲ್ಲಿ ಪೂರ್ಣಾನಂದದಿಂದ ಇರುತ್ತಿರುವನು. ತನ್ನ ಇರುವಿಕೆಯಿಂದಲೇ ವೈಕುಂಠ ಲೋಕಕ್ಕೆ ಶೋಭೆ ತಂದಿರುವಂಥ – **ಶ್ರೀಹರಿಯು.**

**ಪದ್ಮಾಮ್ಲಾನ ತುಲಸೀ ಕಂಠಮಾಲಾನ್ವಿತ ಸುಗಂಧ**

ಪದ್ಮ+ಅಮ್ಲಾನ+ತುಲಸೀ+ಕಂಠ+ಮಾಲಾನ್ವಿತ ಸುಗಂಧ

ಪದ್ಮಪುಷ್ಪ ಹಾಗೂ ಬಾಡದ ತುಳಸೀ ದಳಗಳಿಂದ ಮಾಡಿದ ಮಾಲೆಯನ್ನು ಕೊರಳಲ್ಲಿ ಧರಿಸಿದಂಥ – **ಶ್ರೀಹರಿಯು.**

**೧೮೨. ಪದ್ಮಾಮ್ಲಾನ.**

ಶ್ರೀಕೃಷ್ಣನು ರುಕ್ಮಿಣಿಗೆ ಶ್ರೇಷ್ಠ ಭೂಪಾಲಕರನ್ನು ಬಿಟ್ಟು ಗೋಪಾಲಕನಾದ ನನ್ನನ್ನೇಕೆ ವರಿಸಿದೆ ಎಂದು ಹಾಸ್ಯಮಾಡಿ ನುಡಿಯಲು, ರುಕ್ಮಿಣಿಗೆ ಸಿಟ್ಟು ಬಂದು ನೆಲಕ್ಕೆ ಒರಗಿದಳು. ಅದನ್ನು ಕಂಡು ಶ್ರೀಕೃಷ್ಣನು, ನಗೆದಾಟಕ್ಕೆ ಆಡಿದ ಮಾತು ನಿಜವೇ? ಎಂದು ಕೇಳಿ, ಅವಳ ಮುಂದಲೆಯನ್ನು ನೆವರಿಸಾಂತ್ವನಪಡಿಸಿದನು. ಆಗ ಅವಳು ಹರ್ಷಗೊಂಡು ಭಯಭಕ್ತಿದ್ಯೋತಕವಾದ ಸ್ತ್ರೀ ಸಹಜ ನಾಚಿಕೆಯಿಂದ ತಲೆಬಾಗಿ ಪ್ರೇಮ ಹೊರಸೂಸುವ ನೋಟದಿಂದ ಪ್ರೇಮ ಸಲ್ಲಾಪಕ್ಕಿಳಿದಳು. ಹೀಗೆ ರಮಾದೇವಿಯನ್ನು ನಾಚಿಕೆ ಗೊಳಪಡಿಸಿದಂಥ,[೧೬೩] – **ಶ್ರೀಹರಿಯು.**

೧೬೨. ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧ ಎಪ್ಪತ್ತೈದನೇಯ ಅಧ್ಯಾಯ. ಹಾಗೂ ಶ್ರೀ ಜಗನ್ನಾಥದಾಸಾರ್ಯ ವಿರಚಿತ– "ಸುವ್ವಿಸುವ್ವಾಲಿ"ಗೆ ಟೀಕಾ ಗ್ರಂಥ – ಶ್ರೀಹರಿದಾಸಭಾರತಿಯ – "ವಿಜಯಾಂಕ ರತ್ನ –೭" ರ ಪುಟ ೧೧೭–೧೧೮.

೧೬೩. ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧ ಎಪ್ಪತ್ತೈದನೇಯ ಅಧ್ಯಾಯ.

**೧೮೩. ತುಲಸೀಕಂಠ ಮಾಲಾನ್ವಿತ ಸುಗಂಧ**

ಭಗವಂತನು ಶ್ರೀತುಳಸಾದೇವಿಯಲ್ಲಿಯ ತನ್ನ ಪ್ರೇಮಕ್ಕಾಗಿ ತನ್ನ ಕೊರಳಲ್ಲಿ ಶ್ರೀ ತುಳಸಿ ಮಾಲೆಯನ್ನು ಧರಿಸುವನು. ತುಳಸಿಯ ಹೂವಿನಲ್ಲಿ ಎಲ್ಲ ಋತುಗಳಲ್ಲಿ ಬೆಳೆಯುವ ಎಲ್ಲ ಹೂಗಳ ವಾಸನೆಯು ಇರುವದು. ಆದ್ದರಿಂದ ತುಲಸೀ ಕಂಠಮಾಲಾನ್ವಿತ ಸುಗಂಧವನ್ನು ಆಘ್ರಾಣಿಸುವಂಥ – **ಶ್ರೀಹರಿಯು.**

**೧೮೪. ಜ್ಞಾನಕೋಶ**

ಭಗವಂತನು ಅರಿಯದ ವಿಷಯವೇ ಯಾವದೂ ಇಲ್ಲ. ಆದ್ದರಿಂದ ಆತನು ಜ್ಞಾನದ ಭಾಂಡಾರದಂತಿದ್ದು "ಜ್ಞಾನಕೋಶ" ನೆನಿಸಿಕೊಂಡಂಥ – **ಶ್ರೀಹರಿಯು.**

**ನಿರ್ಜರೇಷ್ಟದ ನೀತಫಲದ ಕು – ।**
**ದುರ್ಜನಾರ್ದಕ ದೂಷಣಾಂತಕ ।**
**ನಿರ್ಜಿತಾಖಿಳ, ಸುಜನಪಾಲಕ ನಿಶಾಚರೌಘ ಹರ ॥**
**ವರ್ಜಿತಕಲುಷ ನಿತ್ಯವಿಬುಧರ – ।**
**ಉರ್ಜಿತರ ಚಾರಿತ್ರ ವಿಮಲಗು – ।**
**ಣಾರ್ಜಿತೋದಧಿ ಉಪಧ್ವಜ ವೈರಾಗ್ಯ ಪುರುಷ ನಮೋ** ॥ ೧೩ ॥

**೧೮೫. ನಿರ್ಜರೇಷ್ಟದ**

ನಿರ್ಜರ = (ಜರಾ=ಮುಪ್ಪು) ಮುಪ್ಪು ಇಲ್ಲದವರು = ದೇವತೆಗಳು. ಮುಪ್ಪಿಲ್ಲದುದರಿಂದ ಮರಣರಹಿತರಾಗಿ ಅಮರರೆನಿಸಿದ ದೇವತೆಗಳ ಇಷ್ಟ–ಅಂದರೆ ಇಚ್ಛೆಯನ್ನು ಪೂರೈಸುವವನಾದಂಥ – **ಶ್ರೀಹರಿಯು.**

**೧೮೬. ನೀತಫಲದ**

ಭಗವಂತನು ಅವರವರ ಕರ್ಮಾನುಸಾರವಾಗಿ ಅವರವರಿಗೆ ಸಲ್ಲತಕ್ಕ ಫಲವನ್ನು ಕೊಟ್ಟು – **"ನೀತಫಲದ"** ನೆಂದೆನಿಸಿಕೊಳ್ಳುವಂಥ – **ಶ್ರೀಹರಿಯು.**

**೧೮೭. ಕುದುರ್ಜನಾರ್ದಕ**

ಕು + ದುರ್ಜನ + ಅರ್ದಕ

ಭೂಮಿ + ದುಷ್ಟಜನ + ನಾಶಪಡಿಸುವಂಥ.

ದುಷ್ಕೃತ್ಯಗಳಿಂದ ಭೂಭಾರವಾದ ದುಷ್ಟಜನರನ್ನು ನಾಶಪಡಿಸುವಂಥ – **ಶ್ರೀಹರಿಯು.**

**೧೮೮. ದೂಷಣಾಂತಕ**

(ಎ) ಶ್ರೀರಾಮನು ಸೀತೆಲಕ್ಷ್ಮಣರೊಂದಿಗೆ ಪಂಚವಟಿಯಲ್ಲಿ ವಾಸಿಸುತ್ತಿದ್ದಾಗ್ಗೆ **"ಶೂರ್ಪನಖಿ"** ಎಂಬ ರಾಕ್ಷಸಿಯು ರಾಮಲಕ್ಷ್ಮಣರಿಗೆ ಮೋಹಿತಳಾಗಿ ಅವರ ಕೂಡ ವಿವಾಹವಾಗ ಬಯಸಿ, ತನ್ನ ಕಿವಿ ಮೂಗೂ ಕತ್ತರಿಸಿಕೊಂಡು ವಿರೂಪಿಯಾಗಿ ತನ್ನ ಅಣ್ಣನಾದ ಖರನಿಗೆ – ಆದ ಸಂಗತಿಯನ್ನೆಲ್ಲ ಅರುಹಿ ತನ್ನ ಕೂಡ ತನ್ನ ಅಣ್ಣನ ಹದಿನಾಲ್ಕು ಜನ ಸೇನಾಪತಿಗಳನ್ನು ಅಸಂಖ್ಯಾತ ರಾಕ್ಷಸರನ್ನು ರಾಮಲಕ್ಷ್ಮಣರ ಕೂಡ ಯುದ್ಧಕ್ಕೆಂದು ಕರೆತಂದಳು. ಆದರೆ



ಆಯುದ್ಧದಲ್ಲಿ ಅವರೆಲ್ಲರೂ ಹತರಾಗಲು, ಖರನು ತನ್ನ ಸೇನಾಪತಿಗಳಲ್ಲಿ ಪ್ರಮುಖರಾದ ತ್ರಿಶಿರ ಮತ್ತು ದೂಷಣರ ಸಮೇತ ಹದಿನಾಲ್ಕು ಸಾವಿರ ರಾಕ್ಷಸ ಸೇನೆಯೊಡಗೂಡಿ ಶ್ರೀರಾಮನ ಕೂಡ ಯುದ್ಧ ಮಾಡಿದ. ಅದರಲ್ಲಿ ಅವರೆಲ್ಲರೂ ಹತರಾದರು. ಹೀಗೆ ಶ್ರೀರಾಮವತಾರದಲ್ಲಿ **"ದೂಷಣ"** ನೆಂಬ ರಕ್ಕಸನ್ನು ಕೊಂದು **"ದೂಷಣಾಂತಕ"** ನೆನಿಸಿಕೊಂಡಂಥ – ಶ್ರೀರಾಮಾವತಾರದ – **ಶ್ರೀಹರಿಯು.**

(ಬಿ) ರಾಜಸೂಯ ಯಾಗವು ವಿಜೃಂಭಣೆಯಿಂದ ಸಾಂಗವಾಗಿ ನೆರವೇರಿತು. ಅಗ್ರಪೂಜೆ ಯಾರಿಗೆ ಎಂದು ಕೇಳಿದಾಗ ಭೀಷ್ಮರು – (ಸಹದೇವನಾಮಕವಸು)– **"ಶ್ರೀಕೃಷ್ಣನೇ ಅಗ್ರಪೂಜೆಗೆ ಅರ್ಹನು"**. ಎಂದು ಹೇಳಿದ ಪ್ರಕಾರ, ಧರ್ಮರಾಜನು ಶ್ರೀಕೃಷ್ಣನಿಗೇನೇ ಅಗ್ರಪೂಜೆಯನ್ನು ಸಲ್ಲಿಸಿದನು. ಶಿಶುಪಾಲನು ಆಗ ಕೃಷ್ಣನನ್ನು ನಿಂದಿಸಿ ಯುದ್ಧಕ್ಕೆ ನಿಂತನು. ಶ್ರೀಕೃಷ್ಣನು ಚಕ್ರದಿಂದ ಅವನ ಶಿರಸ್ಸನ್ನು ಕತ್ತರಿಸಿದನು. ಇದರಿಂದ ಹರಿದ್ವೇಷಿಗಳಿಗೆ ಸುಖಹೇತುಗಳಾದ ಸಂಪದಾದಿಗಳು ಲಭಿಸುವದಿಲ್ಲ; ಎಂದು ಸೂಚಿತವಾಗಿದೆ. ಈ ಶಿಶುಪಾಲನಲ್ಲಿ ಜೀವದ್ವಯರಿದ್ದರು. ಆವಿಷ್ಟನಾಗಿದ್ದ ಅಸುರನನ್ನು ತಮಸ್ಸಿಗೆ ಕಳುಹಿಸಿ, ತನ್ನ ದ್ವಾರಪಾಲಕನಾದ – ಜಯನಿಗೆ ಸದ್ಗತಿಯನ್ನಿತ್ತನು.

**"ಸರ್ವಥಾಭಕ್ತಿತೋಮುಕ್ತಿಃ ದ್ವೇಷಾತ್ತಮ ಉದೀರತಂ ।**
**ಜೀವದ್ವಯಸಮಾಯೋಗಾತ್ ಗತಿದ್ವಯ ಜಿಗೀಷವಃ"** ॥

ಶಿಶುಪಾಲಾದಿಕ್ಷು ದ್ವಿಜಾಃಜೀವಾಃ – ಭಾಗವತ ತಾತ್ಪರ್ಯ [೧೬೪]

**೧೮೯. ನಿರ್ಜಿತಸುಜನಪಾಲಕ; ೧೯೦. ಸುಜನಪಾಲಕ**

ಎಲ್ಲರನ್ನೂ ಗೆದ್ದವನಾಗಿ, ಸುಜನರನ್ನು ಪಾಲಿಸುವಂಥ – **ಶ್ರೀಹರಿಯು.**

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಾ ವಹಾಮ್ಯಹಂ ॥**

**– ಶ್ರೀಮದ್ಭಗವದ್ಗೀತಾ ಅಧ್ಯಾಯ – ೯ ಶ್ಲೋಕ –೨೨**

'ಸುಜನರನ್ನು ಪಾಲಿಸುವಂಥ – **ಶ್ರೀಹರಿಯು.**

**೧೯೧. ನಿಶಾಚರೌಘಹರ.** ನಾಮ "ನಿಶಾಚರ ಹರಣಶೀಲ" ನೋಡಿರಿ.

ನಿಶಾ –**ರಾತ್ರಿ** + ಚರ – **ತಿರುಗಾಡುವವರು** = ರಾಕ್ಷಸರು.

ಔಘ = **ಸಮೂಹ** ಹರ = **ನಾಶಮಾಡುವವ**

ರಾಕ್ಷಸರ ಸಮೂಹವನ್ನು ವಿಶೇಷವಾಗಿ ಸಂಹರಿಸಿದಂಥ – ಶ್ರೀರಾಮಾವತಾರದ – **ಶ್ರೀಹರಿಯು.**

**೧೯೨. ವರ್ಜಿತಕಲುಷ: ನಾಮ.** ೧೨೫ – **"ಅಶೇಷದೋಷವಿದೂರ"** ನೋಡಿರಿ.

ಕಲುಷ=ದೋಷ; ವರ್ಜಿತ = ಇಲ್ಲದವ.

ಯಾವ ಕಾಲಕ್ಕೂ ಯಾವಬಗೆಯ ದೋಷವೂ ಇಲ್ಲದಂಥ – **ಶ್ರೀಹರಿಯು.**

---

೧೬೪. ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧ – ಎಂಭತ್ತೆರಡನೇಯ ಅಧ್ಯಾಯ.

**“ನಾರಾಯಣಂ ನಮಸ್ಕೃತ್ಯ ನರೋಯಾತಿ ನರೋತ್ತಮತ್ವಂ”**

ನಾರಾಯಣನಿಗೆ ನಮಸ್ಕರಿಸಿದ ನರನು ನರೋತ್ತಮತ್ವವನ್ನು ಹೊಂದುವನೆಂದ ಬಳಿಕ ಅಂಥ ನಾರಾಯಣನಿಗೆ ದೋಷವೆಲ್ಲಿಂದ ಬರಬೇಕು? ಸರ್ವಥಾ ಆತನಲ್ಲಿ ದೋಷವಿರಲಾರದು. **– ಅಣುವ್ಯಾಖ್ಯಾನ.**

**೧೯೩. ನಿತ್ಯವಿಬುಧರ ಉರ್ಜಿತತರ ಚಾರಿತ್ರ.**

ಯಾವಾಗಲೂ ವಿಶೇಷ ಬುದ್ಧಿವಂತರಾದ – ಬ್ರಾಹ್ಮಣ ವರ್ಣಕ್ಕೆ

ಉರ್ಜಿತವಾದ ಚಾರಿತ್ರ್ಯವನ್ನು ದಯಪಾಲಿಸುವಂಥ – **ಶ್ರೀಹರಿಯು.**

**೧೯೪. ವಿಮಲ ಗುಣಾರ್ಜಿತೋದಧಿ.**

ವಿಮಲ+ಗುಣ+ಅರ್ಜಿತ+ಉದಧಿ = **(ಸಮುದ್ರ)**

ನಿರ್ಮಲವಾದ ಗುಣಗಳನ್ನು ಸಮುದ್ರದಂತೆ ವಿಶಾಲ ಹಾಗೂ ವಿಪುಲವಾಗಿ ಪಡೆದಿರುವಂಥ – **ಶ್ರೀಹರಿಯು.**

**೧೯೫. ವಿಪಥಧ್ವಜ**

ವಿ = ಆಕಾಶ ; ಪಥ =ದಾರಿ. ಆಕಾಶವೇ ದಾರಿಯಾಗುಳ್ಳವ. ಗರುಡ ಗರುಡಧ್ವಜ ಉಳ್ಳಂಥ – **ಶ್ರೀಹರಿಯು.**

**೧೯೬. ವೈರಾಗ್ಯಪುರುಷ**

ರಾಗ = ಅಪೇಕ್ಷೆ = ಇಚ್ಛೆ; ವಿರಾಗ = ಅಪೇಕ್ಷೆರಹಿತ.

ಸೃಷ್ಟಿಯನ್ನು ನಿರ್ಮಿಸುವಲ್ಲಿಯಾಗಲಿ, ಪಾಲನೆಯಲ್ಲಾಗಲಿ ಅಥವಾ ಲಯಗೊಳಿಸುವಲ್ಲಾಗಲೀ; ಆಸೃಷ್ಟಿಯಲ್ಲಿ ನಿರ್ಮಿಸಿದ ಯಾವ ಭೂತ ವಸ್ತುವಿನಲ್ಲಾಗಲಿ, ಯಾವದೇ ಕಾಲಕ್ಕೆ ಯಾವದೇ ಬಗೆಯಿಂದಾಗಲಿ ಇಚ್ಛೆಯನ್ನು ಅಂದರೆ ಅನುರಾಗವನ್ನು ಹೊಂದಲಾರದಂಥ **– ಶ್ರೀಹರಿಯು.**

**ಅ**ಪುಶಯನ **ಆ**ದ್ಯಪ್ತ **ಇ**ಷ್ಟಜ –।
ನ ಪರಗತಿಪ್ರದ **ಈ** ಶವರನುತ ।
ಉಪಮವಿರಹಿತ **ಊ**ರ್ಧ್ವಗಪ್ರಿಯ **ಋ**ಜುರ್ಭಿನೃಪಧರ ॥
ಉಪತದುಷ್ಕೃತ ಈಖಮೋದಕ ।
ಚಪಲ **ಏ**ಕಾನೇಕ ವಿಗ್ರಹ ।
ಸ್ವಪರ**ಐ**ಶ್ವ **ಯೋ**ರ್ಜ **ಔ**ದಾರ್ಯ ಸಹಸ್ರ ನಮೋ ॥ ೧೪ ॥
(ಈ ನುಡಿಯಲ್ಲಿ – **ಅಂ, ಅಃ** ಅಕ್ಷರಮಾಲೆಗಳು ಉಳಿದಿವೆ)

**೧೯೭. ಅಪುಶಯನ**

ನೀರಿನಲ್ಲಿ ಶೇಷನನ್ನು ಹಾಸಿಗೆಯನ್ನಾಗಿ ಮಾಡಿಕೊಂಡು, ತಾನು ಪವಡಿಸಿಕೊಂಡು ಶ್ರೀದೇವಿ ಹಾಗೂ ವಾಯು ಗರುಡರಿಂದ ಸೇವೆ ಸ್ವೀಕರಿಸುವಂಥ – **ಶ್ರೀಹರಿಯು.**



ನಾಮ – ೧೧೪ – **“ಶೇಷಶಯನ”** ನೋಡಿರಿ.

**೧೯೮. ಆದ್ಯಪ್ತ ಇಷ್ಟಜನ ಪರ.**

ತನಗೆ ಪ್ರಿಯರಾದ ಸುಜೀವಿಗಳೆಲ್ಲರಿಗೂ ಪರಗತಿ ಅಂದರೆ ಮೋಕ್ಷವನ್ನು ದಯಪಾಲಿಸಿ, ಉತ್ತಮಲೋಕಗಳಲ್ಲಿ ಅವರಿಗೆ ಅನಂತ ಸುಖಗಳನ್ನೀಯುವಂಥ – **ಶ್ರೀಹರಿಯು.**

**೧೯೯. ಗತಿಪ್ರದ**

ಅವರವರ ಕರ್ಮಾನುಸಾರ ಸದ್ಗತಿ ಅಥವಾ ಅಧೋಗತಿಯನ್ನೀಯುವಂಥ – **ಶ್ರೀಹರಿಯು.**

**೨೦೦. ಈಶವರನುತ**

ಈಶ=ರುದ್ರ; ಈಶವರ = ವಾಯು, ಬ್ರಹ್ಮ ಹಾಗೂ ಶ್ರೀರಮಾದೇವಿ ರುದ್ರದೇವರಿಗಿಂತ ಅಧಿಕರಾದ ವಾಯುದೇವರು, ಬ್ರಹ್ಮ, ಶೇಷ, ಗರುಡ, ಹಾಗೂ ಶ್ರೀರಮಾದೇವಿಯವರಿಂದ ನಿತ್ಯ ಸೇವೆಗೊಳ್ಳುವಂಥ – **ಶ್ರೀಹರಿಯು.**

**೨೦೧. ಉಪಮವಿರಹಿತನಾಮ** – ೧೬೮ **“ಸಮಾಧಿಕಾಪಕ್ಷ”** ನೋಡಿರಿ. ತನಗೆ ಉಪಮೆ ತೋರಿಸಲು ಸರಿ ಸಮಾನರಾರೂ ಇಲ್ಲದೆ, ಅಧಿಕರಂತೂ ಇಲ್ಲವೇ ಇಲ್ಲದಂಥ – **ಶ್ರೀಹರಿಯು.**

**೨೦೨. ಊರ್ಧ್ವಗಪ್ರಿಯ**

ಮಂತ್ರದ್ರಷ್ಟಾರನಾದ ತ್ರಿಶಂಕುರಾಜನು – ಊರ್ಧ್ವ – ಎನಿಸುವ ಭಗವಂತ = ನಿಂದ ತಾನು ಪವಿತ್ರನಾದ ಪ್ರಯುಕ್ತ ಸಂಸಾರ ವೃಕ್ಷವನ್ನು ಭೇದಿಸಿರುವೆನೆಂಬುದಾಗಿ ಹೇಳಿಕೊಂಡಿರುವನು.[೧೬೫]

ಊರ್ಧ್ವ – ನೆನಿಸುವ ಭಗವಂತನ ಕಡೆಗೆ ಗ–ಅಂದರೆ ಗಮ್ಯನಾದಂಥ ತನ್ನ ಭಕ್ತರಿಗೆ ಪ್ರಿಯನಾದಂಥ – ಶ್ರೀಹರಿಯು.

**೨೦೩. ಋ ಜುರ್ಭಿನೃಪಧರ**

ಋಜುಭಿಃ + ನೃಪ = ಋಜುರ್ಭಿನೃಪ = ಬ್ರಹ್ಮ

ಋಜುರ್ಭಿನೃಪ + ಧರ = ಶ್ರೀಹರಿ

ಋಜುಗಳ ಅರಸನಾದ ಬ್ರಹ್ಮನನ್ನು ತನ್ನ ನಾಭಿಕಮಲದಲ್ಲಿ ಧರಿಸಿದಂಥ – ಶ್ರೀಹರಿಯು.

**೨೦೪. ವಿಪತದುಷ್ಕೃತ**

ದುಷ್ಟರು ತಮ್ಮ ಮೇಲೆ ಎಸಗಿದ ದುಷ್ಕೃತ್ಯಗಳನ್ನು ಸದ್ಭಕ್ತರ ಪ್ರಾರ್ಥನೆಯಿಂದ (೧) ದ್ರೌಪದಿಯ ವಸ್ತ್ರಾಪಹರಣ ಸಂಕಟವನ್ನು (೨) ಶಿಷ್ಯಸಮೇತ ದುರ್ವಾಸರ ಅಕಾಲ ಭೋಜನಾಪೇಕ್ಷೆಯ ವಿಪತ್ತನ್ನು (೩) ಅಂಬರೀಷನು ದುರ್ವಾಸರ ಶಾಪದಿಂದಲೂ (೪) ಗಜೇಂದ್ರನು ನಕ್ರನಿಂದಲೂ ಬಿಡುಗಡೆಯಾಗುವಂತೆ ಕರುಣಿಸಿದಂಥ – **ಶ್ರೀಹರಿಯು.**

---

೧೬೫. ತೈತಿರಿಯೋಪನಿಷದ ೧–೧೮; ಯಜುರ್ವೇದ – ತೈತ್ತಿರಿಯೋನಿಷದ ಭಾಷ್ಯ ಹಾಗೂ ಶ್ರೀ.ವಿ.ಸನಾಮಸ್ತೋತ್ರಕ್ಕೆ ಉಡುಪಿಟೀಕೆ ನಾಮ ೬೫ “ಪವಿತ್ರಂ” ಈನಾಮಕ್ಕೆ ಪುಟ – ೨೧೨

**೨೦೫. ಈಖಮೋದಕ**

ರುದ್ರ – ಬ್ರಹ್ಮಾದಿಗಳಿಗೆ ಆನಂದವನ್ನುಂಟುಮಾಡುವಂಥ – **ಶ್ರೀಹರಿಯು.**

**ಚಪಲಏಕಾನೇಕ ವಿಗ್ರಹ.**

**೨೦೬. ಚಪಲ ವಿಗ್ರಹ; ೨೦೭. ಏಕ ವಿಗ್ರಹ; ೨೦೮. ಅನೇಕ ವಿಗ್ರಹ**

ಭಗವಂತನ ಸೃಷ್ಟ್ಯಾದಿಗಳು ಲೋಕದ ಸೃಷ್ಟ್ಯಾದಿಗಳಿಗಿಂತ ವಿಲಕ್ಷಣವಾದವುಗಳು. ಒಂದು ದೀಪದಿಂದ ಇನ್ನೊಂದು ದೀಪವು ಹುಟ್ಟಿಕೊಳ್ಳುವಂತೆ, ಒಂದು ರೂಪದಿಂದ ಮತ್ತೊಂದು ರೂಪದ ಅಭಿವ್ಯಕ್ತಿಯೇ ಭಗವಾತನ ಸೃಷ್ಟಿ ಅಥವಾ ಅವನ ಅವತಾರ,[೧೬೬] – ಹೀಗೆ ತನ್ನ ಒಂದು ರೂಪದಿಂದ ಅನೇಕ ರೂಪಗಳನ್ನು ಅಂದರೆ ಅವತಾರಗಳನ್ನು ತಾಳುವಂತಹ – **ಶ್ರೀಹರಿಯು.**

**೨೦೯. ಸ್ವಪರ – ಐಶ್ವರ್ಯ ಸಹಸ್ರ**

**೨೧೦. ಸಪರ ಓಜ – ಸಹಸ್ರ**

**೨೧೧. ಸಪರ – ಔದಾರ್ಯ – ಸಹಸ್ರ**

ಸ್ವಪರ = ತನ್ನ ಪಕ್ಷದ; ಓಜ = ತೇಜ = ಶಕ್ತಿ

ತನ್ನ ಪಕ್ಷದ ಜನರಿಗೆ ಐಶ್ವರ್ಯ, ಶಕ್ತಿ ಹಾಗೂ ಔದಾರ್ಯಗಳನ್ನು ಸಾವಿರಮಡಿ ಮಾಡಿಕೊಂಡುವಂಥ – **ಶ್ರೀಹರಿಯು.**

**ಕ**ರುಣನಿಧಿ **ಖ**ಳಹಗೆಯರಾದ ಪ ।
**ಘ**ರ ಘರಾದಿ ಸಮ್ಯ**ಜ್** ಜ್ಞಾನಾತ್ಮಕ, ಸು – ।
**ಚ**ರಿತ ಪ್ರಾಕೃತ**ಛ**ವಿರಹಿತ **ಜ**ನಪಾ **ಝ**ಷ ಋಷಭಾ ॥
**ಞ**ರುಜಗತ್ವರ್ಯಜನ ಕಮರ **ಡ** – ।
ಮರಧರೇಢ್ಯನೇ ಗೂ**ಢ**ಗುಣ**ಚಿತ್** ।
ಪರಕುಧರಧಿ ಕೋಚ್ಚಾರಜಾರಗ **ದ**ನಹಸೂ**ಧ**ನದ ನಮೋ ॥ ೧೫ ॥
(ಈ ನುಡಿಯಲ್ಲಿ – **ಥ** – ಅಕ್ಷರಮಾಲೆ ಉಳಿದಿದೆ)

**೨೧೨. ಕರುಣನಿಧಿ**

ಅತ್ಯಂತ ಕಾರುಣ್ಯವುಳ್ಳವನಾಗಿ **“ಕರುಣನಿಧಿ”** ಎಂದೆನಿಸಿಕೊಳ್ಳುವಂಥ – **ಶ್ರೀಹರಿಯು.**

**೨೧೩. ಖಳಹಗೆಯರಾದಪ**

ದುಷ್ಟ ರಾಕ್ಷಸರಾದ ಬಕಾಸುರ, ಹಿಡಿಂಬ ಮೊದಲಾದವರನ್ನೂ ಹಾಗೂ ದುರ್ಜನರಾದ ಜರಾಸಂಧ, ದುರ್ಯೋಧನ – ದುಃಶಾಸನರನ್ನೊಳಗೊಂಡ ಕೌರವರ ವೈರಿಯಾದ ಭೀಮಾವತಾರದ ವಾಯುದೇವರನ್ನು ಪಾಲಿಸಿದಂಥ – **ಶ್ರೀಹರಿಯು.**

---

೧೬೬. ಭಾಗವತ ತಾತ್ಪರ್ಯ ನಿರ್ಣಯ ೧೧–೨೮–೬ ಹಾಗೂ ಶ್ರೀವಿಷ್ಣು ಸಹಸ್ರನಾಮಕ್ಕೆ ಉಡುಪಿ ಟೀಕೆ ನಾಮ –೭ “ಭಾವಃ” ಈ ನಾಮಕ್ಕೆ – ಪುಟ – ೨೫.



**೨೧೪. ಘರಘರಾದಿಸಮ್ಯಜ್‌ಜ್ಞಾನಾತ್ಮಕ**

ಘರ್ಘರಾದಿ ಘೋಷವರ್ಣಗಳ ಸಮ್ಯಜಜ್ಞಾನ ನಾಮಕನಾದಂಥ – **ಶ್ರೀಹರಿಯು.**

**೨೧೫. ಸುಚರಿತ**

ಒಳ್ಳೇ ಆದರ್ಶಯುತ ಚರಿತ್ರೆಯುಳ್ಳಂಥ – **ಶ್ರೀಹರಿಯು.**

**ಪ್ರಾಕೃತ ಛವಿ ರಹಿತಜನಪ**

ಪ್ರಾಕೃತ ಛವಿರಹಿತ ಜನ + ಪ

ಪ್ರಾಕೃತದೋಷಗಳು ಕಾಮ ಕ್ರೋಧಾದಿಗಲು ಇಲ್ಲದಂತೆ ಮಾಡಿಕೊಂಡಂಥ ಮುಕ್ತ ಜನರನ್ನು ಪಾಲಿಸುವಂಥ – **ಶ್ರೀಹರಿಯು.**

**೨೧೬. ಪ್ರಾಕೃತ ಛವಿರಹಿತ**

ಪ್ರಕೃತಿಯಿಂದ ಹುಟ್ಟುವ ಕಾಮಕ್ರೋಧಾದಿ ಯಾವದೇ ಪ್ರಕಾರದ ದೋಷರಹಿತನಾದಂಥ – **ಶ್ರೀಹರಿಯು.**

ನಾಮ : ೧೨೫ ಅಕೇಷದೋಷವಿದೂರ” ಮತ್ತು ನಾಮ – ೧೬೨ “ಮುಮುಕ್ಷವರದ” ನೋಡಿರಿ.

**೨೧೭. ಜನಪ**

ಜನರನ್ನು ಪಾಲಿಸುವಂಥ – **ಶ್ರೀಹರಿಯು.**

**೨೧೮. ಝಷ**

ನಾಮಗಳು – (೧) ೮೮೨ ವಿಷಯಸುಖಮಯಮೀನ
(೨) ೩೪೮ ಝಷಪತಿ
(೩) ೩೮೭ ಸತ್ಯವೃತಪ – ನೋಡಿರಿ

**೨೧೯. ಋಷಭ**

ನಾಮ (೧) ೧೦೧ ಋಷಭ – ನೋಡಿರಿ

**೨೨೦. ಞರು ಜಗತ್ವರ್ಯವನ**

ಹಗಲು ರಾತ್ರಿ ಸರ್ವದಾ ಜಗದ್ವ್ಯಾಪಿಯಾದಂಥ – **ಶ್ರೀಹರಿಯು.**

**೨೨೧. ಕಮಠ**

ಕೂರ್ಮರೂಪಿಯಾದಂಥ – **ಶ್ರೀಹರಿಯು.**

**೨೨೨. ಡಮರ ಧರೇಢ್ಯನೆ**

ರುದ್ರದೇವರಿಂದ ಬಾರಿಸಲ್ಪಟ್ಟ ಡಮರುವಿನಿಂದ ಹೊರಹೊರಟ ಅ–ಕಾರ, ಉ–ಕಾರ, ಮ–ಕಾರ ಇತ್ಯಾದಿ ಶಬ್ದ ವಾಚ್ಯನಾದಂಥ – **ಶ್ರೀಹರಿಯು.**

**೨೨೩. ಗೂಢಗುಣಚಿತ್**

ಗುಪ್ತವಾದ ಗುಣಗಳು ಹಾಗೂ ಜ್ಞಾನ ಉಳ್ಳಂಥ – **ಶ್ರೀಹರಿಯು.**

**೨೨೪. ಪರಾಕಧರ; ಪರ+ಕು+ಧರ**

ಶ್ರೀದೇವಿ + ಭೂದೇವಿ + ಧಾರಣಮಾಡು

ಶ್ರೇಷ್ಠಳಾದ ಭೂದೇವಿಯನ್ನು ಧಾರಣಮಾಡಿದಂಥ – **ಶ್ರೀಹರಿಯು.**

**೨೨೫. ಅಧಿಕೋಚ್ಚಾರ**

ಬ್ರಹ್ಮ, ವಾಯು, ಸರಸ್ವತಿ, ಭಾರತಿ, ಗರುಡ, ಶೇಷ ಇವರಷ್ಟೇ ಅಲ್ಲದೆ ಅಕ್ಷರಗಳೆನಿಸಿದ ಶ್ರೀ ಲಕ್ಷ್ಮೀದೇವಿಗಿಂತಲೂ ಅಧಿಕನೆಂದು ಉಚ್ಚರಿಸಲ್ಪಡುವಂಥ – **ಶ್ರೀಹರಿಯು.**

**೨೨೬. ಜಾರಗ**

ಶ್ರೀಕೃಷ್ಣಾವತಾರದಲ್ಲಿ ಜಾರಕರ್ಮವೆಸಗಿದನೆಂಬ ಅಪವಾದಕ್ಕೆ ಗುರಿಯಾಗಿ, "ಜಾರಗ" ನೆಂದೆನಿಸಿಕೊಂಡಂಥ – **ಶ್ರೀಹರಿಯು.**

**೨೨೭. ದನ ಹಸೂಧನದ**

ಮೂಲದಲ್ಲಿ – ದನುಹಸ್‌ಧನದ ಅಂತಾ ಅದೆ.

ಇಲ್ಲಿ ದೀರ್ಘಸೂ ಇದನ್ನು ಸಕಾರದ ಅರಕ್ಷರವೆಂದು ಬರೆದುಕೊಳ್ಳುವ ಕಾಲಕ್ಕೆ ಭಾವಿಸಿದ್ದಾರೆ.

ಕೃಷ್ಣಾವತಾರದಲ್ಲಿ ನಂದಗೋಪನ ಮನೆಯಲ್ಲಿ ಇರುವಾಗ್ಗೆ ಹಸು ಆಕಳು. ದನಗಳನ್ನು ವಿಪುಲ ಧನವಾಗಿ ಹೊಂದಿದವನಾದಂಥ – ಶ್ರೀಕೃಷ್ಣಾವತಾರದ – **ಶ್ರೀಹರಿಯು.**

ನರಸಖಾಮಿತ **ಪಶುಪ ಫಣಿ**ಮದ –।
ಹರ **ಬಲಾನುಜಭರಿತ** ವಿಕ್ರಮ –।
**ಮರುತ** ಕಾಂಗೆ**ಯರ**ಘ್ನ ನೆರಲೇಶ್ವರ ಲಕ್ಷ್ಮೀಶಾ ॥
**ವರದ**ರಾಜ **ಶ**ಶಿವದನ **ಷ**ಕೃಷ –।
ನಿರತ **ಸರ್ವಭುಕ್** ನುಜ್ಞ **ಹವ್ಯೇ** –।
ಶ್ವರ ಸ್ವತೃಪ್ತ ಸ್ವಪೂರ್ಣ **ಲಕ್ಷ್ಮೀ**ಧರ **ಯಜ್ಞಾಂ**ಗ ನ**ಮೋ** ॥ ೧೬ ॥
(ಈ ನುಡಿಯಲ್ಲಿ – ಳ – ಅಕ್ಷರಮಾಲೆ ಉಳಿದಿದೆ)

**೨೨೮. ನರಸಖ**

ನರ – ನಾರಾಯಣರೇ ಅರ್ಜುನ ಹಾಗೂ ಶ್ರೀಕೃಷ್ಣರಾಗಿ ಅವತರಿಸಿದರು. ಅರ್ಜುನನ ಸಖ – ಗೆಳೆಯನಾದಂಥ – ಶ್ರೀಕೃಷ್ಣಾವತಾರದ – **ಶ್ರೀಹರಿಯು.**

**೨೨೯. ಅಮಿತಪಶುಪ; ಅ+ಮಿತ+ಪಶು+ಪ**

(ಎ) ಶ್ರೀಕೃಷ್ಣನು, ನಾರಾಯಣನಿಂದ ಬರುವ ಸುಖದುಃಖಾದಿಗಳನ್ನು ಇಂದ್ರನು ತಪ್ಪಿಸೂರನೆಂದು ನಂದಗೋಪನಿಗೆ ತಿಳಿಸಿ, ಇಂದ್ರನ ಪೂಜೆಯನ್ನು ಮಾಡಗೊಡದೆ, ಗೋವು,



ಗೋವರ್ಧನ ಗಿರಿಯನ್ನು ಪೂಜೆ ಮಾಡಿಸಿದ್ದರಿಂದ ಇಂದ್ರನು ಸಿಟ್ಟಿಗೆದ್ದು ಧಾರಾಕಾರವಾಗಿ ಏಳು ದಿನಗಳವರೆಗೆ ಮಳೆ ಸುರಿಸುತ್ತಿರಲು ಕಂಗಾಲಾದ ಗೋಪಾಲಕಾರ ಮೊರೆ ಕೇಳಿ, ತನ್ನ ಕಿರಿ ಬೆರಳಿನಿಂದ ಗೋವರ್ಧನ ಗಿರಿಯನ್ನೆತ್ತಿ ಎಲ್ಲ ಗೋಪಾಲಕರನ್ನೂ, ಗೋವೃಂದವನ್ನು ಆ ಮಳೆಯಿಂದ ರಕ್ಷಿಸಿದಂಥ – ಶ್ರೀಕೃಷ್ಣಾವತಾರದ,[೧೬೭] – **ಶ್ರೀಹರಿಯು.**

(ಬಿ) ಒಂದು ದಿನ ದನಗಳ ಮೇಲೆ ಗಮನವಿಲ್ಲದೆ ಆಟವಾಡುತ್ತಿದ್ದಾಗ, ದನಗಳು ಹಂಚಿಕಡ್ಡಿಯ ವನಕ್ಕೆ ನುಗ್ಗಿದವು. ಬಾಲಕರು ಹುಡುಕಿದರೂ, ಕೂಗಿದರೂ ದನಗಳ ಸುಳಿವೇ ಸಿಗಲಾರದಾದಾಗ, ಶ್ರೀಕೃಷ್ಣನು ದನಗಳ ಹೆಸರು ಹಿಡಿದು ಕೂಗಲು ಅವು "ಹಂಬಾ" ಎಂದು ಪ್ರತಿಧ್ವನಿ ಮಾಡಿದವು. ಗೋಪಾಲರು ದನಗಳ ಮಂದೆ ಇದ್ದ ಸ್ಥಳಕ್ಕೆ ಬರುವಷ್ಟರಲ್ಲಿ ಕಾಡುಗಿಚ್ಚು ಹತ್ತಿತು. ಆಗ ಶ್ರೀಕೃಷ್ಣನು ಅವರೆಲ್ಲರನ್ನು ಕಣ್ಣು ಮುಚ್ಚಿಕೊಳ್ಳುವಂತೆ ಹೇಳಿ ಆ ಕಾಡುಗಿಚ್ಚನ್ನು ತಾನೇ ನುಂಗಿ, ಅವರನ್ನು ಗೋವೃಂದವನ್ನೂ ರಕ್ಷಿಸಿದಂಥ – ಶ್ರೀಕೃಷ್ಣಾವತಾರದ,[೧೬೮] – **ಶ್ರೀಹರಿಯು.**

**೨೩೦. ಫಣಿಮದಹರ**

ನಾಮ – ೭೫ "ನಾಗರಕ್ಷಕ" ನೋಡಿರಿ.

**೨೩೧. ಬಲಾನುಜಭರಿತ**

ಒಂದು ದಿನ ಎಂದಿನಂತೆ ದನಗಳನ್ನು ಮೇಯಿಸಲು ಕಾಡಿಗೆ ಹೋಗಿ ಬಾಲಕರು ಎರಡು ಪಕ್ಷಗಳನ್ನು ಮಾಡಿಕೊಂಡು ಚೆಂಡಾಟವಾಡುತ್ತಿದ್ದರು. ಆಗ, "ಪ್ರಲಂಬ" ನೆಂಬ ಅಸುರನು ಗೊಲ್ಲ ಬಾಲಕನಂತೆ ರೂಪತಾಳಿ ಬಂದು ಕೃಷ್ಣನ ಪಕ್ಷದಲ್ಲಿ ನಿಂತು ಬಲರಾಮನ ಜೋಡಿಯಲ್ಲಿ ಸೋತನು. ಅವನು ಬಲರಾಮನನ್ನು ಎತ್ತಿಕೊಂಡು ಹೊರಟನು. ಗೊತ್ತು ಪಡಿಸಿದ ಸ್ಥಳವನ್ನು ದಾಟಿ ಗಗನದಲ್ಲಿ ಹೊರಟನು. ಭೀತನಾದ ಬಲರಾಮನು ಕೃಷ್ಣನನ್ನು ಕೂಗಿಕೊಂಡನು. ಆಗ ಕೃಷ್ಣನು ಬಲರಾಮನಿಗೆ ಅವನಲ್ಲಿದ್ದ ಹರಿಯ ಶ್ವೇತಕೇಶಾವೇಶವನ್ನು, ಶೇಷನ ಸ್ವರೂಪವನ್ನು ಸ್ಮರಣೆಗೆ ತಂದನು. ಆಗ ಬಲರಾಮನು ಅವೇಶ ಬಲದಿಂದ ಪ್ರಲಂಬಾಸುರವನ್ನು ಕೊಂದು ಬಿಟ್ಟನು. ಇಂಥ ಬಲಿಷ್ಠ ಅಣ್ಣನಾದ ಬಲರಾಮನಿಂದ ಪ್ರೇಮ ಭರಿತನಾದಂಥ[೧೬೯] – **ಶ್ರೀಕೃಷ್ಣಾವತಾರದ – ಶ್ರೀಹರಿಯು.**

**೨೩೨. ವಿಕ್ರಮಮರುತ.**

ಮರುತಾವತಾರಿಯಾದ ಹನುಮಂತನಿಂದ ಅನನ್ಯ ಸೇವೆ ಪಡೆಯುವಲ್ಲಿ ವಿಕ್ರಮವನ್ನೆಸಗಿದ – ಶ್ರೀರಾಮಾವತಾರದ – **ಶ್ರೀಹರಿಯು.**

**೨೩೩. ಕಾಂಗೆಯರಘನೆರಲೇಶ್ವರ**

(ಎ) ಗೋಪಿಕಾಸ್ತ್ರೀಯರು ತಮ್ಮ ಬಟ್ಟೆಗಳನ್ನೆಲ್ಲ ಕಳಚಿಟ್ಟು ಯಮುನೆಯಲ್ಲಿ ಸ್ನಾನ ಮಾಡುತ್ತಿದ್ದಾಗ್ಗೆ, ಅವರ ಬಟ್ಟೆಗಳನ್ನೆಲ್ಲ ಅಪಹರಿಸಿ, ಅವರಿಗೆ ತೀರ್ಥಾದಿ ಪುಣ್ಯಸ್ಥಾನಗಳಲ್ಲಿ –

---

೧೬೭. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ಅಧ್ಯಾಯಗಳು – ೨೨,೨೩,೨೪,೨೫
೧೬೮. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ಅಧ್ಯಾಯ – ೧೭.
೧೬೯. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ಅಧ್ಯಾಯ ೧೬

ತೀರ್ಥಾಭಿಮಾನಿ ದೇವತೆಗಳ ಸಾನ್ನಿಧ್ಯವಿರುವದರಿಂದ – ಬತ್ತಲೆಸ್ನಾನ ಮಾಡಬಾರದೆಂಬ ದಾಗಿಯೂ ಪರಮಾತ್ಮನಲ್ಲಿ ಬಚ್ಚಿಡತಕ್ಕ ವಿಷಯವೇನೂ ಇರಬಾರದೆಂಬ ಸುಜ್ಞಾನವನ್ನೂ ದಯಪಾಲಿಸಿ, ಅವರನ್ನು ಪಾಪಮುಕ್ತಗೊಳಿಸಿ, ಮುಕ್ತಿಯೋಗ್ಯಗೊಳಿಸಿದ ಶ್ರೀಕೃಷ್ಣಾವತಾರದ,[೧೭೦] **– ಶ್ರೀ ಹರಿಯು.**

(ಬಿ) ಗೋಪಾಲಕರು ತಾವು ಹಸಿದಿರುವದಾಗಿ ತಿಳಿಸಲು, ಶ್ರೀಕೃಷ್ಣನು ಸಮೀಪದಲ್ಲಿಯೇ ಬ್ರಾಹ್ಮಣರು ಯಾಗಮಾಡುತ್ತಿದ್ದಾರೆ, ಅವರಿಗೆ ನಾನೂ ನನ್ನ ಅಣ್ಣ ಬಲರಾಮನೂ ಅನ್ನಬೇಡಿದ್ದೇವೆಂದು ಕೇಳಿ, ಅನ್ನಪಡೆದುಕೊಂಡು ಬರಲು ಹೇಳಿದನು. ಅದರಂತೆ, ಹೋಗಿ ಅವರನ್ನು ಕೇಳಲಾಗಿ, ದೇವತಾ ಸಮರ್ಪಣೆಯಾಗದೇ ಗೋವಳಿಗರಿಗೆ ಕೊಡಲಾಗದೆಂದು ಹೇಳಿಕಳುಹಿದರು. ಅದನ್ನು ಕೇಳಿ, ಅವರ ಮಡದಿಯರ ಹತ್ತಿರ ಹೋಗಿ ಕೇಳಿರೆಂದು ಪುನಃ ಕಳುಹಿದನು. ಅದರಂತೆ ಹೋಗಿ ಅವರ ಬಳಿ ಕೇಳಲು, ಅವರ ಗಂಡಂದಿರು ಬೇಡವೆಂದರೂ ಮಾಡಿದ ಅಡಿಗೆಯನೆಲ್ಲ ತಮ್ಮ ತಲೆಯ ಮೇಲೆ ಹೊತ್ತುಕೊಂಡು, ಶ್ರೀಕೃಷ್ಣ ಬಲರಾಮರು ಇದ್ದಲ್ಲಿಗೆ ಬಂದು, ಅವರೆಲ್ಲರಿಗೂ ಅನ್ನ ಉಣಬಡಿಸಿ, ತಮ್ಮ ಗಂಡಂದಿರೂ ಅಸೂಯೆ ಪಡುವಂತಹ ಪುಣ್ಯ ಗಳಿಸಿಕೊಂಡರು. ಹೀಗೆ ಶ್ರೀಕೃಷ್ಣಾವತಾರದಲ್ಲಿ ಹೆಂಗಳೆಯರ ಪಾಪ ನಾಶಗೊಳಿಸಿದಂಥ,[೧೭೧] **– ಶ್ರೀ ಹರಿಯು.**

**೨೩೪. ಲಕ್ಷ್ಮೀಶಾ**

ಶ್ರೀ ಲಕ್ಷ್ಮೀದೇವಿಯ ಈಶ – ಒಡೆಯ – ಪತಿಯಾದಂಥ – **ಶ್ರೀಹರಿಯು**

**೨೩೫. ವರದರಾಜ್**

ತನ್ನ ಭಕ್ತರಿಗೆ ವರಗಳನ್ನು ಕೊಡುವಲ್ಲಿ ರಾಜ್–ರಾಜ–ಶ್ರೇಷ್ಠನೆಂದರೆ ಹೆಚ್ಚಿನವನಾದಂಥ **–ಶ್ರೀಹರಿಯು.**

**೨೩೬. ಶಶಿವದನ**

ಚಂದ್ರನಂತೆ ಮನಸ್ಸಿಗೆ ಸಂತೋಷವನ್ನುಂಟು ಮಾಡಬಲ್ಲಂಥ ಮುಖಕಮಲವುಳ್ಳಂಥ **– ಶ್ರೀಹರಿಯು.**

**೨೩೭. ಷಕೃಷನಿರತ**

ಷ=ಷಡೂರ್ಮಿಗಳು, ಕೃಷ = ಕಡಿಮೆಮಾಡು, ನಿರತೆ = ಆಸಕ್ತ. (೧) ಹಸಿವು (೨) ನೀರಡಿಕೆ (೩) ಶೋಕ (೪) ಮೋಹ (೫) ರಾಗ ಹಾಗೂ (೬) ದ್ವೇಷ – ಈ ಆರು ಊರ್ಮಿಗಳು ಅಂದರೆ ದೊಡ್ಡ ಅಲೆಗಳನ್ನು ಶಮನ ಮಾಡುವಂಥ,[೧೭೨] **– ಶ್ರೀಹರಿಯು.**

**೨೩೮. ಸರ್ವಭುಕ್**

ಪ್ರಳಯಕಾಲದಲ್ಲಿ ಚರಾಚರಗಳನ್ನೆಲ್ಲ ತನ್ನ ಉದರದಲ್ಲಿ ಧರಿಸಿಕೊಂಡು "ಸರ್ವಭುಕ್" ಎನಿಸಿಕೊಂಡಂಥ – **ಶ್ರೀಹರಿಯು.**

೧೭೦. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ಇಪ್ಪತ್ತನೇಯ ಅಧ್ಯಾಯ.
೧೭೧. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ಇಪ್ಪತ್ತೊಂದನೇಯ ಅಧ್ಯಾಯ.
೧೭೨. "ಜ್ಞಾನಂ ಯದಾ ಪ್ರತಿನಿವೃತ್ತಗುಣೋರ್ಮಿಚಕ್ರ" । – ಭಾಗವತ ೨–೩–೧೨



**೨೩೯. ಯಜ್ಞಹವ್ಯೇಶ್ವರ.**

ಯಜ್ಞಯಾಗಾದಿಗಳಲ್ಲಿ ಹವಿಸ್ಸನ್ನು ಸ್ವೀಕರಿಸುವಲ್ಲಿ ಅಗ್ರಗಣ್ಯನಾದಂಥ – ಶ್ರೀಹರಿಯು.

**೨೪೦. ಸ್ವತೃಪ್ತ**

ತನ್ನಲ್ಲಿ ತಾನೇ ತೃಪ್ತಿಯನ್ನು ಪಡೆಯುವಂಥ – **ಶ್ರೀಹರಿಯು.**

**೨೪೧. ಸ್ವಪೂರ್ಣ**

ತಾನು ತನ್ನಂದಲೇ ಪರಿಪೂರ್ಣನಾಗಿರುವಂಥ – **ಶ್ರೀಹರಿಯು.**

**೨೪೨. ಲಕ್ಷ್ಮೀಧರ ನಾಮ – ೨೩೪ – "ಲಕ್ಷ್ಮೀಕಾ" ನೋಡಿರಿ**

ಲಕ್ಷ್ಮೀಪತಿಯಾದಂಥ – ಶ್ರೀಹರಿಯು.

**೨೪೩. ಯಜ್ಞಾಂಗ**

"ಯಜ್ಞೋದ್ದೇಶತ್ವಾತ್ ಯಜ್ಞಾಂಗಃ" – ಸತ್ಯಸಂಧರು

ಯಜ್ಞದ ಉದ್ದೇಶವುಳ್ಳ – "ಯಜ್ಞಾಂಗ" – ನಾದಂಥ[೧೭೩] – **ಶ್ರೀಹರಿಯು.**

ಯಜ್ಞಾಭಿಮಾನಿ ದೇವತೆಗಲು ಭಗವಂತನ ಇಂದ್ರಿಯಗಳಿಂದ ಅಭಿವ್ಯಕ್ತವಾದವರು; ಹಾಗೆಯೇ ಆಯಾ ಇಂದ್ರಿಯಗಳನ್ನು ಆಶ್ರಯಿಸಿಕೊಂಡಿರುವವರು. ಆದುದರಿಂದ ಅಂತಹ ಯಜ್ಞಾಭಿಮಾನಿಗಳು ಭಗವಂತನ ಅಂಗಗಳೆಂದು ಪರಿಗಣಿಸಲ್ಪಟ್ಟಿರುವರು.

ಅಂಗಾನಿಕ್ರತವೋ ಜಾತಃ...... ಭಾಗವತ ೬–೪–೪೬

ಶ್ರೀವಿಷ್ಣುಸಹಸ್ರನಾಮಸ್ತೋತ್ರಕ್ಕೆ – ಶ್ರೀಸಗ್ರಿರಾಘವೇಂದ್ರಾಉಪಾಧ್ಯಾಯರ – ಪ್ರತಿಪದಾರ್ಥ ಚಂದ್ರಿಕಾ – ಪುಟ ೨೯೩ – **"ಯಜ್ಞಾಂಗಃ"** ಇದಕ್ಕೆ

**ರಕ್ಷತ್ವಸೌ ಮಾಽಧ್ವನಿ ಯಜ್ಞಕಲ್ಪಃ**
**ಸ್ವದಂಷ್ಟ್ರ ಯೋನ್ನಿತಧರೋ ವರಾಹಃ ।**

– ನಾರಾಯಣ ವರ್ಮ – ೧೫ನೇ ಶ್ಲೋಕದ ಪೂರ್ವಾಧ.

ಯಜ್ಞಾನ್ ಸ್ವಾಂಗೇಭ್ಯಃ ಕಲ್ಪಯತೀತಿ – **"ಯಜ್ಞಕಲ್ಪ"** – ಇದಕ್ಕೆ – ಸತ್ಯಧರ್ಮೀಯಟೀಕೆ

ತನ್ನ ಅಂಗಗಳಿಂದ ಯಜ್ಞಗಳನ್ನು ಅಭಿವ್ಯಕ್ತಗೊಳಿಸಿರುವ ತನ್ನ ದಾಡೆಯಿಂದ ಭೂಮಿಯನ್ನು ಮೇಲಕ್ಕೆ ತಂದು ಸ್ಥಾಪಿಸಿರುವ ವರಾಹನು ದಾರಿಯಲ್ಲಿ ರಕ್ಷಣೆ ನೀಡಲಿ; ಶಾಸ್ತ್ರ ವಿರುದ್ಧ ಮಾರ್ಗದಲ್ಲಿ ಸಂಚರಿಸದಂತೆ ಮಾಡುವುದರ ಮೂಲಕ ರಕ್ಷಿಸಲಿ.

ಹೀಗೆ ಯಜ್ಞಾಂಗನಾದಂಥ – **ಶ್ರೀಹರಿಯು**

**ಕ**ಪಟ ನಾಟಕ **ಕಾಲಕಿ**ತವಭ – ।
ಯಪರಿಹರ **ಕೀ**ಚಕರಿಪು ಪ್ರಿಯ ।

೧೭೩. ಶ್ರೀವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಶ್ರೀಸತ್ಯಸಂದರ ಟೀಕೆ. ನಾಮ ೯೭೨ – :ಯಜ್ಞಾಂಗಃ" ಇದಕ್ಕೆ ಪುಟ ೧೧೨

**ಕು**ಪುರುಷಾಂತಕ **ಕೂದಕೇಶನೆ ಕೈವಲ್ಯಕೇಶ** ॥
ವಿಪುಲ**ಕೋಶನೆ ಕೌಶಿಕ** ಮುನೀಂದ್ರ ಮ – ।
ಖ ಪರಿಪೋಷಕ **ಕಂಬು**ಕಂಧರ ।
ತಪನ ಕೋಟಿಪ್ರಕಾಶ ಕಶ್ಯಪಸುತ ಸುರೇಂದ್ರನಮೋ ॥ ೧೭ ॥
(ಈ ನುಡಿಯಲ್ಲಿ – **ಕಃ** – ಅಕ್ಷರಮಾಲೆ ಉಳಿದಿದೆ)

**೨೪೪. ಕಪಟ ನಾಟಕ**

ಜೀವಾತ್ಮರ ಶರೀರದಲ್ಲಿ ಬಿಂಬನಾಗಿ ಇದ್ದುಕೊಂಡು, ಮನಸ್ಸು ಹಾಗೂ ಕರ್ಮೇಂದ್ರಿಯಗಳಿಗೆ ಮುಖ್ಯನಿಯಾಮಕನಾದ – ವಾಯುದೇವರ ದ್ವಾರ ಎಲ್ಲ ಕಾರ್ಯವನ್ನು ತಾನೇ ಮಾಡಿಸುತ್ತಿದ್ದು, ಜೀವಾತ್ಮರನ್ನು ಕರ್ಮಬಂಧನಕ್ಕೆ ಕಾರಣವಾಗಿ ಮಾಡಿದಂಥ ಕಪಟನಾಟಕ ಸೂತ್ರಧಾರಿಯಾದಂಥ – **ಶ್ರೀಹರಿಯು.**

**೨೪೫. ಕಾಲಕಿತವ ಭಯಪರಿಹರ**

ಕಾಲ=ಕಲಿಗಾಲ; ಕಿತವ = ದುಷ್ಟರು; ಭಯಪರಿಹಾರ = ಭಯವನ್ನು ನಷ್ಟಗೊಳಿಸುವ ದುಷ್ಟದುರ್ಯೋಧನಾದಿಗಳಿಂದ ಮಾನ್ಯೆದ್ರೌಪದಿಯ ವಸ್ತ್ರಾಪಹರಣ ಹಾಗೂ ದುರ್ವಾಸರಿಂದ ಅಕಾಲಭೋಜನ ಬೇಡಿಕೆಗಳಿಂದ ಪಾಂಡವರಿಗೆ ಒದಗಿದ ಭಯವನ್ನು ಪರಿಹರಿಸಿದ – ಶ್ರೀ ಕೃಷ್ಣಾವತಾರದ – **ಶ್ರೀಹರಿಯು.**

**೨೪೬. ಕೀಚಕ ರಿಪುಪ್ರಿಯ**

ಪಾಂಡವರು ವನವಾಸ ಮುಗಿಸಿಕೊಂಡು ಅಜ್ಞಾತವಾಸದಲ್ಲಿ ವಿರಾಟರಾಜನಲ್ಲಿ ಮೈಮರೆಸಿಕೊಂಡು ಇರುತ್ತಿರುವಾಗ್ಗೆ, ಸೈರಂಧ್ರಿಯಾಗಿದ್ದುಕೊಂಡ ದ್ರೌಪದಿಯ ರೂಪುಲಾವಣ್ಯಕ್ಕೆ ಮನಸೋತು ಅವಳಲ್ಲಿ ಕಾಮಾತುರನಾಗಿ, ಕಾಮತೃಪ್ತಿಗಾಗಿ ಶಸ್ತ್ರಾಗಾರಕ್ಕೆ ಬರಹೇಳಿದ ಕೀಚಕನನ್ನು ಸ್ತ್ರೀರೂಪ ಧರಿಸಿ ಶಸ್ತ್ರಾಗಾರಕ್ಕೆ ಹೋಗಿ ಭೀಮಸೇನನು ಆ ದುಷ್ಟನನ್ನು ಸಂಹರಿಸಿದನು. ಇಂಥ ಭೀಮಾವತಾರದ ವಾಯುದೇವರೇ ಶ್ರೀವಿಷ್ಣುವಿಗೆ ಅತ್ಯಂತ ಪ್ರಿಯರಾಗಿರುವರು. ಆದ್ದರಿಂದ ಕೀಚಕರಿಪು ಪ್ರಿಯನಾದಂಥ – **ಶ್ರೀಹರಿಯು.**

**೨೪೭. ಕುಪುರುಷಾಂತಕ**

ನಾಮ (೧) ೧೨೬ ಖಳಜನಭೀಷಣ (೨) ೪೦ ತಾಟಕಾಂತಕ ನೋಡಿರಿ.

**೨೪೮. ಕೂದಕೇಶನೆ – ಮೂಲದಲ್ಲಿ – ಕೂಬಕೇಶನೆ – ಉಂಟು.**

ಕೂ = ಭೂಮಿ

ಉ = ಉದಕ; ದ=ಕೊಡಲಕ್ಕೆ; ಕೊಡತಕ್ಕ – ಕಷ್ಟದಟ್ಟವಾದ ಮೇಘ.

ಭೂಮಿಗೆ ನೀರೆರೆಯುವ ಕಪ್ಪು ಹಾಗೂ ದಟ್ಟವಾದ ಮೇಘದಂತೆ ಕೂದಲುಳ್ಳ – ಶ್ರೀಕೃಷ್ಣಾವತಾರದ – **ಶ್ರೀಹರಿಯು.**

**೨೪೯. ಕೈವಲ್ಯಕೇಶ.**

ಕೈವಲ್ಯ + ಕಂ + ಈಶ. ಕಂ = ಸುಖ. ಕೈವಲ್ಯ = ಮೋಕ್ಷ



ಮೋಕ್ಷದಲ್ಲಿಯ ಸುಖಕ್ಕೂ ಒಡೆಯನಾದಂಥ – **ಶ್ರೀಹರಿಯು.**

**೨೫೦. ವಿಪುಪಕೋಶ**

ಅಸಂಖ್ಯಾತವಾದ ಧನದ್ರವ್ಯಾದಿ ಕೋಶಉಳ್ಳಂಥ – **ಶ್ರೀಹರಿಯು.**

**೨೫೧. ಕೌಶಿಕಮುನೀಂದ್ರಮಖಪರಿಪೋಷಕ**

ನಾಮ (೧) 39 – ಮುನಿನುತ (೨) 40 ತಾಜಕಾಂತಕ – ನೋಡಿರಿ.

**೨೫೨. ಕಂಬುಕಂಧರ**

ಶಂಖದಂತೆ ಮೂರು ರೇಖೆಗಳಿಂದ ಮುಕ್ತವಾದ ಕಂಠಉಳ್ಳಂಥ – **ಶ್ರೀಹರಿಯು.**

**೨೫೩. ತಪನಕೋಟಿಪ್ರಕಾಶ**

ಕೋಟಿಸೂರ್ಯರು ಒಮ್ಮೆಲೆ ಪ್ರಕಾಶಿಸಿದರೆ ಆಗುವಂತಹ ಪ್ರಕಾಶವುಳ್ಳಂಥ – **ಶ್ರೀಹರಿಯು.**

**೨೫೪. ಕಶ್ಯಪಸುತ**

ನಾಮ (೧) ೭೦ ತ್ರಿವಿಕ್ರಮ (೨) ೭೫ ವಾಮನ (೩) ೧೭೬ ಉಪೇಂದ್ರ ನೋಡಿರಿ.

(ಎ) ಪೃಥ್ವಿಸುತ್ತದಲ್ಲಿ ನಿಮ್ಮ ಉದರದಲ್ಲಿ ಪುಟ್ಟಿದೆ ।
ಅದಿರಕಶ್ಯಪರಲ್ಲಿ **ವಾಮನನಾಗಿ** ಪುಟ್ಟಿದೆ ॥ ೮೮ ॥
ಮೂರುಜನ್ಮದಲ್ಲಿ ನಿಮ್ಮ ಉದರದಲ್ಲಿ ಪುಟ್ಟಿದೆ ।
ಮುಕ್ತಿಗೆ ಯೋಗ್ಯಳಾದೆ ದೇವಕಿ ಎಂದ ॥ ೮೯ ॥

**ವಿ.ವಿ. ಶ್ರೀವಾದಿರಾಜಕೃತ – ಶ್ರೀಕೃಷ್ಣಬಾಲಲೀಲೆ – ಪೂರ್ವಾರ್ಥ – ನುಡಿ ೮೮. ೮೯** ಶ್ರೀಮಾನ್ ಲೋಕೂರರವರ **ಟಿಪ್ಪಣಿ – ನಿಮ್ಮ ಅಂದರೆ ವಸುದೇವದೇವಕಿಯರು.**

(ಬಿ) ಶ್ರೀವಿಷ್ಣುವು ದೇವಕಿಗೆ ನುಡಿದ – "ಸ್ವಾಯಂಭುವಮನ್ವಂತರದಲ್ಲಿ ನೀನು ಪ್ರಶ್ನೆ ನಿನ್ನ ಪತಿಸುತಪ; ೧೨ ಸಾವಿರ ವರ್ಷತಪಗೈದಿರಿ. ನಾನು ಪ್ರಸನ್ನನಾಗಲು ಮೂರು ಜನ್ಮಗಳಿಲ್ಲಿ, ನಾನೇ ಮಗನಾಗುವಂತೆ ವರ ಪಡೆದಿರಿ. ನಾನು ಪ್ರಶ್ನೆ ಗರ್ಭ–ಪ್ರಜೇಶ್ವರನಾಗಿಯೂ, ಮೂರನೇಯಸಲ ನಿಮ್ಮ ಮಗ – ಕೃಷ್ಣನಾಗಿಯೂ ಹುಟ್ಟಿರುವೆ. ಸಾಮಾನ್ಯ ರೂಪದಿಂದ ನನ್ನ ಜ್ಞಾನವಾಗದೆಂದು ಈ ನಿಜರೂಪದೋರಿದೆ. ನಿಮಗೆ ಕಂಸನ ಭಯ. ನನ್ನನ್ನು ಗೋಕುಲಕ್ಕೆ ಒಯ್ದು ಯಶೋದೆಗೆ ಹುಟ್ಟಿದ ಕನ್ನೆಯನ್ನು ಇಲ್ಲಿಗೆ ತನ್ನಿರಿ"[೧೭೪].

(ಸಿ) ಕಶ್ಯಪ – ಬ್ರಹ್ಮಪುತ್ರ ಮರೀಚಿಯಿಂದ ಜನಿಸಿದವ. ಯಜ್ಞಕ್ಕೆ ತಂದ ವರುಣನ ಗೋವುಗಳನ್ನು ಪತ್ನಿಯರಾದ ಅದಿತಿ, ದಿತಿಯರ ಮಾತು ಕೇಳಿ ಮರಳಿ ಕೊಡಲಿಲ್ಲ. ಈ ಕಾರಣದಿಂದ ಮನುಷ್ಯ ಜನ್ಮ – ಕಾರಾವಾಸಗಳ ಶಾಪ ಹೊಂದಿದ. ಅದಿತಿಯು ದಿತಿಯ ಮಕ್ಕಳನ್ನು ಸಂಹರಿಸಿ – ತನ್ನ ಮಕ್ಕಳೂ ಹುಟ್ಟಿದೊಡನೆ ಸಾಯುವಂತೆ ಶಾಪ ಹೊಂದಿದ್ದಳು. ಮೂವರೂ ವಸುದೇವ, ದೇವಕಿ ಹಾಗೂ ರೋಹಿಣಿಯರಾಗಿ ಜನ್ಮ ತಾಳಿದ್ದರು.[೧೭೫].

---

೧೭೪. ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧ ನಾಲ್ಕನೇಯ ಅಧ್ಯಾಯ.
೧೭೫. ಪುರಾಣನಾಮ – ಚೂಡಾಮಣಿ ಹಾಗೂ ವಾದಿರಾಜರ ಶ್ರೀಕೃಷ್ಣ ಬಾಲಲೀಲೆಗೆ – ಶ್ರೀ ಲೋಕೂರರ ಟಿಪ್ಪಣಿ

**೨೫೫. ಸುರೇಂದ್ರ**

ನಾಮ (೧) ಸುರಮಣಿ (೨)ಸುರೇಶ (೩) ೨೩ ವಾಮನ (೪) ೧೯೪ ಉಪೇಂದ್ರ – ನೋಡಿರಿ.

**ಖ**ರವಿದಾರಕ **ಖಾ**ದಿ ಪಂಚಕ – ।
ಭರದ**ಖಿ**ಳಗುರೋ ವೃಜಸ**ಖೀ**ಮನೋ – ।
ಹರ ಸು**ಖು**ರಪುಟ ಶೋಭಿತ ಖಡ್ಗ**ಖೂ**ರ್ಚ ಇಷುಪಾಣಿ ॥
ಸುರಸ**ಖೇ**ಳನ ಪರಸು**ಖೈ**ಕಶ – ।
ರೀರ ವಿಶಿಷ್ಟ ಸು**ಖೋ**ದಯಾಂಕುರ ।
ವರಸು **ಖೌ**ದಾ**ಖಂ**ಡ ಪರಶೋ ದುಃಖಹರಣ ನಮೋ ॥ ೧೮ ॥
(ಈ ನುಡಿಯಲ್ಲಿ –ಖಃ– ಅಕ್ಷರಮಾಲೆ ಉಳಿದಿದೆ)

**೨೫೬. ಖರವಿದಾರಕ**

ಶ್ರೀರಾಮಾವತಾರದ ವನವಾಸದಲ್ಲಿರುವಾಗ ಪಂಚವಟಿಯಲ್ಲಿರುವಾಗ್ಗೆ ಶೂರ್ಪನಖಿಯು ಶ್ರೀರಾಮ ಲಕ್ಷ್ಮಣರಿಗೆ ಮೋಹಿನಿ, ಲಕ್ಷ್ಮಣನಿಂದ ವಿದ್ರೂಪಗೊಂಡು ತನ್ನ ಅಣ್ಣನಾದ ಖರನೆಂಬ ರಾಕ್ಷಸನಿಗೆ ಹೇಳಲು ಆತನು ಸಿಟ್ಟಿನಿಂದ ಮೊದಲು ತನ್ನ ಹದಿನಾಲ್ಕು ಜನಸೇನಾ ಪತಿಗಳನ್ನು ಶೂರ್ಪನಖಿಯ ಜೊತೆಗೆ ಕಳುಹಿಸಿದನು. ಅವರು ಶ್ರೀರಾಮನೊಡನೆ ಯುದ್ಧಮಾಡಿ ಹತರಾದರು. ಇದನ್ನು ತಿಳಿದು ತನ್ನ ಹದಿನಾಲ್ಕು ಸಾವಿರ ರಾಕ್ಷಸಸೇನೆ ಸಮೇತ ಸೇನಾಪತಿಗಳಲ್ಲಿ ಪ್ರಮುಖರಾದ ತ್ರಿಶಿರ ಮತ್ತು ದೂಷಣರೊಡಗೂಡಿ ಖರನು ತಾನೇ ಶ್ರೀರಾಮಲಕ್ಷ್ಮಣರ ಕೂಡ ಯುದ್ಧ ಮಾಡಿ ಶ್ರೀರಾಮನಿಂದ ಹತನಾದನು. ಹೀಗೆ ಖರನನ್ನು ಸಂಹರಿಸಿದಂಥ.[೧೨೬]– ಶ್ರೀ ರಾಮಾವತಾರದ – **ಶ್ರೀಹರಿಯು.**

**೨೫೭. ಖಾದಿಪಂಚಕಭರದ**

**"ಖ"** ಅಂದರೆ ಆಕಾಶ; ಆಕಾಶವೇ ಮೊದಲಾದ ಪಂಚಮಹಾಭೂತಗಳನ್ನು ಸೃಷ್ಟಿಸಿ ಅವುಗಳಲ್ಲಿ ತುಂಬಿಕೊಂಡಿರುವಂಥ – **ಶ್ರೀಹರಿಯು.**

**೨೫೮. ಅಖಿಳಗುರೋ**

(೧) ಜೀವಾತ್ಮರನ್ನೊಳಗೊಂಡು ಸೃಷ್ಟಿಯಾದ ಎಲ್ಲವೂಗಳಿಗಿಂತಲೂ ಅತ್ಯಂತ ಶ್ರೇಷ್ಠನಾದಂಥ – **ಶ್ರೀಹರಿಯು.**

(೨) ಪರಮಾತ್ಮಾ ಮತ್ತು ಶ್ರಿಲಕ್ಷ್ಮೀದೇವಿಯರನ್ನು ಬಿಟ್ಟು ಉಳಿದ ಎಲ್ಲರಿಗೂ ಬ್ರಹ್ಮ – ವಾಯುದೇವರು ಗುರುಗಳಾದರೆ, ಅವರಿಗೂ ಗುರುವಾದಂಥ – **ಶ್ರೀಹರಿಯು.**

**೨೫೯. ವೃಜಸಖೀಮನೋಹರ**

ವ್ರಜ+ಸಖೀ+ಮನ+ಹರ

ಶ್ರೀಕೃಷ್ಣ, ತನ್ನ ಬಾಲಲೀಲೆಯಿಂದ ನಂದಗೋಪನ ವ್ರಜದಲ್ಲಿದ್ದ ಸಖೀಗೆಳತಿಯರ

೧೨೬. ವಾಲ್ಮೀಕಿ ರಾಮಾಯಣ



ಮನಸ್ಸು ಗೆದ್ದು, ಅವರ ಪ್ರೀತಿಯನ್ನು ತಾನು ಪಡೆದುಕೊಂಡು; ತನ್ನ ಪ್ರೀತಿಯನ್ನು ಅವರಿಗೆ ಹಂಚಿಕೊಟ್ಟಂಥ – **ಶ್ರೀಹರಿಯು.**

**೨೬೦. ಸುಖುರಪುಟಶೋಭಿತ**

ಹಯಗ್ರೀವಾವತಾರದಲ್ಲಿಯ ಪಾದಗಳ ಖುರಗಳು ಒಳ್ಳೆಯ ಶೋಭಾಯಮಾನವಾಗಿ ಉಳ್ಳಂಥ – **ಶ್ರೀಹರಿಯು.**

ಖಡ್ಗ ಖೂರ್ಚ ಇಷು ಪಾಣಿ.

**೨೬೧. ಖಡ್ಗಪಾಣಿ**

**"ನಂದಕ"** ಎಂಬ ಖಡ್ಗವನ್ನು ನಿತ್ಯಧರಿಸಿಕೊಂಡಿತುವವನು; ಅಥವಾ ನಂದಕ ರೂಪದಲ್ಲಿರುವ ದುರ್ಗಾದೇವಿಯನ್ನು ನಿತ್ಯ ನಿಯಂತ್ರಿಸುತ್ತಿರುವವನು.[೧೨೭]

ಇಂಥ ಖಡ್ಗವನ್ನು ಧರಿಸಿದಂಥ –ನಂದಕೀನಾಮಕನಾದ – **ಶ್ರೀಹರಿಯು.**

**೨೬೨. ಖೂರ್ಚಪಾಣಿ;** ಖೂರ್ಚ = ಢಾಲು

ಒಂದು ಕೈಯಲ್ಲಿ ಕತ್ತಿ; ಮತ್ತೊಂದರಲ್ಲಿ ಢಾಲು ಅಂದರೆ ಕಲ್ಲಾವಿಯ ಚರ್ಮ ಧರಿಸಿದಂಥ – **ಶ್ರೀಹರಿಯು.**

**೨೬೩. ಇಷುಪಾಣಿ**

ವಿದ್ಯಾ ಎನಿಸುವ ಲಕ್ಷ್ಮೀದೇವಿಯ ರೂಪವೇ ಶಾಂಗ್ರ ಬಿಲ್ಲಾಗಿದ್ದು; ಅಂತಹ ಬಿಲ್ಲಿಗೆ ಹೂಡತಕ್ಕ ಇಷು ಅಂದರೆ ಬಾಣಗಳನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಶಾಂಙ್ಗಧನ್ವಾ ಎನಿಸಿಕೊಳ್ಳುವಂತಹ,[೧೨೮] – **ಶ್ರೀಹರಿಯು.**

**೨೬೪. ಸುರಸಖೇಳನ**

ಗೋಪಿಯರೊಡನೆ ರಾಸಕ್ರೀಡೆಯನ್ನಾಡಿದಂಥ ಶ್ರೀಕೃಷ್ಣಾವತಾರದ – **ಶ್ರೀಹರಿಯು.**

**೨೬೫. ಪರಸುಖೈಕ ಶರೀರ ವಿಶಿಷ್ಟ**

ಪರಸುಖವೆಂದರೆ ಅಪ್ರಾಕೃತ ಸುಖ; ಇಂಥ ಅಪ್ರಾಕೃತ ಸುಖವೇ ವಿಶಿಷ್ಟ – ವೆಂದರೆ ಮುಖ್ಯ ಹಾಗೂ ಸರ್ವೋತ್ತಮವಾದ ಶರೀರವುಳ್ಳಂಥ – **ಶ್ರೀ ಹರಿಯು.**

**೨೬೬. ಸುಖೋದಯಾಂಕುರ**

ಸುಖದ ಉದಯಕ್ಕೆ ಅಂಕುರದಂತೆ ಇರುವ ಶಾಶ್ವತ ಸುಖರೂಪವಾದ ಮೋಕ್ಷಕ್ಕೆ ಸಾಧನೀ ಭೂತವಾದಂಥ – **ಶ್ರೀಹರಿಯು.**

**೨೬೭. ವರಸುಖೇದ**

ವರ + ಸುಖ + ದ

೧೨೭. ಖಡ್ಗಃ ದುರ್ಗಾತ್ಮಿಕಾ ಮಹಾಭಾರತ ತಾತ್ಪರ್ಯನಿರ್ಣಯ ೩–೭೭ ಹಾಗೂ ಇಂದ್ರಸುತಾವಕ **"ಸಂದಕಹಸ್ತು"** ದ್ವಾದಶಸ್ತೋತ್ರ

೧೨೮. ಶ್ರೀ.ವಿ.ಸ.ನಾ.ಸ್ತೋತ್ರಕ್ಕೆ – ಶ್ರೀಸಗ್ರಿ ರಾಘವೇಂದ್ರ ಉಪಾಧ್ಯಾಯ, ಉಡುಪಿ ಇವರ "ಪ್ರತಿಪದಾರ್ಥಚಂದ್ರಿಕಾ" ಪುಟ – ೩೦೦ ಹಾಗೂ ಮಹಾಭಾರತ ತಾತ್ಪರ್ಯ ನಿರ್ಣಯ ೩–೭೭

ಶ್ರೇಷ್ಠ + ಸುಖ + ಕೊಡತಕ್ಕ

ಹೆಚ್ಚಿನ ಸುಖವನ್ನು ದಯಪಾಲಿಸುವಂಥ – **ಶ್ರೀಹರಿಯು.**

**೨೬೮. ಅಖಂಡ ಪರಶೋ**

ಮತ್ತೊಬ್ಬರಿಂದ ಖಂಡಿಸಲು ಅಶಕ್ಯವಾದ ಪರಶು ಅಂದರ ಕೊಡಲಿಯನ್ನು ಧರಿಸಿದಂಥ – ಪರಶುರಾಮರೂಪೀ – **ಶ್ರೀಹರಿಯು.**

**೨೬೯. ದುಃಖಹರಣ**

"ಸಂಕಟ ಬಂದಾಗ ವೆಂಕಟರಮಣ" ವೆಂಬ ನಾಣ್ಣುಡಿಯಂತೆ ಸಂಕಟಬಂದವರು ಯಾರೇ ಆಗಲಿ ತನ್ನನ್ನು ನೆನೆದರೆ, ಅವರ ದುಃಖ ನಾಶಮಾಡುವಂಥ – **ಶ್ರೀಹರಿಯು.**

**ಗ**ಗನನಾಭಾ**ಗಾ**ದ ಚರಿತ **ಗಿ** – ।
ರಿಗಣಸೇವ್ಯ ಸುಗೀತಪ್ರಿಯ **ಗು** – ।
ಪ್ತಗುಣ **ಗೂ**ಢಧೀ **ಗೇ**ಹತ್ರಯಯುತ **ಗೈ**ದಿಹ **ಗೋ**ಗೋಪ್ತ ॥
ಸ್ವಗತ ಗಲರವ **ಗ**ವ್ಹರಾಂಕಿತ ।
ಸ್ವಗ**ಹ**ನೋತ್ತರ ಶುಭ ಸುಖಕರ ।
ಸುಗಮಸೂಕ್ಷ್ಮ ಸುದುರ್ಗಮಾಲಯ ವಿಜಿತರೋಷ ನಮೋ ॥ ೧೯ ॥
(ಈ ನುಡಿಯಲ್ಲಿ – **ಗಃ** – ಅಕ್ಷರಮಾಲೆ ಉಳಿದಿದೆ)

**೨೭೦. ಗಗನನಾಭಿ**

**"ನಾಭ್ಯಾ ಆಸೀದಂತರಿಕ್ಷಂ"** – ಪುರುಷಸೂಕ್ತ.

ಶ್ರೀವಿಷ್ಣುವಿನ ವಿರಾಟರೂಪದ ಪಾದದಿಂದ ಶಿರಃಪರ್ಯಂತ ಹದಿನಾಲ್ಕು ಲೋಕಗಳು ಅಡಗುವವೆಂದೂ, ಅದರಲ್ಲಿ ನಡದವರೆಗೆ ಅತಲಲೋಕವಾಗಿ ಅದರ ಮೇಲ್ಗಡೆಯ ಭೂಲೋಕದ ಗಗನಗಳು ಆ ವಿರಾಟರೂಪದ ನಾಭಿಯೆಂದು ಭಾಗವತದಲ್ಲಿ ವಿರಾಟರೂಪದ ವರ್ಣನೆಯಲ್ಲಿ ತಿಳಿಸಿದ್ದಾರೆ. ಇಂಥ ಗಗನಾಭಿಯಾದಂಥ – **ಶ್ರೀಹರಿಯು.**

**೨೭೧. ಅಗಾಧಚರಿತ.**

ದುಷ್ಟರ ಶಿಕ್ಷೆ, ಶಿಷ್ಟರ ಪಾಲನೆ, ತನ್ನನ್ನು ಒಯ್ದುವರನ್ನು ಹಾಗೂ ತನ್ನನ್ನು ಒದ್ದವರನ್ನೂ ಕೂಡ) ಕ್ಷಮಿಸುವಂಥ ಅಗಾಧ ಚರಿತೆಯುಳ್ಳಂಥ – **ಶ್ರೀಹರಿಯು.**

**೨೭೨. ಗಿರಿಗಣಸೇವ್ಯ**

ಕೈಲಾಸವಾಸಿಯಾದ ಶಿವನಿಂದಲೂ ಆತನ ಗಣಗಳಿಂದಲೂ ಸೇವಿತನಾದಂಥ – **ಶ್ರೀಹರಿಯು.**

ನಾಮ – **"ಶೈಲಗೃಹಸಂಯಮೀಗಣಾರ್ಚಿತ"** ನೋಡಿರಿ.

**೨೭೩. ಸುಗೀತಪ್ರಿಯ**

ಸ್ವರಬದ್ಧವಾದ ಸಾಮವೇದ ಪ್ರಿಯನಾದಂಥ – **ಶ್ರೀಹರಿಯು.**

**೨೭೪. ಗುಪ್ತಗುಣ**

ಗುಪ್ತ ಅಂದರೆ ಗೌಪ್ಯವಾದ ಗುಣಗಳುಳ್ಳಂಥ – **ಶ್ರೀಹರಿಯು.**



**೨೭೫. ಗೂಢಧೀ.**

ಗೂಢ ಅಂದರೆ ಸೂಕ್ಷ್ಮವಾದ ಧೀ ಅಂದರೆ – ಬುದ್ಧಿಯುಳ್ಳಂಥ – **ಶ್ರೀಹರಿಯು.**

**೨೭೬. ಗೇಹತ್ರಯಯುತ**

ಪರಮಾತ್ಮನ ಸ್ವರೂಪಾಂಶಗಳು ಯಾವವೆಂದರೆ – ಅನಂತಾಸನದಲ್ಲಿರುವವನು – ಅನಂತಾಸನನು. ಅವನಿಗೆ – **ಅಮೃತ** – ನೆಂದು ಹೆಸರು. ವೈಕುಂಠದಲ್ಲಿರುವ ವೈಕುಂಠ ನಾಮಕನು – **ಕ್ಷೇಮ** – ನೆಂದು ಕರೆಯಲ್ಪಡುವವನು. ಶ್ವೇತದ್ವೀಪದಲ್ಲಿರುವ ಪದ್ಮನಾಭನು – ಅಭಯ – ನೆನಿಸುವನು. ಹೀಗೆ, ವೈಕುಂಠ – ಶ್ವೇತದ್ವೀಪ – ಅನಂತಾಸನ ಈ ಮೂರೂ ವಾಸಸ್ಥಳವಾಗಿ ಉಳ್ಳಂಥ,[೧೭೯] – **ಶ್ರೀಹರಿಯು.**

**೨೭೭. ಗೈದಿಹಗೋಗೋಪ್ತ**

ಗೈದಿಹ + ಗೋ + ಗೋ + ಆಪ್ತ

ಹೊಂದಿದ ಅಥವಾ ಶರಣಾದ + ಆಕಳುಗಳು + ಆಕಳುಗಳ ಆಪ್ತ = ಕೃಷ್ಣ

ತನಗೆ ಹೊಂದಿದ ಅಂದರೆ ತನಗೆ ಶರಣಾದ ಆಕಳುಗಳ ರೂಪದಲ್ಲಿದ್ದ ದೇವತೆಗಳು ಹಾಗೂ ಋಷಿಗಳು ಇವರೆಲ್ಲರಿಗೆ ಆಪ್ತ ಅಂದರೆ ರಕ್ಷಕನಾದಂಥ ಶ್ರೀ ಕೃಷ್ಣಾವತಾರದ – **ಶ್ರೀಹರಿಯು.**

**೨೭೮. ಸ್ವಗತ**

ತನ್ನಲ್ಲಿ ತಾನೇ ಆಶ್ರಯಿಸಿಕೊಂಡಿರುವಂಥ,[೧೮೦] – **ಶ್ರೀ ಹರಿಯು.**

**೨೭೯. ಬಿ. ಗಲರವ;** ಗಲ = ಕಂಠ, ರವ = ವೇದ

ಕಂಠದಲ್ಲಿ ಯಾವಾಗಲೂ ವೇದವುಳ್ಳಂಥ – ಹಯಗ್ರೀವಾವತಾರದ,[೧೮೧]– **ಶ್ರೀಹರಿಯು.**

**೨೮೦. ಗವ್ಹರಾಂಕಿತ;** ಮೂಲದಲ್ಲಿ "ಗಂವರಾಂಕಿತ" ವೆಂದಿದೆ.

ಗವ್ಹರ = ಪರ್ವತ; ಅಂಕಿತ = ಹೆಸರುಳ್ಳ.

ಗೋವರ್ಧನವೆಂಬ ಪರ್ವತದ ಹೆಸರಿನಿಂದ ಅಂಕಿತನಾದಂಥ ಅಂದರೆ ಆ ನಾಮಾಭಿದಾನದಿಂದ ಹೆಸರಾದ ಶ್ರೀಕೃಷ್ಣಾವತಾರದ – **ಶ್ರೀ ಹರಿಯು.**

**೨೮೧. ಸುಗಹನೋತ್ತರ**

ಸು + ಗಹನ + ಉತ್ತರ

ಒಳ್ಳೆಯ + ತಿಳಿಯಲು ಅಸಾಧ್ಯವಾದ + ಶ್ರೇಷ್ಠ

ಸಾಕಲ್ಯೇನ ತಿಳಿಯಲು ಅಸಾಧ್ಯವಾಗಿ ಶ್ರೇಷ್ಠನಾದಂಥ – **ಶ್ರೀಹರಿಯು.**

**೨೮೨. ಶುಭ**

ಮನದಲ್ಲಿ ಮೂರುತಿ, ನಾಲಿಗೆ ಮೇಲೆ ಹರಿನಾಮ; ಯಾರಿಗೆ ಬರುವದೋ ಅವರಿಗೆಲ್ಲರಿಗೂ ಶುಭಪ್ರದನಾದಂಥ – **ಶ್ರೀಹರಿಯು.**

---

೧೭೯. **ಶ್ರೀಮದ್ಭಾಗವತ ದ್ವಿತೀಯಸ್ಕಂಧ** – ಆರನೇಯ ಅಧ್ಯಾಯ.
೧೮೦. ಬ್ರಹ್ಮದಾರಣ್ಯಕೋಪನಿಷತ್ತು ೧೮೧. ದ್ವಾದಶಸ್ತೋತ್ರ

**೨೮೩. ಸುಖಕರ**

ನಾಮ – ೧೫೬ ಸೌಖ್ಯಕರ – ನೋಡಿರಿ

**೨೮೪. ಸುಗಮ**

ತಾನು ಕುಳಿತದಲ್ಲಿಂದಲೇ ಎಲ್ಲಿ ಹೋಗಬೇಕೆಂದಲ್ಲಿಗೆ ಹೋಗಬಲ್ಲವನಾದ್ದರಿಂದ ಸು–ಗಮ–ನಾದಂಥ,[೧೮೧] – **ಶ್ರೀಹರಿಯು.**

**೨೮೫. ಸೂಕ್ಷ್ಮ**

ಸೂಕ್ಷ್ಮ ರೂಪದಿಂದ ಎಲ್ಲ ಜೀವಾತ್ಮರ ಶರೀರದಲ್ಲಿ ವಾಸವಾಗಿರುವಂಥ[೧೮೨] – **ಶ್ರೀಹರಿಯು.**

**೨೮೬. ಸುದುರ್ಗಮಾಲಯ**

ನಾಮ ೬೩೩ ಜಲಧಿಪುರಪತೆ – ನೋಡಿರಿ

**೨೮೭. ವಿಜಿತರೋಷ**

ರೋಷವೆಂದರೆ – ಸಿಟ್ಟು ಮೊದಲಾದ ದೋಷಗಳನ್ನು ಗೆದ್ದವ. ಭೃಗುಮುನಿಗಳು ತನ್ನ ಎದೆಗೆ ಒದ್ದಾಗ, ಸಿಟ್ಟಿಗೇಳದೆ ಅವರ ಪಾದ ಪೂಜೆ ಮಾಡಿ ಸತ್ಕರಿಸಿ ವಿಜಿತ ರೋಷನಾದಂಥ – **ಶ್ರೀಹರಿಯು.**

**ಘ**ಟಶ್ರವಣ **ಘಾ**ತಕ ಲ**ಘಿ**ಮಯುಕ್ ।
ಚಟುಲಗಾತ್ರಾ**ಘೀ**ಜನ ಹರಣ –।
ಪಟು ರ**ಘೂ**ದ್ವಯ ಪಿಶಿತಭೋಜಕ **ಘೂ**ಕಖದ್ಯೋತ ॥
ಕಠಿಣೌ**ಘೇ**ಂಟಮಾನ ಖಳಸಂ –।
ಕಟನಿವಾರಕ **ಘೋ**ರರೋಧಕರ ।
ನಟಕಾ**ಘೌ**ಘ ವಿದಾರ **ಘಂ**ಟಾಚಾಪ ದೀರ್ಘ ನಮೋ ॥ ೨೦ ॥
(ಈ ನುಡಿಯಲ್ಲಿ –**ಘೈ**–**ಘಃ**– ಅಕ್ಷರಮಾಲೆ ಉಳಿದಿವೆ)

**೨೮೮. ಘಟ ಶ್ರವಣ ಘಾತಕ**

ಘಟ = ಗಡಿಗೆ = ಕುಂಭ ; ಶ್ರವಣ = ಕಿವಿ. ಘಟಶ್ರವಣ = ಕುಂಭಕರ್ಣ ಕುಂಭಕರ್ಣನನ್ನು ಯುದ್ಧದಲ್ಲಿ ಕೊಂದಂಥ ಶ್ರೀರಾಮಾಮಾವತಾರದ – **ಶ್ರೀಹರಿಯು.**

**೨೮೯. ಲಘಿಮಯುಕ್**

ಅಣಿಮಾದ್ಯಷ್ಟೈಶ್ವರ್ಯ ಮುಕ್ತನಾದಂಥ – **ಶ್ರೀಹರಿಯು.**

**೨೯೦. ಚಟುಲಗಾತ್ರ**

ಚಟುಲ = ಸುಂದರವಾದ – ಗಾತ್ರ = ಶರೀರ

---

೧೮೧. ಶ್ರೀವಿಷ್ಣು ಸಹಸ್ರ ನಾಮ ಸ್ತೋತ್ರಕ್ಕೆ – ಉಡುಪಿ ಟೀಕೆ ನಾಮ –೧– "ವಿಶ್ವಂ" ಈ ನಾಮಕ್ಕೆ ಪುಟ–೪
೧೮೨. ಶ್ರೀ ವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಉಡುಪಿಟೀಕೆ, ನಾಮ – ೧೪, "ಪುರುಷ"ಕ್ಕೆ ಪುಟ ೫೮ – ೬೦.



ಸುಂದರವಾದ ಶರೀರವುಳ್ಳಂಥ – **ಶ್ರೀಹರಿಯು.**

**೨೯೧. ಅಘೀಜನಹರಣಪಟು**

ಅಘ = ಪಾಪ; ಅಘೀಜನ = ಬಹಳ ಪಾಪವುಳ್ಳ ಜನರು. ಬಹಳ ಪಾಪವುಳ್ಳ ಜನರಾದ – ಶಿಶುಪಾಲ, ದಂತ ವಕ್ರ, ಚಾಣೂರ, ಕಂಸ ಮುಂತಾದ ದುಷ್ಟ ಜನರನ್ನು ನಾಶಮಾಡುವಲ್ಲಿ ಕುಶಲನಾದಂಥ – ಶ್ರೀಹರಿಯು.

**೨೯೨. ರಘೂದ್ವಯ – ಮೂಲದಲ್ಲಿ – "ರಘುದ್ವ"**

ರಘುವಂಶೋದ್ಭನಾದ ದಶರಥನ ಪುತ್ರನಾಗಿಯೂ, ಶೇಷಾವತಾರಿಯಾದ ಲಕ್ಷ್ಮಣನ ಅಣ್ಣನಾಗಿಯೂ ಅವತರಿಸಿದ – ರಾಮಾವತಾರದ – **ಶ್ರೀಹರಿಯು.**

**೨೯೩. ಪಿಶಿತಭೋಜಕ ಘೂಕಖದ್ಯೋತ**

ಪಿಶಿತ + ಭೋಜಕ + ಘೂಕ + ಖದ್ಯೋತ

ಮಾಂಸ + ತಿನ್ನುವವರು + ಗೂಗಿ + ಸೂರ್ಯ

ಮಾಸಾಂಹಾರಿಗಳಾದ ರಕ್ಕಸರೆಂಬಗೂಗಿಗೆ ಸೂರ್ಯನಿದ್ದಂತೆ ಅಂದರೆ ಸೂರ್ಯದರ್ಶವಾದ ಕೂಡಲೆ ಗೂಗೆಗಳು ತಮ್ಮ ಕಣ್ಣು ಕಳೆದುಕೊಂಡು ಗೂಡು ಸೇರುವಂತೆ ರಕ್ಕಸರನ್ನು ಓಡಿಸುವಂಥ – **ಶ್ರೀಹರಿಯು.**

**೨೯೪. ಕಠಿಣಾಘೇಂಟಮಾನ;**

ಕಠಿಣ + ಅಘಾ + ಇಂಟಮಾನ

ಕಡು + ಪಾಪ + ದುರಭಿಮಾನಿ

**೨೯೫. ಖಳಸಂಕಟನಿವಾರಕ**

ಕಡುಪಾಪಿಯೂ ಮಹಾದುರಭಿಮಾನಿಯೂ ಆದ ದುರ್ಯೋಧನನಿಂದ ಪಾಂಡವರ ಮೇಲೆ ಬಂದಂಥ ಸಂಕಟಗಳನ್ನು ನಿವಾರಿಸಿದಂಥ – ಕೃಷ್ಣಾವತಾರದ – **ಶ್ರೀಹರಿಯು.**

**೨೯೬. ಘೋರರೋಧಕರ** ರೋಧಕರ = ನಿರೋಧ ಮಾಡು – ತಟೆಗಟ್ಟು

ದುಷ್ಟರ ಘೋರ ಕೃತ್ಯಗಳನ್ನು ತಡೆಯುವಂತ – **ಶ್ರೀಹರಿಯು.**

**೨೯೭. ನಟಕಾಘೌಘ ವಿದಾರ**

ನಟಕ + ಅಘ + ಔಘ

ದುಷ್ಟರು – ತಮ್ಮ ಪಾಪ ಕೃತ್ಯಗಳಿಂದಲೇ ನರ್ತಿಸುತ್ತಿರುವಂಥವರ ಸಮುದಾಯವನ್ನೇ ನಿವಾರಿಸಿದಂಥ – ರಾಮಾವತಾರದ – **ಶ್ರೀಹರಿಯು.**

**ಘಂಟಾಚಾಪದೀಪ್ತ**

**೨೯೮. ಘಂಟಾದೀಪ್ತ; ೨೯೯. ಚಾಪ ದೀಪ್ತ**

ಘಂಟೆ ಮೊದಲಾದ ಮಂಗಲಕರವಾದ ವಾದ್ಯವೃಂದದಿಂದಲೂ, ಧನುಸ್ಸು ಮೊದಲಾದ ಶಸ್ತ್ರಗಳಿಂದಲೂ ಪ್ರಕಾಶಮಾನನಾದಂಥ – **ಶ್ರೀಹರಿಯು.**

**ಚಕ್ಷುಷಾ**ಲಯ **ಚಾ**ರುಗಣ ಸೃತ್ –।
ಕುಕ್ಷೇ **ಚೀ**ರದ್ವಯಾ, **ಚು**ತೇತರ –।
ರಕ್ಷ **ಚೂ**ಡಾಚೇಷ್ಟ **ಚೈ**ದ್ಯಹರಾದ್ಯ **ಚೋ**ರಾರೇ ॥
ರಿಕ್ಷ ಜಾತಾ ವರ **ಚೌ**ರಾಕಿತಿ –।
ಲಕ್ಷ ಪ್ರತಿಮಾಧ್ಯಕ್ಷ **ಚಂ**ದನ।
ವೃಕ್ಷವನಸೃಗ್ಧರ ಋ**ಚಃ**ಸ್ವನಪ್ರಿಯ ಪುರುಷ ನಮೋ ॥ ೨೧ ॥
(ಈ ನುಡಿಯಲ್ಲಿ **–ಚಿ–ಚೆ–** ಅಕ್ಷರಮಾಲೆ ಉಳಿದಿವೆ)

**೩೦೦. ಚಕ್ಷುಷಾಲಯ**

ಚಕ್ಷುಸ್ = ಕಣ್ಣು ಆಲಯ = ಮನೆ

ಬಲಗಣ್ಣಿನಲ್ಲಿ ಭಗವಂತನಿದ್ದು ಪ್ರಕಾಶಿಸುವನು.[೧೮೩] ಆದ್ದರಿಂದ ಕಣ್ಣೇ ಮನೆಯಾಗುಳ್ಳವನಾದಂಥ – **"ವಿಶ್ವ"** ರೂಪೀಭಗವಂತನಾದ – **ಶ್ರೀಹರಿಯು.**

(೧) ಚಕ್ಷುಸ್ – ನಾಮಕನಾಗಿ ಚಕ್ಷುರಿಂದ್ರಿಯದಲ್ಲಿ ಉದ್ಗೀಥ ಪ್ರತಿಪಾದ್ಯ **"**ನಾರಾಯಣ**"** ನಿರುವನು.[೧೮೪]

(೨) ಚಕ್ಷುರಿಂದ್ರಿಯಸ್ಥ ವಾಯು – ಸರಸ್ವತಿಯರಲ್ಲಿಯೂ ವಿಷ್ಣುವು ಇರುವನು. (ಆ ಸರಸ್ವತಿ – ಪ್ರಾಣರೂ ವಿಷ್ಣುವನ್ನು ಋಗ್ವೇದ – ಸಾಮವೇದಗಳಿಂದ ಸ್ತುತಿಸುವರು. ಆ ವಿಷ್ಣುವು ಪಾಪವನ್ನು ಮೀರಿರುವದರಿಂದ ಮತ್ತು ಉತ್ಕೃಷ್ಟವೂ ಆದ್ದರಿಂದ – **"**ಉತ್**"** – ಎನಿಸುವನು; ಎಂದು ಮುಂತಾಗಿ ಸತ್ತತ್ವದಲ್ಲಿದೆ) ಸೂರ್ಯನಲ್ಲಿ ಇರುವ ಮತ್ತು ಕಣ್ಣಿನಲ್ಲಿ ಇರುವ ಆ ವಿಷ್ಣುವು ನೀರನ್ನು ಹೀರುವ ನಾಳದಲ್ಲಿರುವ, ಅಂದರೆ ಬಾಡದಿರುವ ಕನ್ನೈದಿಲೆಯಂತೆ ಕಣ್ಣುಗಳ್ಳುಳ್ಳವನು.[೧೮೫]

**೩೦೧. ಚಾರುಗಣಸೃತ್‌ಕುಕ್ಷೇ;** ಸೃತ್ = ವಾಸುವಾಗಿರು.

ತನ್ನ ಹೊಟ್ಟೆಯಲ್ಲಿ ಉತ್ತಮ ಗಣಗಳಾದ – ಬ್ರಹ್ಮ – ರುದ್ರಾದಿಗಳಿಂದೊಡಗೂಡಿ ಸಕಲ ಸೃಷ್ಟಿಯನ್ನೇ ವಾಸವಾಗಿಟ್ಟು ಕೊಂಡಂಥ – **ಶ್ರೀಹರಿಯು.**

**೩೦೨. ಚೀರದ್ವಯ**

ನಾರು ಬಟ್ಟೆಗಳನ್ನುಟ್ಟು ವನವಾಸಕ್ಕೆ ಹೋದ – ರಾಮಾವತಾರದ – **ಶ್ರೀಹರಿಯು.**

**೩೦೩. ಅಚುತೇತರರಕ್ಷ**

ಅ + ಚುತ + ತರ + ರಕ್ಷ

ಇಲ್ಲದ + ಚ್ಯುತಿ + ಶ್ರೇಷ್ಠ + ರಕ್ಷಿಸು.

---

೧೮೩. ಋಗ್ ಭಾಷ್ಯ – ೨–೪

೧೮೪. ಶ್ರೀಸರ್ವಮೂಲ ಗ್ರಂಥಗಳು – ಛಾಂದೋಗ್ಯೋಪನಿಷತ್ತು ಖಂಡ ೧೧ ಪುಟ ೯೮.

೧೮೫. ಶ್ರೀ ಸರ್ವಮೂಲ ಗ್ರಂಥಗಳು – ಛಾಂದೋಗ್ಯೋಪನಿಷತ್ತು ಖಂಡೇ ಪು – ೪೮



ತಮ್ಮ ಆನಂದಾದಿಗಳಿಗೆ ಚ್ಯುತಿ ಇರದಂಥ ಶ್ರೇಷ್ಠರಾದ ಬ್ರಹ್ಮ – ವಾಯು ಮೊದಲಾದವರನ್ನೂ ರಕ್ಷಿಸುವಂಥ – **ಶ್ರೀಹರಿಯು.**

**೩೦೪. ಚೂಡಾಚೇಷ್ಟ**

ತನ್ನ ಶಿಖೆ – ಜುಟ್ಟು – ಕಟ್ಟಿಕೊಂಡು ಅದಕ್ಕೆ ನವಿಲು ಗರಿ ಹಾಗೂ ಪುಷ್ಪಾದಿ – ಗಳಿಂದ ಅಲಂಕೃತನಾದಂಥ – ಬಾಲಕೃಷ್ಣನಾದ – **ಶ್ರೀಹರಿಯು.**

**೩೦೫. ಚೈದ್ಯಹರ**

ಚೇದಿ ಅರಸನಾದ ಶಿಶುಪಾಲನನ್ನು ಸಂಹರಿಸಿದಂಥ – **ಶ್ರೀಹರಿಯು.**

ನಾಮ – **"ದೂಷಣಾಂತಕ"** ನೋಡಿರಿ.

**೩೦೬. ಆದ್ಯಚೋರಾರೆ**

ಆದ್ಯಚೋರರೆಂದರೆ – ಮಧು–ಕೈಟಭರು. ಅವರ ವೈರಿಯಾದಂಥ – **ಶ್ರೀಹರಿಯು.**

**೩೦೭. ರಿಕ್ಷಜಾತಾ**

ಸಜ್ಜನರ ರಕ್ಷಣೆಗಾಗಿಯೇ ಅವತರಿಸಿದ – **ಶ್ರೀಹರಿಯು.**

ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ಚದುಷ್ಕೃತಾಮ್।
ಧರ್ಮ ಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇಯುಗೇ ॥ – ಅ.೪.ಶ್ಲೋ – ೮. – **ಶ್ರೀಮದ್ಭಗವದ್ಗೀತಾ**

**೩೦೮. ವರಚೌರ**

**ನಾರಾಯಣೋನಾಮ ನರಃ ಪೃಥಿವ್ಯಾಯ ಪ್ರಸಿದ್ಧ ಚೋರಃ।**

ಪ್ರಸಿದ್ಧ – ಕೃಷ್ಣಾಂಮೃತ ಮಹಾರ್ಣವ

ಅನೇಕ ಜನ್ಮಗಳ ಪಾಪಗಳನ್ನು ತನ್ನ ಸ್ಮರಣೆ ಮಾತ್ರದಿಂದಲೇ ಕದ್ದು ಅಂದರೆ ಸುಟ್ಟು ನಷ್ಟ ಮಾಡುವಂಥ – **ಶ್ರೀಹರಿಯು.**

**೩೦೯. ಅಶೀತಿಲಕ್ಷ ಪ್ರತಿಮಾಧ್ಯಕ್ಷ**

ಎಂಭತ್ತು ಲಕ್ಷ ಜೀವರಾಶಿಗಳಲ್ಲಿ ನಿಂತು ವ್ಯಾಪಾರ ಮಾಡಿಸುವಂಥ – **ಶ್ರೀಹರಿಯು.**

ಅಧ್ಯಕ್ಷಶ್ಚ ಅನುಮಂತಶ್ಚ ಭರ್ತಾ ಭೋಕ್ತಾ ಮಹೇಶ್ವರಃ। – **ಶ್ರೀಮದ್ಭಗವದ್ಗೀತಾ**

**೩೧೦. ಚಂದನ ವೃಕ್ಷವನಸೃಗ್ಧರ**

ಚಂದನ ವೃಕ್ಷದಂತಹ ಸುಗಂಧ ಪುಷ್ಪಗಳ ವನಮಾಲೆಯನ್ನು ಧರಿಸಿದಂಥ – ಶ್ರೀಕೃಷ್ಣಾವತಾರದ – **ಶ್ರೀಹರಿಯು.**

ಆಪಾದಂಬಿನಿ ಮಾಲಾ – ವನಮಾಲೇತಿಚೋಚ್ಯತೆ।

**೩೧೧. ಋಚಃಸ್ವತಪ್ರಿಯ ಪುರುಷ**

ಋಚಃ = ವೇದ

ವೇದಪ್ರಿಯನಾದಂಥ – ಹಯಗ್ರೀವರೂಪೀ – **ಶ್ರೀಹರಿಯು.**

**ಛತ್ರಛಾಯೋಚ್ಛ್ಟಿ** ಪ ಜ– ।
ಗತ್ ಶಿಕ್ಷಕ ಮುರನೃಪ**ಭೇ**ದಿನಿ – ।
ರ್ವ**ಭೈ**ಕ ಚರ ನಮೋದ್ರೇಕ ಮಾಂದ್ಯಹರಾ ॥
ಶತ್ರುಭಿ**ಚೌ**ಃರ್ಯ ಭೂಷಿತ ।
ಸತ್ರಭೂಕ್**ಛಂ**ದೋಮಯಾತ್ಮಕ ।
ಪುತ್ರ ಪೌತ್ರ ಪ್ರಪೌತ್ರ ಶೋಭಿತ ಸ್ವಚ್ಛವರ್ಣ ನಮೋ ॥ ೨೨ ॥
(ಈ ನುಡಿಯಲ್ಲಿ – **ಛೀ, ಛೂ, ಛೋ, ಛಃ**– ಅಕ್ಷರಮಾಲೆ ಉಳಿದಿವೆ)

**೩೧೨. ಛತ್ರಛಾಯೋಚ್ಛಿಪ ಜಗಚ್ಛಿಕ್ಷಕ**

ರಾಜ್ಯವನ್ನು ಇಚ್ಛಿಸುವ – ಕಂಸ –ಜರಾಸಂಧ ಮೊದಲಾದ ದುಷ್ಟ ಜಗತ್ತನ್ನು ಶಿಕ್ಷಿಸಿದಂಥ – ಕೃಷ್ಣಾವತಾರದ – **ಶ್ರೀಹರಿಯು.**

**೩೧೩. ಮುರನೃಪಭೇದಿ ಮುರ + ನೃಪ + ಭೇದಿ**

ಸೇನಾಪತಿ ಮುರನ ಅರಸನಾದ ನರಕಾಸುರನನ್ನು ಸಂಹರಿಸಿದಂಥ – **ಶ್ರೀಹರಿಯು.**

ನಾಮ – ೭೮ ಶಕ್ರಅರ್ಚಿತ – ಪದಾಬ್ಜ – ನೋಡಿರಿ

**೩೧೪. ನಿರ್ವಭೈಕಚರ**

ಯಾರಭೀತಿಯಿಲ್ಲದೆ ನಿರ್ಭೀತನಾಗಿ ಸಂಚರಿಸುವಂಥ – **ಶ್ರೀಹರಿಯು.**

**೩೧೫. ಉದ್ರೇಕಹರಾ**

**೩೧೬. ಮಾಂದ್ಯ ಹರಾ**

ಉದ್ರೇಕ ಹಾಗೂ ಮಾಂದ್ಯಅಂದರೆ ದಡ್ಡತನ ಮೊದಲಾದ ದೋಷಗಳನ್ನು ನಷ್ಟಮಾಡುವಂಥ – **ಶ್ರೀಹರಿಯು.**

**೩೧೭. ಶತ್ರುಭಿಚ್ಛೌರ್ಯಭೂಷಿತ**

ಶತ್ರುಭಿತ್ + ಶೌರ್ಯ+ಭೂಷಿತ

ಶತ್ರುಗಳಾದ ದೈತ್ಯ – ದಾನವರೊಡನೆ ಕಾದಾಡುವಾಗ ಒಳ್ಳೇ ಶೌರ್ಯದಿಂದ ಭೂಷಿತನಾದಂಥ – **ಶ್ರೀಹರಿಯು.**

**೩೧೮. ಸತ್ರಭುಕ್**

ಅಗ್ನಿಯಲ್ಲಿ ಹಾಕಿದ ಹವಿಸ್ಸನ್ನು ಮುಖ್ಯವಾಗಿ ತೆಗೆದುಕೊಳ್ಳುವವನು – ಶ್ರೀಹರಿಯೇ; ಆದ್ದರಿಂದ ಸತ್ರಭುಕ್ ಎಂದೆನಿಸಿಕೊಳ್ಳುವಂಥ,[೧೮೬] – **ಶ್ರೀಹರಿಯು.**

**೩೧೯. ಛಂದೋಮಯಾತ್ಮಕ**

ಛಂದೋಮಯ – ಸರಾಗ–ವಾಗಿ ವೇದಗಳಿಂದ ಹೊಗಳಿಸಿಕೊಂಡು ಛಂದೋಮಯಾತ್ಮಕನೆಂದೆನಿಸಿಕೊಳ್ಳುವಂಥ – **ಶ್ರೀಹರಿಯು.**

೧೮೬. ಬೃಹದಾರಣ್ಯಕೋಪನಿಷತ್ ಭಾಷ್ಯ –೭–೬–೧೪೮.



**೩೨೦. ಪುತ್ರಶೋಭಿತ** ಪುತ್ರ = ಮಗ

**೩೨೧. ಪೌತ್ರಶೋಭಿತ** ಪೌತ್ರ = ಮೊಮ್ಮಗ

**೩೨೨. ಪ್ರಪೌತ್ರ ಶೋಭಿತ** ಪ್ರಪೌತ್ರ = ಮರಿಮಗ

ಚತುರ್ಮುಖ ಬ್ರಹ್ಮನನ್ನು ಮಗನಾಗಿಯೂ, ರುದ್ರದೇವರನ್ನು ಮೊಮ್ಮಗನಾಗಿಯೂ, ಗಣಪತಿ – ಷಣ್ಮುಖರನ್ನು ಮರಿಮಕ್ಕಳನ್ನಾಗಿಯೂ ಪಡೆದು ಶೋಭೆಯುಳ್ಳವನಾದಂಥ – **ಶ್ರೀಹರಿಯು.**

**೩೨೩. ಸ್ವಚ್ಛವರ್ಣ**

ಭಗವಂತನು ಸತ್ವಗುಣವನ್ನು ಪ್ರವರ್ಧಿಸಿ ರಕ್ಷಣೆ ನೀಡಲು ಬಯಸಿದಾಗ್ಗೆ ಶುಕ್ಲ ರೂಪವುಳ್ಳ ಹಯಗ್ರೀವಾದಿ ರೂಪ ಧರಿಸುವಂಥ,[೧೮೭] – **ಶ್ರೀಹರಿಯು.**

ಜಯತರಾನನ **ಜಾಡ್ಯ**ಹರ **ಜಿ**ತ – ।
ಭಯನಿಚಯ ಜೀವೌಘಹರ ಕ್ಷಯ – ।
ಜೀರ್ಯಜಾಸುರ ಜನಕನುತ ಸುರ**ಜೇ**ಷ್ಠ **ಜೈ**ನದಿಹನ್ ॥
ಲಯ ಜಲಾಶ್ರಯ **ಜೋ**ತಿರ್ಮಯತನೋ – ।
ವ್ಯಯ ವೃಔಕಸ ವಂದ್ಯ **ಜಂ**ಬುನಿ – ।
ಲಯ ಕುವಲಯಾಯುಜ ಆನಂದ ಬಲಗ ನಮೋ ॥ ೨೩ ॥
(ಈ ನುಡಿಯಲ್ಲಿ –**ಜು–ಜೂ–ಜಃ**– ಅಕ್ಷರಮಾಲೆ ಉಳಿದಿವೆ)

**೩೨೪. ಜಯತರಾನನ.** ಜಯತರ + ಆನನ = ಮುಖ

ಯಾರ ಮುಖ ಕಂಡರೆ ಜಯವು ನಿಶ್ಚಿತವೋ ಅಂಥ – **ಶ್ರೀಹರಿಯು.**

**ಯತ್ರ ಯೋಗೇಶ್ವರಃ ಕೃಷ್ಣಃ ಯತ್ರಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿಃ ಧ್ರುವಾ ನೀತಿರ್ಮತಿರ್ಮಮ ॥**

**– ಶ್ರೀಮದ್ಭಗವದ್ಗೀತೆ ಅಧ್ಯಾಯ – ೧೮ ಶ್ಲೋಕ ೭೮.**

**೩೨೫. ಜಾಡ್ಯಹರ**

ನಾಮ ೩೧೬ – **"ಮಾಂಧ್ಯಹರಾ"** ನೋಡಿರಿ.

**೩೨೬. ಜತಿಭಯನಿಚಯ**

ಭಯ = ಅಂಜಿಕೆ; ನಿಚಯ = ಸಮೂಹ; ಜಿತ = ಗೆದ್ದವ

ಅಂಜಿಕೆಗಳ ಸಮೂಹವನ್ನೇ ಗೆದ್ದಂಥ – ಶ್ರೀಹರಿಯು.

**೩೨೭. ಜೀವೌಘಹರ**

ಜೀವ+ಔಘ = ಸಮುದಾಯ + ಹರ = ಹರಣ, ನಾಶಮಾಡುವವ

ಕಲ್ಪಾಂತ್ಯದಲ್ಲಿ ಜೀವ ಸಮೂಹವನ್ನು ತನ್ನಲ್ಲಿ ಸೇರಿಸಿಕೊಳ್ಳುವಂಥ – ಶ್ರೀಹರಿಯು.

೧೮೭. ಶ್ರೀವಿಷ್ಣುಸಹಸ್ರನಾಮಸ್ತೋತ್ರಕ್ಕೆ – ಉಡುಪಿಟೀಕೆ ಹಾಗೂ ನಾಮ – ೫೮ "ಕೃಷ್ಣಃ" ಕ್ಕೆ ಪುಟ ೧೯೮

**೩೨೮. ಕ್ಷಯಜೀರ್ಯಜಾಸುರ ಜನಕ**

ಕ್ಷಯಜೀರ್ಯಜಾಸುರ + ಜನಕನುತ

ಕ್ಷಯಾದಿಗಳಿಗೆ ನಿಯಾಮಕನಾದ – ಜ್ವರ – ನೆಂಬ ಅಸುರವನ್ನು ಜೀರ್ಣಿಸುವ ವೈಷ್ಣವ – ಜ್ವರ – ನೆಂಬವನನ್ನು ನಿರ್ಮಿಸಿದಂಥ ಶ್ರೀಕೃಷ್ಣಾವತಾರದ,[೧೮೮] – **ಶ್ರೀಹರಿಯು.**

**೩೨೯. ಸುರಜೇಷ್ಠ**

ಮಹಿದಾಸರೂಪೀ ಭಗವಂತನು ಲಕ್ಷ್ಮೀದೇವಿಗೆ ಹೀಗೆ ಸಂದೇಶಿಸಿರುವನು – "ದೇವತೆಗಳಲ್ಲಿ ನಾನು ವ್ಯಾಪ್ತಾ; ಅವರೆಲ್ಲ ನನ್ನಲ್ಲಿ ಆಶ್ರಿತರು; ಅವರೆಲ್ಲ ನನ್ನ ಆದೇಶಾನುಸಾರವಾಗಿಯೇ ತಮ್ಮ ತಮ್ಮ ಪದವಿಗಳನ್ನು ಪಡೆದುಕೊಂಡು, ನನ್ನಿಂದಲೇ ಪೋಷಿಸಲ್ಪಡುವರಲ್ಲದೆ; ಅವರ ಬಲ, ಚಟುವಟಿಕೆ, ಜ್ಞಾನಾದಿಗಳು ಹಾಗೂ ಅವರ ಇರುವಿಕೆ ನನ್ನ ಅಧೀನವಾಗಿವೆ"[೧೮೯]

"ಸಕಲದೇವತೆಗಳೂ ಭಗವಂತನಲ್ಲಿ ಆಶ್ರಿತರು; ಯಾರೊಬ್ಬರೂ ಅವನನ್ನು ಅತಿಕ್ರಮಿಸಿ ನಡೆಯುವುದಿಲ್ಲ".[೧೯೦]

ಹೀಗೆ ಸುರರೆಲ್ಲರಿಗೂ ಹೆಚ್ಚಿನವನಾದಂಥ,[೧೯೧] – **ಶ್ರೀಹರಿಯು.**

**೩೩೦. ಜೈನದಿಹನ್**

**ಜಿನನೆಂಬ ದನುಜ ಸಜ್ಜನಕರ್ಮವನು ಮಾಡೆ**
**ಜನಿಸಿ ಅವರಲ್ಲಿ ದುರ್ಬುದ್ಧಿ । ದುರ್ಬುದ್ಧಿ ಕವಿಸಿದ**
**ವಿನುತ ಶ್ರೀಬುದ್ಧ ದಯವಾಗೋ –**

– ಶ್ರೀಜಗನ್ನಾಥದಾಸರ – "ತತ್ವಸುವ್ವಾಲಿ" ದಶಾವತಾರಸ್ತುತಿ ಪದ ೧೮೩

ಬುದ್ಧಾವತಾರದ ಕಥಾ ಸಂದರ್ಭ ಮತ್ತು ಮಹಿಮೆಗಳನ್ನು ಶ್ರೀಮದಾನಂದತೀರ್ಥ ಭಗವತ್ಪಾದರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ವರ್ಣಿಸಿದ ಪ್ರಕಾರ –

ತ್ರಿಪುಹಾಸುರರಲ್ಲಿ ಮುಖ್ಯವಾದ ದೈತ್ಯನು ಶುದ್ಧೋದನನೆಂಬ ನಾಮದಿಂದ ಭೂಮಿಯಲ್ಲಿ ಹುಟ್ಟಿದನು. ಅವನಿಗೆ – "ಜಿನ" ನೆಂದೂ ಹೆಸರು. ಗಯಾಕ್ಷೇತ್ರದಲ್ಲಿ – (ಗಯಾ ನಾಮಕಳಾದ ಪತ್ನಿಯಲ್ಲಿ) ಇವನಿಗೊಂದು ಶಿಶು ಜನಿಸಿತು; ಅದನ್ನು ದೂರದಲ್ಲಿ ಹಾಕಿ; ಶ್ರೀವಿಷ್ಣುವು ಶಿಶುರೂಪದಿಂದ ಅಲ್ಲಿ ಮಲಗಿದನು. ಇದನ್ನರಿಯದ ಜಿನಾದಿಗಳು ತಮ್ಮ ಶಿಶುವೆಂದೇ ತಿಳಿದು ಜಾತಕರ್ಮ ಮೊದಲಾದ ವೇದೋಕ್ತ ಸಂಸ್ಕಾರವನ್ನು ಮಾಡಲುದ್ಯುಕ್ತರಾದರು. ಅದನ್ನು ಕಂಡು ಆ ಶಿಶುರೂಪೀ–ವಿಷ್ಣು–ಅಪಹಾಸದಿಂದ ನಕ್ಕನು. ಇದರಿಂದ ಆಶ್ಚರ್ಯಚಕಿತರಾದ ಜಿನಾದಿ ಬಂಧುಗಳು, ಏಕೆ ನಗುವಿಯೊಂದು ಶಿಶುವನ್ನು ಕೇಳಲು, ತಾನು ಬುದ್ಧನೆಂದು ಹೇಳಿಕೊಂಡಿತು. ನಿತ್ಯಜ್ಞಾನ ಸ್ವರೂಪನಾದ ವಿಷ್ಣುವಿಗೆ ಅದು ಅನ್ವರ್ಥನಾಮವೇ ಆಗಿದೆ. ಮತ್ತು ಬುದ್ಧ ದರ್ಶನವನ್ನು ಉಪದೇಶ ಮಾಡಿತು. ಅವರು ತನ್ನ ಉಪದೇಶದಲ್ಲಿ ವಿಶ್ವಾಸ ಮಾಡದಿರುವದನ್ನು ಕಂಡು, ಬುದ್ಧನು ತನ್ನ ಇಚ್ಛಾನುಸಾರವಾಗಿ

---

೧೮೮. ಹರಿವಂಶ ಹಾಗೂ ಮಹಾಭಾರತ ತಾತ್ಪರ್ಯನಿರ್ಣಯ

೧೮೯. ಐತರೇ ಯೋಪನಿಷದ್ – ೧–೬–೧ ಹಾಗೂ ಭಾಷ್ಯ. ೧೯೦. ಕಾಠೋಪನಿಷತ್ತು – ೨–೧–೯

೧೯೧ ಶ್ರೀವಿಷ್ಣುಸಹಸ್ರನಾಮ ಸ್ತೋತ್ರಕ್ಕೆ – ಉಡುಪಿಟೀಕೆ ಹಾಗೂ ನಾಮ – ೪೯ – ಅಮರಪ್ರಭುಃ" ಕ್ಕೆ ಪುಟ – ೧೭೦



ತನ್ನ ಮೇಲೆ ರುದ್ರಾದಿ ದೇವತೆಗಳು ಪ್ರಯೋಗಿಸಿದ ಶೂಲಾದಿ ಆಯುಧಗಳನ್ನೂ, ತಾನೇ ಆಕಾಶಮಾರ್ಗದಿಂದ ತರಿಸಿದ ಚಕ್ರಾಯುಧವನ್ನು ವಶಮಾಡಿಕೊಂಡು, ಆ ಚಕ್ರವನ್ನು ಆಸನವನ್ನಾಗಿ ಮಾಡಿಕೊಂಡು ಶಿಶುವಾಗಿಯೇ ಕುಳಿತುಕೊಂಡನು. ಜಿನಾದಿಗಳಿಗೆ ಬುದ್ಧನಲ್ಲಿ ವಿಶ್ವಾಸ ಹುಟ್ಟಿ, ಮಹೇಶ್ವರ – ವಿಷ್ಣುಗಳಿಗಿಂತ ಅಧಿಕನೆಂದು ತಿಳಿದು, ಅವನ ಉಪದೇಶವನ್ನು ಅಂಗೀಕರಿಸಿ, ವೇದೋಕ್ತ ಕರ್ಮಗಳನ್ನು ಪರಿತ್ಯಾಗ ಮಾಡಿ, ವೇದಾದಿಗಳಲ್ಲಿ ಅಪ್ರಾಮಾಣ್ಯ ಬುದ್ಧಿಯನ್ನು ಹೊಂದಿದರು. ತನ್ನ ಆ ಉಪದೇಶ ವಾಕ್ಯಗಳ ಅರ್ಥವನ್ನು ಹೀಗೆ ಗ್ರಹಿಸಿದರೆಂದು ದೇವತೆಗಳಿಗೆ ವಿವರಿಸಿ, ಅವರಲ್ಲಿ ಸಂಶಯಾದಿಗಳು ಹುಟ್ಟದಂತೆ ಅನುಗ್ರಹಿಸಿದನು.

ಜಿನನು ಬುದ್ಧೋಪದೇಶವನ್ನೇ ಆಶ್ರಯಿಸಿದ್ದರೂ, ಶಬ್ದಾಂತರಗಳಿಂದ ತನ್ನ ಮತನೆಂದು ಅಲ್ಪ ಪ್ರಭೇದಗಳುಳ್ಳ ಮತಾಂತರ ಪ್ರವರ್ತಿಸಿದನು.

ಹೀಗೆ ಜಿನಾದಿಗಳನ್ನು ವೇದಕರ್ಮಗಳಲ್ಲಿ ಅವಿಶ್ವಾಸ ಹುಟ್ಟಿಸಿ, ಅವರಿಂದ ಆ ಮಾರ್ಗತ್ಯಜಿಸುವಂತೆ ಮಾಡಿದಂಥ – **ಶ್ರೀಹರಿಯು.**

**೩೩೧. ಲಯಜಲಾಶ್ರಯ**

ಲಯಜಲದಲ್ಲಿ ಆಲದೆಲೆಯ ಮೇಲೆ ಮಲಗಿದಂಥ – **ಶ್ರೀಹರಿಯು**

ನಾಮ – ೧೪೭ ಶ್ರೀ ವಟಪರ್ಣತಲ್ಪ; ಹಾಗೂ ೧೯೭ ಅಪುಶಯನ – ನೋಡಿರಿ

**೩೩೨. ಜ್ಯೋತಿರ್ಮಯ;**

**೩೩೩. ತನೋವ್ಯಯ**

"ಮನ್ಮಥ – ಮನ್ಮಥ" ನೆನಿಸಿರುವ ಭಗವಂತನ ಸ್ವರೂಪಾತ್ಮಕವಾದ ಸೌಂದರ್ಯ ಸರ್ವಾತಿಶಯವಾದದ್ದು. ಅವನ ಮೂಲರೂಪದಲ್ಲಷ್ಟೇ ಅಲ್ಲದೆ, ಪ್ರತಿಯೊಂದು ಅವತಾರದಲ್ಲೂ ಇರುವಂತಹದ್ದು; ರಾಮ–ಕೃಷ್ಣ – ಮೋಹಿನಿ ಮೊದಲಾದ ಅವತಾರಗಳಲ್ಲಿ ಅದು ವ್ಯಕ್ತಪಡಿಸಿರುವಂಥ,[೧೯೨] – **ಶ್ರೀಹರಿಯು.**

**೩೩೪. ವೃಜೌಕಸವಂದ್ಯ**

ಭಗವಂತನು ಕೃಷ್ಣಾವತಾರದ ಸಂದರ್ಭದಲ್ಲಿ ರೈವತ ಪರ್ವತದಲ್ಲಿ ರುಕ್ಷಿಣೀ ಸಮೇತನಾಗಿ ದಿವ್ಯಾಸನದಲ್ಲಿ ಕುಳಿತು ಸಕಲರಾಜರಿಂದಲೂ ಗೌರವಿಸಲ್ಪಟ್ಟನು.[೧೯೨ಅ] ಹೀಗೆ ಪರಿವಾರದೊಂದಿಗೆ ವಂದಿತನಾದ – ಕೃಷ್ಣಾವತಾರದ – **ಶ್ರೀಹರಿಯು.**

**೩೩೫. ಜಂಬುನಿಲಯ**

ಮೇರು ಪರ್ವತದಲ್ಲಿದ್ದ ಜಂಬೂವನದಲ್ಲಿ ಜಂಬೂಫಲದ ರಸದಿಂದ ಹರಿಯುವ ಜಂಬೂನದಿಯ ಸ್ವರ್ಗಸಮಾನ ಪ್ರದೇಶದಲ್ಲಿ ವಾಸವಾದಂಥ – **ಶ್ರೀಹರಿಯು.**

**೩೩೬. ಕುವಲಯಾಯುಜ** ಕುವಲಯ + ಆಯು +ಜ

---

೧೯೨. ಶ್ರೀಮದ್ಭಾಗವತ ತಾತ್ಪರ್ಯ ನಿರ್ಣಯ ೩–೧೭–೨೮ & ೩–೨೯–೨೯ ಹಾಗೂ ಶ್ರೀವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೨೨ "ಶ್ರೀಮಾನ್" ಕ್ಕೆ ಪುಟ. ೮೬

೧೯೨ಅ. ಮಹಾಭಾರತ ತಾತ್ಪರ್ಯನಿರ್ಣಯ – ೨೦–೬೩–೬೪ ಹಾಗೂ ಶ್ರೀವಿಷ್ಣು ಸಹಸ್ರನಾಮಸೋತ್ರಕ್ಕೆ – ಉಡುಪಿ ಟೀಕೆ ನಾಮ – ೫೫ – "ಸ್ಥವಿರೋಧೃವಃ" ಕ್ಕೆ ಪುಟ ೧೮೩

ಕುವಲಯಾಪೀಡವೆಂಬ ಕಂಸನಮದ್ದಾನೆಯ ಆಯುಷ್ಯವನ್ನೇ ಅಪಹರಿಸಿ – ಅಂದರೆ ಕೊಂದು ಅದನ್ನು ಜಯಿಸಿದಂಥ – ಕೃಷ್ಣಾವತಾರದ – **ಶ್ರೀಹರಿಯು.**

**೩೩೭. ಆನಂದಬಲಗ**

ಯಾವಾಗಲೂ ಆನಂದಾತಿಶಯದಲ್ಲಿಯೇ ಇದ್ದು; ಅದೇ ತನ್ನ ಬಲವಾಗಿಉಳ್ಳಂಥ – **ಶ್ರೀಹರಿಯು.**

**ಝುಡತಿಚರ** ಝುಂಝಾಮರುಚ್ಚರ ।
ಉಡುಪಚರ **ಝಿಲ್ಲಿಕ** ವನೇಚರ ।
ಔಷಧೀಚರ **ಝೀರಿಕಸುರ**–ಝುಂಟಾವಲಯ ಝೂಣೀಚರ ॥
ಒಡನೆ ಝೋಂಕರಿಸುತಲಿ ಝ್ಯುಡಿಯು ।
ದಡದಿ ಝೋಂಡಿಯೋಳ್ಚರಿಸಿ ಝೌಂಕರಿ – ।
ಸ್ಯೊಡಲಿನೊಳು ಝುಂಕಾರಪೂರ್ಣ ಝಷಪತಿಯೇ ನಮೋ ॥ ೨೪ ॥
(ಇದರಲ್ಲಿ –ಝು– ಅಕ್ಷರಮಾಲೆ ಉಳಿದಿದೆ)

ಝುಂಕಾರ ವಾಚ್ಯ ಶಬ್ದ ಸಮುದಾಯದಲ್ಲಿಯೂ ಇದ್ದುಕೊಂಡಂಥ – **ಶ್ರೀಹರಿಯು.**

**೩೩೮. ಝುಡತಿಚರ**

"ತದ್ಧಾವತೋ ಅನ್ಯಾನತ್ಯೇತಿ" ಎಂಬ ಈಶಾವಾಸ್ಯ ಉಪನಿಷತ್ತಿನ ಪ್ರಕಾರ ವೇಗವಾಗಿ ಸಂಚರಿಸುವಂಥ – **ಶ್ರೀಹರಿಯು.**

**೩೩೯. ಝುಂಜಾಮರುಚ್ಚರ;** ಝುಂ ಝಾ ಮರುತ್ + ಚರ.

ಮಳೆಸಹಿತ ಗಾಳಿಯಲ್ಲಿಯೂ ಇದ್ದು ಸಂಚರಿಸುವಂಥ – **ಶ್ರೀಹರಿಯು.**

**೩೪೦. ಉಡುಪಚರ**

ಉಡು ಎಂದರೆ ನಕ್ಷತ್ರಗಳು. ಅವುಗಳನ್ನು ಪ ಅಂದರೆ ಪಾಲಿಸುವವನಾದಂಥ ಚಂದ್ರನು; ಅವನೊಡನೆ ಚರ ಎಂದರೆ ಸಂಚರಿಸುವವ; ಅಂದರೆ ಚಂದ್ರಾಂತರ್ಗತನಾದಂಥ – **ಶ್ರೀಹರಿಯು.**

**೩೪೧. ಝುಲ್ಲಿಕವನಚರ**

ಝಿಲ್ಲಿಕ ವನವೆಂದರೆ ಜಿರುಂಡಿಗಳಿಂದ ಕೂಡಿದ ನಿರ್ಜನ; ಅಂಥವನದಲ್ಲಿಯೂ ಸಂಚರಿಸುವಂಥ – **ಶ್ರೀಹರಿಯು.**

**೩೪೨. ಔಷಧೀಚರ**

ಔಷಧಿಗಳಲ್ಲಿಯೂ ಇದ್ದು; ರೋಗ ಶಮನ ಮಾಡತಕ್ಕಂಥ – **ಶ್ರೀಹರಿಯು.**

**೩೪೩. ಝೀರಿಕಸುರ ಝುಂಟಾವಲಯ**

ಝೀರಿಕನಾದದಿಂದ ಆರಾಧಿಸುವ ಸುರಸಮುದಾಯಕ್ಕೆ ಭೂಷಣಪ್ರಾಯನಾದಂಥ – **ಶ್ರೀಹರಿಯು.**

**೩೪೪. ಝೀಣೀಚರ**



**೩೪೫. ಒಡನೆ ಝೋಂಕರಿಸುತಲಿ ಝ್ಯುಡಿಯದಡದಿ ಝೋಂಡಿಯೋಳ್ಚರಿಸಿ**

ಒಡನೆ – ಬೇಗನೆ; ಝೋಂಕರಿಸುತಲಿ = ಧ್ವನಿಮಾಡುತ್ತಾ ಇರುವ ಝ್ಯುಡಿಯ ದಡದಿ = ನದಿಯ ದಂಡೆಯಲ್ಲಿ; ಝೋಂಡಿಯೋಳ್ = ಭ್ರಮರದಂತೆ ಚರಿಸಿ = ಸಂಚರಿಸಿ

ಬೇಗನೆ ಧ್ವನಿ ಮಾಡುತ್ತಿರುವ ನದಿಯದಂಡೆಯಲ್ಲಿ ಭ್ರಮರದಂತೆ ಸಂಚರಿಸಿದಂಥ ಕೃಷ್ಣಾವತಾರದ – **ಶ್ರೀಹರಿಯು.**

**೩೪೬. ಝೌಂಕರಿಸ್ಯೊಡಲಿನೊಳು**

ಝೌಂಕರಿಸೊ+ಒಡಲಿನೊಳು

ವೇದಘೋಷಗಳಿಂದ ಧ್ವನಿಗೈಯ್ಯುವ ಬ್ರಾಹ್ಮಣರ ಹೊಟ್ಟೆಯಲ್ಲಿ ವೇದವ್ಯಾಸರಾಗಿ ಹುಟ್ಟಿದಂಥ – **ಶ್ರೀಹರಿಯು.**

**೩೪೭. ಝುಂಕಾರ ಪೂರ್ಣ**

ಝುಂಕಾರವಾಚ್ಯ ಪರಿಪೂರ್ಣನಾದಂಥ – **ಶ್ರೀಹರಿಯು.**

**೩೪೮. ಝಷಪತಿ : ಝಷ – ಮತ್ಸ – ಮೀನ**

ಮತ್ಸಾವತಾರಿಯಾದಂಥ – **ಶ್ರೀಹರಿಯು.**

ಪಟಲಹೈಮಕಟಾಹಭಂಜಕ – ।
ನಿಟಿಲದೃಕ್ **ಟೀಕಾರ್ಥ**ಸುಪ್ರಿಯ – ।
**ಕಟು**ಮತಿಘ್ನ ಭವೇಢ್ಯ **ಟಂ**ಕಾನ್ವಿತ ಕರಾಬ್ಜೇಶಾ ॥
ಜಠರ ನೃಪ ಸುಕು**ಠಾ**ರ ಧರಸತ್ ।
ಕಠಿಣಕರ ಸುಕ**ಠೋ**ರ ಯೋಧನ ।
ಮಠವಿಕಾರ ಶರೌಂಘಸಂಹರ ನೃಹರೇಭ್ಯಗುಜ ನಮೋ ॥ ೨೫ ॥
(ಈ ನುಡಿಯಲ್ಲಿ (೧) **ಟೂ,ಟೆ,ಟೈ,ಟೋ,ಟೇ,ಟಃ_ಹಾಗೂ (೨) ಠೀ,ಠು,ಠೂ,ಠೆ,ಠೈ,ಠೇ,ಠಂ,ಠಃ_** ಅಕ್ಷರಮಾಲೆ **ಉಳಿದಿವೆ)**

**೩೪೯. ಪಟಲಹೈಮ**

ಚಿನ್ನದಂತಹ ಕಣ್ಣಿನ ಪೊರೆಯುಳ್ಳ – **ಶ್ರೀಹರಿಯು.**

**೩೫೦. ಕಟಾಹಭಂಜಕ**

ನಾಮ (೧) ೭೦ ತ್ರಿವಿಕ್ರಮ (೨) ವಿಸ್ಫೋಟಕಚಾಹ (೩) ಬಾಹ್ಯಾಂಬುಪ್ರವಾಹಕ – ನೋಡಿರಿ.

ಪಟಲಹೈಯಕಟಾಹಭಂಜಕ – (ಸಂಯುಕ್ತ ಪದಮಾಡಿಕೊಂಡಾಗ) ಪಟಲದಂತಿರುವ ಬ್ರಹ್ಮಾಂಡ ಕಟಾಹವನ್ನು ಭೇದಿಸಿದಂಥ – ತ್ರಿವಿಕ್ರಮಾವತಾರಿಯಾದ – **ಶ್ರೀಹರಿಯು.**

**೩೫೧. ನಿಟಿಲದೃಕ್**

ನೃಸಿಂಹಾವತಾರದಲ್ಲಿ ಅಗ್ನಿಯೇ ಮೂರನೇಯ ಕಣ್ಣಾಗಿಉಳ್ಳಂಥ – **ಶ್ರೀಹರಿಯು.**

ನೃಸಿಂಹಾವತಾರದಲ್ಲಿ ಭಗವಂತನ ಕ್ರೋಧದಿಂದ ಭಯಂಕರವಾದ ಬಲಗಣ್ಣಿನ ತುದಿಯಿಂದ ಹೊರಟ ಅಗ್ನಿಕಣಕ್ಕೆ ಸಿಲುಕಿ ಚತುರ್ಮುಖ ರುದ್ರಾದಿಗಳೂ ಭಸ್ಮರಾಗುವರು; ಎಂದು ಸಖಸ್ತುತಿಯಲ್ಲಿ ನಿರೂಪಿಸಲಾಗಿದೆ.[೧೯೩]

**೩೫೨. ಟೀಕಾರ್ಥಸುಪ್ರಿಯ**

ಬ್ರಹ್ಮಸೂತ್ರಗಳಿಗೆ ಭಾಷ್ಯ – ಟೀಕೆ – ರಚಿಸಿದ ಶ್ರೀಮದಾನಂದತೀರ್ಥರಿಗೆ ಸುಪ್ರೀತನಾದಂಥ – ವೇದವ್ಯಾಸರೂಪಿ – **ಶ್ರೀಹರಿಯು.**

**೩೫೩. ಕಟುಮತಿಘ್ನ**

ತಮಸ್ಸು (ಅಜ್ಞಾನ), ಮೋಹ (ವಿಪರೀತಜ್ಞಾನ), ಮಹಾಮೋಹ (ಅದರಲ್ಲಿ ಆಗ್ರಹ) ತಾಮಸ್ರ (ದುರಾಗ್ರಹದ ಪರಿಣಾಮವಾಗಿ – ಮಿಥ್ಯಾಜ್ಞಾನ ಹಾಗೂ ನಿಂದಕರಲ್ಲಿಯ ಕ್ರೋಧ) ಅಂಧತಾಮಿಸ್ರ (ಯಥಾರ್ಥಜ್ಞಾನಿಗಳಲ್ಲಿ ಅಂದರೆ ಸುಜ್ಞಾನಿಗಳಲ್ಲಿ ಆಮರಣಾಂತ ಬದ್ಧದ್ವೇಶ) ಹೀಗೆ ಅವಿದ್ಯೆಯ ಐದು ಪ್ರಕಾರವಾಗಿರುವುದು. (ಪಂಚಪರ್ವವುಳ್ಳದ್ದು ಅವಿದ್ಯೆಯು) ತಾಮಸಾಹಂಕಾರ ವಿಕಾರಗಳಾದ – ಅಂದರೆ ಅವುಗಳಿಂದ ಹುಟ್ಟಿದ – ಶಬ್ದ, ಸ್ಪರ್ಶ, ರೂಪ, ರಸ, ಗಂಧ–ಗಳೆಂಬ ತನ್ಮಾತ್ರೆಗಳಿಗೆ ಅಭಿಮಾನಿಗಳಾದ ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯರೆಂಬ ಉಪಪ್ರಾಣರು ಈ ಪಂಚವಿಧ ಅವಿದ್ಯೆಗಳ ಪ್ರೇರಕರು. ಇವರಲ್ಲಿ ತಮೋಗುಣಾಭಿಮಾನಿಯಾದ ದುರ್ಗಾರೂಪಳಾದ ಲಕ್ಷ್ಮೀದೇವಿಯೂ, ಅವಳಲ್ಲಿ ಕ್ರಮದಿಂದ ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕ, ಸಹಸ್ರೋಲ್ಕಗಳೆಂಬ ಪರಮಾತ್ಮನ ರೂಪಗಳೂ ಇರುತ್ತಿದ್ದು ಮುಕ್ತಿಯೋಗ್ಯ ಜೀವರಿಗೆ ಅವಿದ್ಯೆಗಳನ್ನು ತೊಲಗಿಸಿ ಸುಜ್ಞಾನವನ್ನು; ಕೊಡುವಂಥ,[೧೯೪] – **ಶ್ರೀಹರಿಯು.**

**೩೫೪. ಭವೇಡ್ಯ;** **ಭವ+ಈಡ್ಯ (ರುದ್ರ+ಸ್ತುತ್ಯ)**

ರುದ್ರದೇವರಿಂದಸ್ತುತ್ಯನಾದಂಥ – **ಶ್ರೀಹರಿಯು.**

**೩೫೫. ಟಂಕಾನ್ವಿತ ಕರಾಬ್ಜೇಶಾ**

**"ಟಂಕೆ"** ಎಂಬ ಆಯುಧವನ್ನು ಹಿಡಿದ ಕರಕಮಲವುಳ್ಳಂಥ – ಈಶ ಅಂದರೆ ಒಡೆಯನಾದಂಥ – **ಶ್ರೀಹರಿಯು.**

**೩೫೬. ಜಠರನೃಪ** – ಹೊಟ್ಟೆಬಾಕನಾದ ಕಾರ್ತವೀರ್ಯಾಜುನನೆಂಬ ಅರಸು – ಅಗ್ನಿಹೋತ್ರಿ ಎಂಬ ಆಕಳನ್ನು ತೆಗೆದುಕೊಂಡು ಹೋಗಲು,

**(೩೫೭) ಸುಕುಠಾರಧರ** – ಅಚ್ಛೇದ್ಯವಾದ ಕೊಡಲಿಯನ್ನು ಹಿಡಿದುಕೊಂಡು,

೧೯೩. ವಾಯುಸ್ತುತಿಯ ಮೊದಲಿನ ಎರಡು – "ನಖಸ್ತುತಿಯ" ಶ್ಲೋಕಗಳು.

೧೯೪. ಶ್ರೀ ಜಗನ್ನಾಥದಾಸಾರ್ಯ ವಿರಚಿತ – "ತತ್ವಸುವ್ವಾಲಿ" ಗೆ ಟಿಪ್ಪಣಿಗ್ರಂಥ – ಶ್ರೀಹರಿದಾಸ ಭಾರತೀ ಗ್ರಂಥಮಾಲೆಯ – ವಿಜಯಾಂಕರತ್ನ – ೭" ರ ಪುಟ ೨೦೮ ಹಾಗೂ ೨೦೯.



**(೩೫೮) ಸತ್‌ಕಠಿಣಕರ** – ಒಳ್ಳೇ ಕಠಿಣವಾದಂಥ ಕೈಗಳುಳ್ಳ ಆ

**೩೫೯. ಸುಕಠೋರಯೋಧನ** – ಒಳ್ಳೇ ಕಠೋರವಾಗಿ ಯುದ್ಧ ಮಾಡತಕ್ಕ ಕಾರ್ತವೀರ್ಯಾರ್ಜುನನ.

**(೩೬೦). ಮತವಿಕಾರ ಕರಂಘ್ರಿ** – ವಿಕಾರ ಪ್ರದವಾದ ಬಾಣಗಳ ಸಮೂಹವನ್ನು ನಾಶಮಾಡಿ

**೩೬೧. ಸಂಹರ** – ಅವನನ್ನು ಕೊಂದಂಥ –

**೩೬೨. ನೃಹರೇ** – ನರಸಿಂಹಾಭಿನ್ನನಾದಂಥ

**೩೬೩. ಭೃಗುಜ** – ರೇಣುಕಾಂಬಾ ಮತ್ತು ಭೃಗುವಂಶದ ಜಮದಗ್ನಿಮುನಿಯಲ್ಲಿ ಅವತರಿಸಿದ ಪರಶುರಾಮಾವತಾರದ – **ಶ್ರೀಹರಿಯು.**

ಕುಂಡ ಲೀಶ ಷಡಾಸ್ಯ ಸನ್ನುತ – ।
ಪಂಡಿತಾರ್ಚಿತ ಪಂಡುರಾಂಬಕ – ।
ಮಂಡಲೇಶ ಬಿಡೌಜನುತ ನೃವಿಡಂಬನ ಚರಿತ್ರ ॥
ಪಂಢರಾಪುರ ರಾಜ ವಿಠಲಾ ।
ಖಂಡಮತಿ ಪಾಖಂಡ ದೂಷಕ ।
ಷಂಡಾಮರಕ ಪ್ರಭುಘ್ನ ಮುನಿ ಪುಂಡರೀಕವರದ ನಮೋ ॥ ೨೬ ॥

(ಈ ನುಡಿಯಲ್ಲಿ (೧) **ಡೀ, ಡೂ, ಡೆ, ಡೈ, ಡೋ, ಡಃ;** ಹಾಗೂ
(೨) **ಢ** – ಒಂದನ್ನು ಬಿಟ್ಟು ಎಲ್ಲಾ ಅಕ್ಷರಮಾಲೆಗಳು ಉಳಿದಿವೆ)

**೩೬೪. ಕುಂಡಲೀಶ**

ಕುಂಡಲೀಗೂಢಪಾಃ ಚಕ್ಷುಶ್ರವಾಃ । – ಅಮರಕೋಶ

ಕುಂಡಲಿ – ಅಂದರೆ ಶೇಷ; ಆ ಶೇಷದೇವರಿಗೆ ಒಡೆಯನಾದಂಥ – **ಶ್ರೀಹರಿಯು.**

**೩೬೫. ಷಡಾಸ್ಯಸನ್ನುತ** ಘಟ್ + ಆಸ್ಯ + ಸತ್ + ನುತ

ಆರು + ಮುಖ + ಚನ್ನಾಗಿ + ಸೇವೆಗೊಳ್ಳು

ಷಣ್ಮುಖನಿಂದ ಚನ್ನಾಗಿ ಸೇವೆಗೊಳ್ಳುವಂಥ,[೧೯೫] – **ಶ್ರೀಹರಿಯು.**

**೩೬೬. ಪಂಡಿತಾರ್ಚಿತ**

ಪಂಡಿತರೆಲ್ಲರಿಂದಲೂ ಪೂಜೆಗೊಳ್ಳುವಂಥ – **ಶ್ರೀಹರಿಯು.**

**೩೬೭. ಪಂಡುರಾಂಬಕ**

ಪಂಡುರ = ಶುಭ್ರ, ಸ್ವಚ್ಛ; ಅಂಬಕ = ಕಣ್ಣು

ಅಪ್ರಾಕೃತ ದೃಷ್ಟಿಯುಳ್ಳಂಥ – **ಶ್ರೀಹರಿಯು.**

**೩೬೮. ಮಂಡಲೇಶ;** **೩೬೯. ಬಿಡೌಜನುತ**

೧೯೫. ವಾಯು ಪುರಾಣ.

ಕೈಕೆಳಗಿನ ಅರಸನಂತೆ ಇರುವ, ಬಿಡೇಜ ಅಂದರೆ ಇಂದ್ರನಿಂದ ಸೇವೆಗೊಳ್ಳುವಂಥ – **ಶ್ರೀಹರಿಯು.**

**೩೭೦. ನೃವಿಡಂಬನಚರಿತ್ರ**

**ರಾಮಾವತಾರ**ದಲ್ಲಿ ಸೀತೆಯನ್ನು ಕಳೆದುಕೊಂಡು ಅರಣ್ಯದಲ್ಲಿ, **"ಹಾ–ಸೀತೆ, – ಸೀತೆ"** ಎಂದು ಗಿಡಮರಗಳಿಗೆ ತೆಕ್ಕೆಬಿದ್ದು ದುಃಖಿಸುವದೂ, ನೀಚನ ಮಾತುಕೇಳಿ ಸೀತಾದೇವಿಯನ್ನು ಪುನಃ ವನಕ್ಕೆ ಅಟ್ಟುವದೂ; ಶ್ರೀನಿವಾಸಾವತಾರದಲ್ಲಿ ಪದ್ಮಾವತಿಯನ್ನು ಕಂಡುಮೋಹಗೊಂಡು, ನಿದ್ರಾ ಆಹಾರಾದಿಗಳನ್ನು ತೊರೆದು; ಮುಸುಗೆಳೆದು ಮಲಗಿಕೊಳ್ಳುವದೂ, ಆ ಪದ್ಮಾವತಿಯನ್ನು ತಂದು ಮದುವೆಮಾಡೆಂದು ಸಾಕುತಾಯಿಯಾದ ಬಕುಲಾವತಿಗೆ ದೈನ್ಯವಾಗಿ ಬೇಡಿಕೊಳ್ಳುವದೂ, ಇವೇ ಮೊದಲಾದುವುಗಳೆಲ್ಲ ಲೋಕದ ಜನರಿಗೆ ವಿಡಂಬನಾರ್ಥವಾಗಿ ನಡೆದುಕೊಂಡಂಥ – **ಶ್ರೀಹರಿಯು.**

**೩೭೧. ಪಂಢರಾಪುರರಾಜ ವಿಠಲಾ**

ಭಕ್ತ ಪುಂಡರೀಕನಿಗೆ ಒಲಿದು ಆತನ ಕೋರಿಕೆಯಂತೆ, ಪಂಢರಪುರದಲ್ಲಿಯೇ ವಾಸವಾಗಿದ್ದ ವಿಠ್ಠಲರೂಪೀ – **ಶ್ರೀಹರಿಯು.**

**೩೭೨. ಖಂಡಮತಿ ಪಾಖಂಡ ದೂಷಕಃ**

ಅಲ್ಪವಿಜ್ಞಾನ ಇಲ್ಲವೆ ಅಜ್ಞಾನ ಅಥವಾ ವಿರೋಧದಿಂದ ಆತ್ಮಪರಮಾತ್ಮರಲ್ಲಿ ಅಭೇದ್ಯವನ್ನು ಕಲ್ಪಿಸುವ ಪಾಖಂಡರನ್ನು ದೂಷಿಸಿ ಅಂಧಃ ತಮಸ್ಸಿಗೆ ಕಳಿಸುವಂಥ – **ಶ್ರೀಹರಿಯು.**

**೩೭೩. ಷಂಡಾಮರಕ ಪ್ರಭುಘ್ನ**

ಹಿರಣ್ಯಕಶಿಪುವಿಗೆ ನಾಲ್ಕು ಮಂದಿ ಗಂಡು ಮಕ್ಕಳು – ಪ್ರಲ್ಹಾದ, ಸಲ್ಹಾದ, ಅನುಲ್ಹಾದ ಮತ್ತು ಲ್ಹಾದ.

ಶುಕಾಚಾರ್ಯರು ರಾಜಧಾನಿಯಲ್ಲಿರಲಾರದ ಸಮಯದಲ್ಲಿ ಅವರ ಮಕ್ಕಳಾದ ಷಂಡ ಮತ್ತು ಮರ್ಕ ಇವರೀರ್ವರು ರಾಜ ಗುರುವಿನ ಕಾರ್ಯನಿರ್ವಹಿಸುತ್ತಿದ್ದರು. ಹಿರಣ್ಯಕಶಿಪು ತನ್ನ ಮಕ್ಕಳನ್ನು ಅವರ ಬಳಿ ಪಾಠಕ್ಕೆ ಕಳುಹಿದ. ಇಂಥ ಷಂಡಾಮರ್ಕರ ಪ್ರಭುವಾದ ಹಿರಣ್ಯಕಶಿಪುವಿನನ್ನು ಸಂಹರಿಸಿದಂಥ – ಶ್ರೀಹರಿಯು.

**೩೭೪. ಮುನಿಪುಂಡರೀಕ ವರದ –**

ನಾಮ ೩೭೧ – **"ಪಂಢರಾಪುರರಾಜವಿಠಲಾ"** ನೋಡಿರಿ.

ಪ್ರಣತಪ್ರಿಯ ಪ್ರ**ಣಾ**ಯಪ್ರಿಯ ವಿಪ್ರ –।
ಪ್ರಣಿತಪ್ರಿಯ ವಾ**ಣೀ**ಧವ ಪ್ರಿಯ –।
ಅಣುಮಹತ್ ರಮಾದೇವಿಪ್ರಾಣದೇವರು ಗ**ಣೇ**ಶಪ್ರಿಯ ॥
ಕ್ಷಣ ಕ್ಷ**ಣೈ**ಕ ಸುವ್ಯಕ್ತ ಧಾರಣ –।
ನೃಣ ಗ**ಣೌ**ತ್ಪಾಟಣ ರ**ಣೌ**ಘಾಂ –।
ಗಣ ಭಯೋಚ್ಚಾಟಣ ಗು**ಣಾಂ**ಕ ಶರಣ್ಯ ಸುಖದ ನಮೋ ॥ ೨೭ ॥



(ಈ ನುಡಿಯಲ್ಲಿ **–ಣೂ,ಣಃ–** ಅಕ್ಷರಮಾಲೆಗಳು ಉಳಿದಿವೆ)

**೩೭೫. ಪ್ರಣತಪ್ರಿಯ**

ತನಗೆ ನಮಸ್ಕರಿಸಿದವರಲ್ಲಿ ಅತೀವ ಪ್ರೀತಿಯುಳ್ಳಂಥ – **ಶ್ರೀಹರಿಯು.**

**೩೭೬. ಪರಣಾಮಪ್ರಿಯ**

ವೆಂಕಟೇಶದೇವರು ಆನೆಯ ಬೆನ್ನಟ್ಟಿಕೊಂಡು ಹೋದಾಗ, ಆನೆಸೋತು ಸೊಂಡಿಲಡತ್ತಿ ನಮಸ್ಕರಿಸಿದಾಗ ಆ ಬಾಣವನ್ನು ಬಿಡದೆ, ಆನೆಯನ್ನು ಪ್ರೀತಿಯಿಂದ ರಕ್ಷಿಸಿದಂಥ – **ಶ್ರೀಹರಿಯು.**

**೩೭೭. ವಿಪ್ರಪ್ರಣೀತಪ್ರಿಯ;** ಪ್ರಣೀತ = ಗ್ರಥಿತ

ವಿಪ್ರರಿಂದ ರಚಿಸಲ್ಪಟ್ಟ ಗ್ರಂಥಗಳು ಯಾವನಿಗೆ ಪ್ರಿಯವೋ ಅಂಥ – **ಶ್ರೀಹರಿಯು.**

**೩೭೮. ವಾಣೀಧವಪ್ರಿಯ**

ವಾಣೀ (ಸರಸ್ವತಿ) ವಲ್ಲಭನಾದ ಬ್ರಹ್ಮದೇವನಿಗೆ ಅತ್ಯಂತ ಪ್ರಿಯನಾದಂಥ – **ಶ್ರೀಹರಿಯು.**

**೩೭೯. ಅಣುಮಹತ್ ರಮಾದೇವಿ ಪ್ರಾಣದೇವರು.**

**ಅಣು** – ಬ್ರಹ್ಮಾದಿ ಜೀವರ ಸ್ವರೂಪ ಅಣುವಾದದ್ದು. ಆದ್ದರಿಂದ ಜೀವನು ಅಣು–ವಾದವನು. ತದಪೇಕ್ಷಯಾ ಅಣುತ್ವ ರಮಾದೇವರಿಗೆ ಇರೋಣದರಿಂದ ಜೀವಾಂತರ್ಗತತ್ವ ರಮಾದೇವರಲ್ಲಿ ತದಪೇಕ್ಷಯಾ ಅಣುವಾಗಿ ಶ್ರೀರೂಪದಿಂದ ಬಿಂಬನಾಗಿ ಇದ್ದಾನೆ. ಆದ ಕಾರಣ ಜೀವಾಂತರ್ಗತತ್ವ ರಮಾನಾರಾಯಣರಿಗೆ ಮಾತ್ರವೇ ಉಂಟು. ಬ್ರಹ್ಮಾದಿ ಜೀವರಿಗೆ ಸ್ವರೂಪದೇಶೆಯಿಂದ ಅಣು ಮಹತ್ತುಗಳು ಇಲ್ಲ – ಪ್ರಮಾಣ – **"ಮುಕ್ತಸ್ಯಯ ಸ್ವರೂಪೇಣ ಹ್ಯಣುವೃದ್ಧಿರ್ನ ಯುಜ್ಯತೇ । ನೋ ಹಾನಿಃ ಪುನರಾವೃತ್ತಿಃ ದುಃಖಾಜ್ಞಾನ ಭಯಾದಯಃ ।" –** ಇತಿಪ್ರಕಾಶ ಸಂಹಿತಾಯಾಂ

**ಮಹತ್** – ಸ್ವರೂಪದೇಹಕ್ಕಿಂತಲೂ ದೊಡ್ಡದಾದ ಸ್ಥೂಲದೇಹದಲ್ಲಿ ಬ್ರಹ್ಮಾದಿ ತತ್ವೇಶರ ಸಹಿತನಾಗಿ ಇದ್ದಾನೆ. ಮತ್ತು ನವಾವರಣ ಸಹಿತವಾದ ಬ್ರಹ್ಮಾಂಡ, ಅದರ ಆಚೆಗೆ ಸ್ಥೂಲತ್ವೇನ ವ್ಯಾಪ್ತ ರಮಾ, ಈ ಎರಡರಲ್ಲಿ ತದಾಕಾರ ಮಹದ್ರೂಪದಿಂದ ಇದ್ದಾನೆ. ತದಪೇಕ್ಷಯಾ ಮಹತ್ತು, ಸ್ವಾಖ್ಯಪ್ರದೇಶ ಪರಮಾತ್ಮನ ಅಣುವೂ ಮಹತ್ತೂ ಅಪರಿಚ್ಛಿನ್ನವು, ಅಣು ಮಹತ್ತುಗಳು ಎಂಬುದು ಜೀವಕೋಟಿ ಪ್ರವಿಷ್ಟರಲ್ಲಿ ಇಲ್ಲ. ಈಶಕೋಟಿ ಪ್ರವಿಷ್ಟರಲ್ಲಿ ಮಾತ್ರವೇ ಅಂದರೆ ರಮಾನಾರಾಯಣರಿಗೆ ಮಾತ್ರವೇ ಎಂತ ತಾತ್ಪರ್ಯ. "ಅಣೋರಣೀಯಾನ್ ಮಹತೋ–ಮಹೀಮಾನ್" ಅಂತಾಶ್ರುತಿಯುಂಟು.[೧೯೬]

ಇಂಥ ರಮಾದೇವಿಗೆ ಪ್ರಾಣದೇವರು ಅಂದರೆ ವಲ್ಲಭನಾದಂಥ – **ಶ್ರೀಹರಿಯು.**

**೩೮೦. ಗಣೇಶಪ್ರಿಯ**

ಶ್ರೀಗಜವದನನಿಗೂ ಪ್ರಿಯನಾದಂಥ – **ಶ್ರೀಹರಿಯು.**

---

೧೯೬. ಶ್ರೀಹರಿಕಥಾಮೃತಸಾರ – ಸಂಧಿ ೩ – ವ್ಯಾಪ್ತಿಸಂಧಿ – ನುಡಿ ೧೯ ಇದಕ್ಕೆ ಶ್ರೀ ಸಂಕರ್ಷಣ ಒಡೆಯರ – ಟೀಕೆ ಪುಟ – ೯೨–೯೩.

**೩೮೧. ಕ್ಷಣಕ್ಷಣೈಕ ಸುವ್ಯಕ್ತ ಧಾರಣನೃಣ್;** ಧಾರಣ = ಸಮಾಧಿಯ ಅಂಗ.

ಕ್ಷಣ ಕ್ಷಣಕ್ಕೆ ಧ್ಯಾನಮಗ್ನರಾಗತಕ್ಕಂಥ ಯೋಗಿಗಳ ಧಾರಣದಲ್ಲಿ ಅಂದರೆ ಸಮಾಧಿಯಲ್ಲಿ ಸುವ್ಯಕ್ತ ಅಂದರೆ ಚೆನ್ನಾಗಿ ತೋರುವಂಥ – **ಶ್ರೀಹರಿಯು.**

**೩೮೨. ಗಣೋತ್ಪಾಟಣ**

ದುಷ್ಟಗಣಗಳನ್ನು ಉತ್ಪಾಟಣ ಅಂದರೆ ನಾಶಮಾಡತಕ್ಕಂಥ – ಶ್ರೀಹರಿಯು.

**೩೮೩. ರಣೌಘಾಂಗಣ ಭಯೋಚ್ಚಾಟಣ**

ಗುರುಹಿರಯರನ್ನು ಆಪ್ತಬಾಂಧವರನ್ನು ಯುದ್ಧದಲ್ಲಿ ಕೊಂದರೆ ಮಹತ್ಪಾಪಬರುವದೆಂಬ ಅರ್ಜುನನಿಗೆ ಬಂದ ಭಯವನ್ನು ಗೀತೋಪದೇಶ ನೀಡಿ ಅದನ್ನು ಹೋಗಲಾಡಿಸಿದಂಥ – **ಶ್ರೀಹರಿಯು.**

**೩೮೪. ಗುಣಾಂಕ**

ಸತ್ವ, ರಜ, ತಾಮ ಗುಣಗಳು ತನ್ನಂದಲೇ ಉಂಟಾದ್ದರಿಂದ ಅವು ಪರಮಾತ್ಮನಿಗೆ ಏನೂ ಮಾಡಲಾರವು; ಅವು ಅವನ ಅಂಕಿತದಲ್ಲಿಯೇ ಇರುತ್ತವೆ. ಹೀಗೆ ಈ ಗುಣಗಳ ಮೇಲೆ ಅಂಕ. ಅಂದರೆ ಸ್ವಾಮ್ಯ ಉಂಟ – **ಶ್ರೀಹರಿಯು.**

**೩೮೫. ಶರಣ್ಯ**

ಗೌತಮ ಋಷಿಗಳ ಶಾಪಮೂಲಕವಾಗಿ ವೇದಗಳ ಬಗ್ಗೆ ಅಜ್ಞಾನ ತಲೆದೋರಿದಾಗ ಚತುರ್ಮುಖ ಬ್ರಹ್ಮ, ರುದ್ರ ಇಂದ್ರ ಮೊದಲಾದ ದೇವತೆಗಳು ಶರಣ್ಯಂ – ಸರ್ವರಕ್ಷಕನಾದ ನಾರಾಯಣನನ್ನು ಕುರಿತು ಶರಣು ಹೊಂದಿದರು.

**– ಶ್ರೀಮದ್ಬ್ರಹ್ಮ ಸೂತ್ರಕ್ಕೆ ಆನಂದತೀರ್ಥರ ಭಾಷ್ಯ.**

**ಬುದ್ಧೌ ಜಾತಾಯಾಮಪಿ ವಿಷ್ಣುಮೇವ ಶರಣಮನಿಚ್ಛ ।**
**ಅಜ್ಞಾನಾಂ ಜ್ಞಾನಿನಾಂಚೈವ ಮುಕ್ತಾನಾಂ ಶರಣಂ ಹರಿಃ ॥**

ಜ್ಞಾನವು ಹುಟ್ಟಿದ ಮೇಲೆಯೂ ವಿಷ್ಣುವಿಗೆನೇ ಶರಣುಹೋಗು. ಅಜ್ಞರು, ಜ್ಞಾನಿಗಳು, ಮುಕ್ತರು ಇವರೆಲ್ಲರಿಗೂ ಶ್ರೀ ಹರಿಯೇ[೧೯೭] – **ಶರಣ್ಯನು.**

**೩೮೬. ಸುಖದ**

ನಾಮ – (೧) ೧೫೬ ಸೌಖ್ಯಕರ (೨) ೨೮೩ ಸುಖಕರ ನೋಡಿರಿ.

**ಸತ್ಯವೃತ ಸತ್ವಾತ್ಮಕಾಗಮಾಢ್ಯ ।**
**ತತ್ವೇಶ ಸುರರು ತಿಲಮಾತ್ರಾರ್ಪಕೇಷ್ಟದ ।**
**ಮಿಥ್ಯ ದೂಷಕ ತೀರ್ಥಶ್ರವ ತುರ್ಯಾತ್ಮಾ ತೂರ್ಣಪ್ರಿಯ ॥**
**ನಿತ್ಯ ತೇಜನ ತೈತ್ತಿರಿಯ ಶ್ರುತಿ – ।**

೧೯೭. ಅಖಿಲಭಾರತ ಮಧ್ವಮಹಾಮಂಡಲದ "ಸರ್ವಮೂಲ ಗ್ರಂಥಗಳು" – "ಗೀತಾ ಭಾಷ್ಯ" – "ಗೀತಾತಾತ್ಪರ್ಯ"ದ – ಶ್ರೀಮದ್ಭಗವದ್ಗೀತಾ ಅಧ್ಯಾಯ ಎರಡನೇಯದು – ಶ್ಲೋಕ – ೪೯ಕ್ಕೆ ತಾತ್ಪರ್ಯ.



**ಸ್ತುತ್ಯ ತೋಯಾಯುನ ಧೃತೌಷಧ – ।**
**ಪಥ್ಯತಾಂತ್ರಿಕ ಪರಮಚೇತಃ ಪರಮಕಾಲ ನಮೋ ॥ ೨೮ ॥**

**೩೮೭. ಸತ್ಯವೃತ**

ಸತ್ಯಪರಿಪಾಲನೆಯಲ್ಲಿ ಆದರ್ಶಪ್ರಾಯನಾದ – ಶ್ರೀರಾಮಾವತಾರದ – **ಶ್ರೀಹರಿಯು.**

**೩೮೮. ಸತ್ವಾತ್ಮಕಾಗಮಾಢ್ಯ**

ಸಾತ್ವಿಕ ಪುರಾಣಾದಿ ವೇದ್ಯನಾದಂಥ[೧೯೮] – **ಶ್ರೀಹರಿಯು.**

**೩೮೯. ತತ್ವೇಶ ಸುರರು ತಿಲಮಾತ್ರಾರ್ಪಕೇಷ್ಟದ**

ತತ್ವೇಶರಾದ ದೇವತೆಗಳ ಅಲ್ಪಪ್ರಮಾಣದ ಅರ್ಪಣೆಗೆ ಪ್ರೀತನಾಗುವಂಥ – **ಶ್ರೀಹರಿಯು.**

**೩೯೦. ಮಿಥ್ಯದೂಷಕ**

"ಅಹಂ ಬ್ರಹ್ಮಾಸ್ಮಿ" ಎಂಬ ಮಿಥ್ಯಾವಾದವನ್ನು ದೂಷಿಸುವಂಥ – **ಶ್ರೀಹರಿಯು.**

**೩೯೧. ತೀರ್ಥಶ್ರವ**

ಪವಿತ್ರವಾದ ಕೀರ್ತಿಯುಳ್ಳವನಾದ – **ಶ್ರೀಹರಿಯು.**

**೩೯೨. ತುರ್ಯಾತ್ಮಾ**

ಭಗವಂತನು ಎಲ್ಲ ಪ್ರಾಣಿಗಳ ಶರೀರಗಳಲ್ಲಿ, ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರಿಯ ಎಂಬ ನಾಲ್ಕು ರೂಪಗಳಿಂದ ಇರುವನು.

ಭಗವಂತನು ಜಾಗ್ರದಾವಸ್ಥಾ ಪ್ರೇರಕನಾಗಿ – ವಿಶ್ವ – ರೂಪದಿಂದಲೂ, ಸ್ವಪ್ನಾವಸ್ಥಾ ಪ್ರೇರಕನಾಗಿ–ತೈಜಸ – ರೂಪದಿಂದಲೂ, ಸುಷುಪ್ತಾವಸ್ಥಾ ಪ್ರೇರಕನಾಗಿ – ಪ್ರಾಜ್ಞ – ರೂಪದಿಂದಲೂ, ಮೋಕ್ಷಾವಸ್ಥಾ ನಿಯಾಮಕನಾಗಿ – ತುರೀಯ – ರೂಪದಿಂದಲೂ – ಹೀಗೆ ನಾಲ್ಕು ಸ್ವರೂಪಾತ್ಮಕ ರೂಪಗಳಿಂದ ಸಕಲ ಪ್ರಾಣಿಗಳ ಶರೀರಗಳಲ್ಲೂ ಇರುವಂಥ[೧೯೯] – **ಶ್ರೀಹರಿಯು.**

ನಾಮ ೧೩೫, ೧೩೬, ೧೩೭, ವಿಶ್ವ–ತೈಜಸ,ಪಾಜ್ಞ –ಅವಸ್ಥಾತ್ರಯದಾತಾ – ನೋಡಿರಿ.

**೩೯೩. ತೂರ್ಣಪ್ರಿಯ**

ಭಕ್ತರಿಗೆ ತೀವ್ರದಲ್ಲಿ ಅನುಗ್ರಹ ಮಾಡುವದರಲ್ಲಿ ಪ್ರಿಯನಾದಂಥ – **ಶ್ರೀಹರಿಯು.**

"ತೂರ್ಣಮತೇತ ನಪತೇತ ಅನುಮ್ಯಂತೂ ಯಾವತ್" – **ಭಾಗವತ ಸಾರೋದ್ಧಾರ.**

**೩೯೪. ನಿತ್ಯತೇಜನ**

ತೇಜೋಮಯನಾಗಿ – "ನಿತ್ಯತೇಜನ" ನೆನಿಸಿಕೊಂಡಂಥ – **ಶ್ರೀಹರಿಯು.**

ನಾಮ – ೩೩೨ – "ಜ್ಯೋತಿರ್ಮಯ" ನೋಡಿರಿ

೧೯೮. ಸದಾಗಮ್ಯೈಕ ವಿಜ್ಞೇಯಂ ಸಮತೀತಕ್ಷರಾಕ್ಷರಮ್ । ವಿಷ್ಣು ತತ್ವವಿನಿರ್ಣಯ – ೧.

೧೯೯. ಮಾರ್ಕಂಡೇಯ – ಮಾಂಡೂಕೋಪನಿಷದ ಭಾಷ್ಯ – ೧–೧–೭ ಹಾಗೂ ಶ್ರೀವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೧೪೧ – "ಚತುರಾತ್ಮ"ಕ್ಕೆ ಪುಟ – ೫೦೬

**೩೯೫. ತೈತ್ತಿರಿಯ ಶ್ರುತಿ ಸ್ತುತ್ಯ**

ತೈತ್ತಿರಿಯೋಪನಿಷದಿನಲ್ಲಿ ಸ್ತುತಿ ಮಾಡಿಸಿಕೊಂಡಂಥ – **ಶ್ರೀಹರಿಯು.**

**೩೯೬. ತೊಯಾಯನ.**

ನೀರಿನಲ್ಲಿ ಶಯನ ಮಾಡಿದಂಥ – ಶ್ರೀಹರಿಯು.

ನಾಮ – ೧೯೭ – "ಅಪುರಶಯನ" ನೋಡಿರಿ.

**೩೯೭. ಧೃತೌಷಧ ಪಧ್ಯತಾಂತ್ರಿಕ**

ಕೈಯಲ್ಲಿ ಅಮೃತ ಕಲಶಹಿಡಿದು ಸಮುದ್ರಮಥನ ಕಾಲಕ್ಕೆ ಪಾದುರ್ಭವಿಸಿದ ಹಾಗೂ ಔಷಧ ಮತ್ತು ಪದ್ಯಗಳ ನಿಯಂತ್ರಕನಾದಂಥ – ಧನ್ವಂತರಿ ಅವತಾರದ – **ಶ್ರೀಹರಿಯು.**

**೩೯೮. ಪರಮಚೇತಃ –**

ಚರಾಚರ ವಸ್ತುಗಳೆಲ್ಲವುಗಳಿಗೆ ಚೇತನನಾದಂಥ – **ಶ್ರೀಹರಿಯು.**

**೩೯೯. ಪರಮಕಾಲ**

ನೃಸಿಂಹರೂಪದಿಂದ ರುದ್ರಾಂತರ್ಯಾಮಿಯಾಗಿದ್ದುಕೊಂಡು ಸಕಲ ಸಂಹಾರಕ್ಕೆ ಕಾರಣವಾಗಿ – ಪರಮಕಾಲ – ನೆನಿಸಿಕೊಳ್ಳುವಂಥ – **ಶ್ರೀಹರಿಯು.**

ಪ್ರ**ಥ**ಮ ಪುರುಷ ಪೃ**ಥಾ**ತ್ಮಜಾನೃಪ – ।
ಮ**ಥಿ**ತ ವೀರ್ಯ ರ**ಥೀ**ಂದ್ರ ಪರಿಚರ ।
ಪೃ**ಥು**ವಿಪೂಜಿತ ಸ್ಥೂಲಕೃತ್ಯ ಯ**ಥೇ**ಚ್ಛ **ಸ್ಥೈ**ರ್ಯಮತೇ ॥
ಪ**ಥಿ**ಕ ಸದನ ಯ**ಥೋ**ಕ್ತ ಫಲದ ವಿ – ।
ಪಥರ**ಥೌ**ಘಪ ಸುರಥಚರಣ ಕು – ।
ಪಥದೂರಗ ಬ್ರಹ್ಮಸ್ತಂಭಾಂತಸ್ಥಸ್ವಸ್ಥಃ ನಮೋ ॥ ೨೯ ॥
(ಈ ನುಡಿಯಲ್ಲಿ –**ಥಂ**– ಅಕ್ಷರಮಾಲೆ ಉಳಿದಿದೆ ದೇವನಾಗರಿಯಲ್ಲಿ **ಸ್ಥೂ ಸ್ಥೈ ಸ್ಥಃ** ಹೀಗೆ ಬರವಣಿಗೆ ಬರುವದರಿಂದ **ಥೂ,ಥೈ** ಹಾಗೂ **ಥಃ**ಗಳು ಬಂದಂತಾಗಿವೆ)

**೪೦೦. ಪ್ರಥಮಪುರುಷ**

ಪ್ರತಿ ಪ್ರಳಯ ಕಾಲದಲ್ಲೂ ಎಲ್ಲ ಚರಾಚರ ವಸ್ತುಗಳನ್ನು ತನ್ನ ಉದರದಲ್ಲಿಟ್ಟುಕೊಂಡು, ಆಲದೆಲೆಯ ಮೇಲೆ ಮಲಗಿಕೊಂಡಿರುವಂಥ ಪರಮಾತ್ಮನು. ತನಗೆ ಸೃಷ್ಟಿಯನ್ನು ಸೃಜಿಸಬೇಕೆಂದಾಗ, ನಾರಾಯಣ, ವಾಸುದೇವ, ಸಂಕರುಷಣ, ಪ್ರದ್ಯುನ್ನು ಮತ್ತು ಅನಿರುದ್ಧ ರೂಪಗಳನ್ನು ತಾಳಿ ಸೃಷ್ಟಿಯನ್ನು ಆರಂಭಿಸುವನು. ಇಂಥ ಸೃಷ್ಟಿಯ ಪೂರ್ವದಲ್ಲಿದ್ದು ಪ್ರಥಮ ಪುರುಷನೆನಿಸಿಕೊಳ್ಳುವಂಥ – **ಶ್ರೀಹರಿಯು.**

**೪೦೧. ಪೃಥಾತ್ಮಜಾನೃಪಮಥಿತವೀರ್ಯ**

ಪೃಥಾತ್ಮಜಾ = ಕುಂತೀದೇವಿಯ ಮಕ್ಕಳಾದ ಪಾಂಡವರು; ಆನೃಪರಲ್ಲಿ ಸನ್ನಿಹಿತನಾಗಿ ದುಷ್ಟರ ಸಾಮರ್ಥ್ಯವನ್ನು ನಾಶಮಾಡಿದಂಥ – ಕೃಷ್ಣಾವತಾರದ – **ಶ್ರೀಹರಿಯು.**



**೪೦೨. ರಥೀದ್ರ ಪರಿಚರ**

ರಥಿಕರಲ್ಲೇ ಸರ್ವಶ್ರೇಷ್ಠನಾದ ಅರ್ಜುನನಿಗೆ, ಮಹಾಭಾರತದ ಯುದ್ಧಕಾಲದಲ್ಲಿ, ಸಾರಥಿಯಾಗಿ, ಆತನ ಪರಿಚರನಾಗಿ, ಪಾಂಡವರಿಗೆ ತನ್ನ ಒಲವಿನಿಂದಲೇ ಗೆಲುವು ತಂದು ಕೊಟ್ಟಂಥ – ಕೃಷ್ಣಾವತಾರದ – **ಶ್ರೀಹರಿಯು.**

**೪೦೩. ಪೃಥುವಿ ಪೂಜಿತ**

(೧) ಬ್ರಹ್ಮನ ವರಪ್ರಾಧಾನ್ಯದಿಂದ ಸೊಕ್ಕಿ ಮೆರೆದ ದೈತ್ಯರ ಹಾಗೂ ದುರ್ಮಾರ್ಗಿಗಳ ಭಾರದಿಂದ ತತ್ತರಿಸಿದ್ದೇನೆಂದು, ಬ್ರಹ್ಮ ಹಾಗೂ ಎಲ್ಲ ದೇವತೆಗಳಿಂದೊಡಗೂಡಿ, ಆಕಳು ರೂಪದಿಂದ ಕ್ಷೀರಸಾಗರದ ಬಳಿ ಬಂದು ಪ್ರಾರ್ಥಿಸಿಕೊಳ್ಳಲು, ಶೇಷಶಾಯಿಯಾದ ಭಗವಂತನು, "ಸ್ವಲ್ಪ ಕಾಲಾವಧಿಯಲ್ಲಿಯೇ ವಸುದೇವ – ದೇವಕಿಯರಲ್ಲಿ ಪ್ರಾದುರ್ಭವಿಸಿ ಭೂಭಾರ ಹರಣ ಮಾಡುತ್ತೇನೆ" ಎಂದು ಅಶರೀರವಾಣಿಯಿಂದ ತಿಳಿಸಿದನು. ಅದನ್ನು ಕೇಳಿ ಭೂದೇವಿಸಹಿತ ಎಲ್ಲ ದೇವತೆಗಳು ತಮ್ಮ ತಮ್ಮ ಸ್ಥಳಕ್ಕೆ – ಶ್ರೀ ಹರಿಯನ್ನು ಹೊಗಳುತ್ತ ಮರಳಿ ಮರಳಿ ಹೋದರು. ಹೀಗೆ ಪೃಥುವಿ ಪೂಜಿತನಾದಂಥ,[೨೦೦] – **ಶ್ರೀಹರಿಯು.**

(೨) ವರಬಲದಿಂದ ಮದೋನ್ಮತ್ತನಾದ ನರಕಾಸುರನು ಸ್ವರ್ಗದ ಮೇಲೆ ದಾಳಿಯನ್ನಿಟ್ಟು ದೇವತೆಗಳನ್ನು ಪರಾಜಯಗೊಳಿಸಿ, ಅದಿತಿಯ ಕರ್ಣಕುಂಡಲಗಳನ್ನು ಅಪಹರಿಸಿಕೊಂಡು ಬಂದನು. ಈ ವಿಷಯವನ್ನು ದೇವೇಂದ್ರನು ಶ್ರೀಕೃಷ್ಣನಿಗೆ ಅರುಹಿ, ಆಕರ್ಣಕುಂಡಲುಗಳನ್ನು ಮರಳಿ ಕೊಡಿಸಬೇಕೆಂದು ಪ್ರಾರ್ಥಿಸಿದನು. ಆತನ ಪ್ರಾರ್ಥನೆಯನ್ನು ಮನ್ನಿಸಿ, ಶ್ರೀಕೃಷ್ಣನು ಸತ್ಯಭಾಮೆ ಸಹಿತ ಬಂದು ಆ ನರಕಾಸುರನ ಕೋಟೆಗೆ ದಾಳಿ ಇಟ್ಟನು. ಕೋಟೆಯ ಮಹಾದ್ವಾರದಲ್ಲಿಯೇ ಆ ಅಸುರನ ಸೇನಾಪತಿಯಾದ ಮುರನನ್ನು ಸಂಹರಿಸಿದನು. ಆಗ ಭೂದೇವಿಯು ಕರುಣಿಸೆಂದು ಪ್ರಾರ್ಥಿಸಲು, ಶ್ರೀಕೃಷ್ಣನು ನರಕಾಸುರನ ಮಗನಾದ ಭಗದತ್ತನನ್ನು ಪಟ್ಟಗಟ್ಟಿ, ಕರ್ಣಕುಂಡಲುಗಳನ್ನು ಪಡೆದುಕೊಂಡು, ಸತ್ಯಭಾಮೆಯುನ್ನೊಡಗೂಡಿ ಗರುಡಾರೂಢನಾಗಿ ಸ್ವರ್ಗಕ್ಕೆ ತೆರಳಿದಂಥ – ಕೃಷ್ಣಾಣವತಾರದ,[೨೦೧] – **ಶ್ರೀಹರಿಯು.**

**೪೦೪. ಸ್ಥೂಲಕೃತ್ಯ**

**ತೇಷು ಕಾಲೇಪ್ಯಜಾಯಂತ ರಚಿತಾವಯವಾ ಹರೇಃ ।**
**ಶಕ್ತಿಭಿರ್ಃ ದ್ರುವಿಭ್ಯಾಭಿಃ ಕೋಮಲಾಂಗತನುರ್ಹಹಾಃ ॥ – ಭಾಗವತ ಏಕಾದಯ ಸ್ಕಂದ**

ಎಲ್ಲರಿಗೂ ಕಾಣುವಂತೆ ಸೃಷ್ಟ್ಯಾದಿ ವ್ಯಾಪಾರ ಮಾಡುವಂಥ – **ಶ್ರೀಹರಿಯು.**

**೪೦೫. ಯಥೇಚ್ಛಸ್ಥೈರ್ಯಮತೆ**

ಇಚ್ಛಾನುಸಾರವಾಗಿ ಇರುವ ಸ್ಥಿರತೆ ಹಾಗೂ ಮತಿ ಈ ಗುಣಗಳುಳ್ಳಂಥ – **ಶ್ರೀಹರಿಯು.**

**೪೦೬. ಪಥಿಕಸದನ**

ಪಥಿಕ = ಹಾಯ್ದು ಹೋಗುವವರು ; ಸದನ = ಆಶ್ರಯ

ಮುಕ್ತಿಮಾರ್ಗಸ್ಥರಿಗೆ ಆಶ್ರಯದಾತನಾದಂಥ – **ಶ್ರೀಹರಿಯು.**[೨೦೨]

---

೨೦೦. ಶ್ರೀಮದ್ಭಾಗವತ ದಶಮಸ್ಕಂಧ ಪೂವಾರ್ಧ ಅಧ್ಯಾಯ – ೧

೨೦೧. ಶ್ರೀಮದ್ಭಾಗವತ ದಶಮಸ್ಕಂಧ – ೬೩,೬೪,೬೫ನೇಯ ಅಧ್ಯಾಯಗಳು ನಾಮ – ೭೮ ಶಕ್ರ ಅರ್ಚಿತ ಪದಾಬ್ಜ – ನೋಡಿರಿ.

೨೦೨. ದ್ವಾದಶ ಸ್ತೋತ್ರ

**೪೦೭. ಯಥೋಕ್ತಫಲದ**

ಸೂರ್ಯಪುತ್ರ ಸುಗ್ರೀವನ ಬೆನ್ನುಕಟ್ಟಿ ಇಂದ್ರಪುತ್ರನಾದ ವಾಲಿಯನ್ನು ನಿಗ್ರಹಿಸಿದ ಶ್ರೀರಾಮನು; ಆ ವಾಲಿಗೆ ಹೇಳಿದಂತೆ, ಶ್ರೀಕೃಷ್ಣಾವತಾರದಲ್ಲಿ ಇಂದ್ರ ಪುತ್ರನಾದ ಅರ್ಜುನನ ಬೆನ್ನುಕಟ್ಟಿ, ಸೂರ್ಯಪುತ್ರರಾದ ಕರ್ಣನನ್ನು ರಣರಂಗದಲ್ಲಿ ಕೊಲ್ಲಿಸಿದಂಥ – **ಶ್ರೀಹರಿಯು.**

**೪೦೮. ವಿಪಥರಥೌಘಪ**

ವಿಷಥ + ರಥ + ಓಘ + ಪ

ರುಕ್ಮಿಣಿಯ ಸ್ವಯಂವರ ಕಾಲಕ್ಕೆ, ರುಕ್ಮಿಣಿಯನ್ನು ರಥದಲ್ಲಿ ಕೂಡ್ರೀಸಿಕೊಂಡು ಮಥುರೆಗೆ ಬರುತ್ತಿರಲು, ಅವಳ ಅಣ್ಣನಾದ ರುಕ್ಮಿಯು ಅವರ ಬೆನ್ನು ಹತ್ತಿ ಬಂದು ಶ್ರೀಕೃಷ್ಣನ ಕೂಡ ಯುದ್ಧಮಾಡಿ ಸೋತನು. ಆಗ ರುಕ್ಮಿಣಿಯು ಆತನನ್ನು ಕೊಲ್ಲದಿರಲು ಕೇಳಿಕೊಂಡದ್ದರಿಂದ ತನ್ನ ಕೈಯಲ್ಲಿಯ ಕತ್ತಿಯಿಂದ ಆತನ ತಲೆಯ ಹಾಗೂ ಮೀಸೆಯ ಕೂದಲನ್ನು ತೆಗೆದು ವಿರಥನನ್ನಾಗಿ ಮಾಡಿಬಿಟ್ಟನು. ಹೀಗೆ ಸೋತರುಗ್ಮಿಯನ್ನು ಪಾಲಿಸಿದಂಥ[೨೦೩] – ಕೃಷ್ಣಾವತಾರದ – **ಶ್ರೀ ಹರಿಯು.**

ನಾಮ – ೭೫೫ ಅಷ್ಟಮಹಿಷೆಯರು (೧) ರುಕ್ಮಿಣಿ – ನೋಡಿರಿ.

**೪೦೯. ಸುರಥಚರಣ**

ಸೂರ್ಯಾಂತರ್ಯಾಮಿ ಸವಿತೃನಾಮಕ ಭಗವಂತನು ರಾತ್ರಿಯಲ್ಲಿ ಕತ್ತಲೆಯನ್ನು ಉಂಟುಮಾಡಿ, ದೇವತೆಗಳು, ಮನುಷ್ಯರು ಹಾಗೂ ಉಳಿದ ಪ್ರಾಣಿಗಳೆಲ್ಲ ರಾತ್ರಿಕಾಲ ನಿದ್ರಿಸುವಂತೆ ಪ್ರೇರಿಸಲು ಭುವನಗಳನ್ನೆಲ್ಲ ನೋಡುತ್ತ ಹಿರಣ್ಮಯವಾದ ರಥವನ್ನೇರಿ ಬರುವನು. ಪ್ರಾಣಿಗಳ ದುರಿತವನ್ನು ಪರಿಹರಿಸುತ್ತ ನೀಚೋಚ್ಚಃ ಪ್ರದೇಶಗಳನ್ನೆಲ್ಲ ನಿತ್ಯವೂ ಸಂಚರಿಸುತ್ತಿರುವಂಥ[೨೦೪] – ಸವಿತೃನಾಮಕ – **ಶ್ರೀಹರಿಯು.**

**೪೧೦. ಕುಪಥದೂರಗ**

ತನ್ನ ಭಕ್ತರನ್ನು ಕೆಟ್ಟ ದಾರಿ ಬಿಡಿಸಿ, ಅದರಿಂದ ದೂರಮಾಡುವ ವಯದರಥ – **ಶ್ರೀಹರಿಯು.**

**೪೧೧. ಬ್ರಹ್ಮಸ್ತಂಭಾಂತಸ್ಥಸ್ವಸ್ಥಃ**

ಬ್ರಹ್ಮದೇವರಾರಂಭಿಸಿ ತೃಣಪರ್ಯಂತ ಎಲ್ಲ ವಸ್ತುಗಳಲ್ಲಿ ವಾಸವಾಗಿದ್ದು, ನಿಯಮನ ಮಾಡುತ್ತಿರುವವನಾಗಿಯೂ, ತಾನು ಮಾತ್ರ ಆನಂದಪೂರ್ಣನಾಗಿರುವಂಥ – **ಶ್ರೀಹರಿಯು.**

**ದ**ಹರ ವ್ಯೋಮಗ **ದಾ**ತೃದಾಂತ ಹೃದ್ – ।
ಗುಹಸದನ ಕರ್ತ ತುಹಿನಬಿಂಬಗ ।
ಅಹೋಘ **ದೀ**ರ್ಘಮಯೂಖ **ದು**ರ್ಗಾವ್ಯಾಕೃತಾಂಬರಗಾ ॥
ಸ್ವಹಿಗ **ದೂ**ರಗ **ದೇ**ವ**ದೈ**ತ್ಯರಗ ।

೨೦೩. ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧದ ೫೭, ೫೮ ಹಾಗೂ ೫೯ನೇಯ ಅಧ್ಯಾಯಗಳು.

೨೦೪. ಋಗ್ವೇದ ೩೫–೭ ಹಾಗೂ ೩೫–೩; ಮತ್ತು ಭಾಷ್ಯ. ಹಾಗೂ ಶ್ರೀವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೧೨೫ "ಸರ್ವಂಗಃ" ಕ್ಕೆ ಪುಟ ೪೪೧.



**ದೋ**ಹನ ಕಾರ್ಯಗ **ದೌ**ತ್ಯಕರ್ಮಗ ।
ದ್ರೂಹಿಣದೇಹ್ಯಗ **ದಂ**ಡಕಾರಗ ದರ್ಪಕಸಹ ನಮೋ ॥ ೩೦ ॥
(ಈ ನುಡಿಯಲ್ಲಿ – **ದಿ, ದಃ** – ಅಕ್ಷರಮಾಲೆ ಉಳಿದಿವೆ)

**೪೧೨. ದಹರವ್ಯೋಮಗ**

ಹೃದಯಾಂತರ್ಗತ ಆಕಾಶದಲ್ಲಿದ್ದಂಥ – **ಶ್ರೀಹರಿಯು.**

**೪೧೩. ದಾತೃಹೃದ್‌ಗುಹಸದನ ಕರ್ತ**

**೪೧೪. ದಾಂತ ಹೃದ್‌ಗುಹಸದನಕರ್ತ**

ದಾತೃ = ಕೊಡುವವ; ದಾಂತ = ಪಡೆಯುವವ; ಇಂದ್ರಿಯನಿಗ್ರಹವುಳ್ಳ

ದಾನ ಕೊಡುವವ ಹಾಗೂ ದಾನಪಡೆಯುವ ಇವರೀರ್ವರ ಹೃದಯವೆಂಬ ಗುಹೆಯಲ್ಲಿ ವಾಸವಾಗಿರುವಂಥ – **ಶ್ರೀ ಹರಿಯು.**

**೪೧೫. ತುಹಿನಬಿಂಬಗ**

ಚಂದ್ರನಲ್ಲಿ ಇರುವಂಥ – **ಶ್ರೀಹರಿಯು.**

**೪೧೬. ಅಹೋಘ ದೀರ್ಘಮಯೂಖದರ್ಗ.** ದುರ್ಗಾ = ಕೋಟೆ

ಅಹೋಘ = ವ್ಯರ್ಥವಾಗದ; ಮಯೂಖ = ಕಿರಣಗಳು

ವ್ಯರ್ಥವಾಗದ ದೀರ್ಘಕಿರಣಗಳ ಕೋಟೆಯಾದಂಥ – **ಶ್ರೀಹರಿಯು.**

**೪೧೭. ಅವ್ಯಾಕೃತಾಂಬರಗ**

ಅವ್ಯಾಕೃತ ಆಕಾಶದಲ್ಲಿ ಇರುವಂಥ – ಶ್ರೀಹರಿಯು.

**೪೧೮. ಸ್ವಹಿಗ**

ಭಗವಂತನು ಸರ್ವಗತ ಅಂದರೆ ಎಲ್ಲೆಡೆ ಇರುವವನು ಎಂಬ ಅಭಿಪ್ರಾಯದಲ್ಲೇ ಈಶಾವಾಸ್ಯೋಪನಿಷತ್ತು – "ಭಗವಂತನು ದೂರದಲ್ಲಿಯೂ, ಸಮೀಪದಲ್ಲಿಯೂ, ಎಲ್ಲದರ ಒಳಗೂ ಹೊರಗೂ ಇರವನೆಂದು ಸಂದೇಶಿಸಿದೆ".[೨೦೫] ಇಂಥ ಸ್ವಹಿಗನಾದಂಥ – **ಶ್ರೀಹರಿಯು.**

**೪೧೯. ದೂರಗ**

ಸರ್ವಗತನಾದ ಪರಬ್ರಹ್ಮನು, ದೂರದಲ್ಲಿಯೂ, ಹತ್ತಿರದಲ್ಲಿಯೂ, ಎಲ್ಲೆಡೆಯಲ್ಲಿಯೂ ಇದ್ದಾನೆ. ಇದನ್ನೇ – **"ಸರ್ವಂಖಲ್ವಿದಂ ಬ್ರಹ್ಮ"** ಎಂಬ ಶೃತಿಯೂ, ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ" ಎಂಬ ಬ್ರಹ್ಮಸೂತ್ರವೂ ಪ್ರತಿಪಾದಿಸುತ್ತವೆ.

**ದೇವದೈತ್ಯರಗ**

**೪೨೦. ದೇವರಗ;** **ರಗ = ನಿಯಾಮಕ**

**೪೨೧. ದೈತ್ಯರಗ;** ದೇವದೈತ್ಯರಲ್ಲಿಯೂ ನಿಯಾಮಕನಾದಂಥ – **ಶ್ರೀಹರಿಯು.**

೨೦೫. ಈಶಾವಾಸ್ಯೋಪನಿಷತ್ತು ೧–೫, ಭಾಷ್ಯ ಹಾಗೂ ತತ್ವಸಂಹಿತಾ ಹಾಗೂ ಶ್ರೀವಿಷ್ಣುಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಟೀಕೆ ನಾಮ –೧೨೬ **"ಸರ್ವಗಃ"** ಇದಕ್ಕೆ ಪುಟ ೪೪೭.

**೪೨೨. ದೋಹನ ಕಾರ್ಯಗ**

ಮನುಕುಲೋತ್ಪನ್ನನಾದ ಧ್ರುವರಾಜನ ವಂಶದಲ್ಲಿ ಜನಿಸಿದ ಅಂಗರಾಜನು ತನ್ನ ಮಗನಾದ ವೇನನ ದುಷ್ಕೃತಗಳಿಗೆ ಬೇಸತ್ತು ರಾಜ ತ್ಯಾಗಮಾಡಿ ರಾತ್ರಿಯಲ್ಲಿ ಯಾರಿಗೂ ತಿಳಿಸದೆ ಹೊರಟು ಹೋದನು. ಆಗ ವೇನನಿಗೆ ಪಟ್ಟವಾಯಿತು. ದುರಾಡಳಿತೆಗೆ ಬೇಸತ್ತು; ಆತನಿಗೆ ಉಪದೇಶ ಮಾಡಲು ಬಂದ ಭೃಗುಮುನಿಗಳನ್ನೊಳಗೊಂಡ ಬ್ರಹ್ಮ ಸಮಾಜವನ್ನು ಅವಮಾನಗೊಳಿಸಿ ಅವರಿಂದ ಶಾಪಕ್ಕೊಳಗಾಗಿ ನಾಶವಾದನು. ಕೆಲಕಾಲದ ನಂತರ, ರಾಜ್ಯದಲ್ಲಿ ಅರಾಜಕತ್ಯುಂಟಾಗದಿರಲೆಂದು, ಬ್ರಾಹ್ಮಣರು, ವೇನನ ತಾಯಿಯು ತಂತ್ರೋಕ್ತವಾಗಿ ಕಾಯ್ದಿರಿಸಿದ ಆತನ ಪಾರ್ಥೀವ ಶರೀರವನ್ನು ತರಿಸಿ, ಅದರ ಎಡತೊಡೆಯನ್ನು ಮಥನ ಮಾಡಲು ಒಂದು ಕುಳ್ಳ ಹಾಗೂ ದುಷ್ಟಆಕೃತಿಯು ಉದ್ಭವಿಸಿ, "ಏನಪ್ಪಣೆ?" ಎಂದಿತು. ಅದಕ್ಕೆ ಅವರು "ಸುಮ್ಮನಿರು; ನಿಷೀದ – (ಕುಳಿತಿಕೋ)" ಎಂದು ಹೇಳಿದ್ದರಿಂದ ಅವನು ನಿಷಾದನಾಗಿ, ಅಂದಿನಿಂದ ಅದು ನಿಷಾದಕುಲಕ್ಕೆ ಮೂಲಪುರುಷವಾಯಿತು. ಪುನಃ ಅವರು ಆ ವೇನನ ಎಡ ಹಾಗೂ ಬಲ ತೋಳುಗಳನ್ನು ಮಥಿಸಲು ಒಂದು ಪುರುಷವ್ಯಕ್ತಿಯೂ ಒಂದು ಸ್ತ್ರೀವ್ಯಕ್ತಿಯೂ ಉದ್ಭವಿಸಿದವು. ಭಗವಂತನು ಲೋಕೋದ್ಧಾರಕ್ಕಾಗಿ ತನ್ನ ಅಂಶದಿಂದಲೇ ಪುರುಷನನ್ನೂ, ಮಹಾಲಕ್ಷ್ಮೀಯ ಅಂಶದಿಂದಲೇ ಆ ಸ್ತ್ರೀರೂಪವನ್ನು ಕರುಣಿಸಿದನೆಂದು ತಿಳಿದು, ಚತುರ್ಮುಖನು, ನೀವೀರ್ವರೂ ದಂಪತಿಗಳಾಗಿ, ಲೋಕರಕ್ಷಣೆಗಾಗಿ ದೀರ್ಘಕಾಲ ಚಕ್ರವರ್ತಿಗಳಾಗಿ ಬಾಳಿರಿ"ಎಂದು ಅಭಿನಂದಿಸಿದನು.

ಆ ಪೃಥುಚಕ್ರೇಶ್ವರನು, ಪ್ರಜಾರಕ್ಷಣಾ ಕಾರ್ಯದಲ್ಲಿ ನಿರತನಾಗಿ ದೇಶದ ಸ್ಥಿತಿಗತಿ ಹೇಗೆಂದು ವಿಚಾರಿಸಲಾಗಿ, ಭೂಮಿಯೆಲ್ಲ ಬಂಜರುಬಿದ್ದು ಯಾವ ವಿಧದ ಬೆಳೆಯೂ ಇಲ್ಲದೆ ಜನರೂ ಪಶ್ವಾದಿಗಳೂ ಆಹಾರವಿಲ್ಲದೆ ಎಲ್ಲೆಲ್ಲೂ ಹಾಹಾಕಾರ ಪಡುತ್ತಿದ್ದರು. "ಆಹಾರವನ್ನು ಕಲ್ಪಿಸಿಕಾಪಾಡು". ಎಂಬ ಜನರ ಪ್ರಾರ್ಥನೆಗನುಸರಿಸಿ, ಆಪೃಥುರಾಜನು, ಬಿತ್ತಿದ ಬೀಜವನ್ನೆಲ್ಲ ನುಂಗಿ ಬಿಡುತ್ತಿದ್ದ ಭೂದೇವಿಯಮೇಲೆ ಸಿಟ್ಟಾಗಿ ಭೂಮಿಯನ್ನೆಲ್ಲ ಒಮ್ಮೆಗೆ ಸುಟ್ಟು ಬಿಡುವೆನೆಂದು, ಧನುರ್ಧಾರಿಯಾದ ಆತನೆದುರು ಭೂದೇವಿಯು ಗೋರೂಪಧಾರಣ ಮಾಡಿ ನಿಂತು, "ಲೋಕದ ಪ್ರಜಾಪಾಲಕರು ಸಕಲ ಔಷಧಾದಿ ಪದಾರ್ಥಗಳನ್ನು ದುರ್ವಿನಿಯೋಗ ಮಾಡುತ್ತಾ ಬಂದುದನ್ನು ಕಂಡು, ಸಹಿಸಲಾರದೆ ಹಾಗೆ ಮಾಡಿದೆನೆಂದು ಹೇಳಿ, ಗೋರೂಪಿಯಾದ ನನಗೆ ತಕ್ಕಂತೆ ಕರುವನ್ನು, ಕರೆಯುವ ಪಾತ್ರೆಯನ್ನು, ಕರೆಯತಕ್ಕ ಪುರುಷನನ್ನೂ ಅನುಗೊಳಿಸು; ಕರುವಿಗಾಗಿ ಗೋವು ಹಾಲ್ಗರೆಯುವಂತೆ ನಾನೂ ಸಹ ಆ ವತ್ಸವಾತ್ಸಲ್ಯದಿಂದಬೇಕುಬೇಕಾದ ಪದಾರ್ಥಗಳನ್ನು ಒದಗಿಸಿಕೊಡುವೆನು. ಅದರಿಂದ ನಿನಗೂ ನಿನ್ನ ಪ್ರಜೆಗಳಿಗೂ ಕ್ಷೇಮ ಉಂಟಾಗಲೆಂದು" ಹೇಳಿದಳು.

ಗೊರೂಪೀ ಭೂಮಾತೆಯ ಮಾತಿನಂತೆ ಪೃಥು ಚಕ್ರವರ್ತಿಯು, ಸ್ವಾಯಂಭುವ ಮನುವನ್ನು ಕರುವನ್ನಾಗಿ ಮಾಡಿ, ತನ್ನ ಕೈಗಳನ್ನೇ ಕರೆಯುವ ಪಾತ್ರೆಯನ್ನಾಗಿ ಭಾವಿಸಿ, ಕರೆಯಲು ತಾನೇ ನಿಂತನು. ಗೋರೂಪೀ ಭೂದೇವಿಯ ಸ್ತನಗಳಿಂದ ಸಕಲ ಸಾರ ವಸ್ತುಗಳನ್ನು, ಸಸ್ಯ ವರ್ಗಗಳನ್ನು ಕರೆದನು. ಇಂದ್ರಾದಿ ದೇವತೆಗಳೂ, ಗಂಧರ್ವರೂ, ಯಕ್ಷ–ರಾಕ್ಷಸರೂ, ಮಹರ್ಷಿಗಳೂ, ಚರಾಚರ ಪ್ರಾಣಿವರ್ಗಗಳೂ, ತಮತಮಗೆಬೇಕಾದ ಫಲರೂಪವಾದ



ಸಾರವಸ್ತುಗಳನ್ನೆಲ್ಲ ಯೋಗ್ಯವತ್ಸರೂಪಿ ವಸ್ತುಗಳ ದ್ವಾರಾ ಭೂದೇವಿಯಿಂದ ಪಡೆದು ಕೊಂಡರು.

ಹೀಗೆ ಪೃಥು ಚಕ್ರವರ್ತಿಯ ರೂಪದಿಂದ ಲೋಕಹಿತಕ್ಕಾಗಿ ಗೋರೂಪೀ ಭೂದೇವಿಯ ದೋಹನ ಕಾರ್ಯವೆಸಗಿದಂಥ,[೨೦೬] – **ಶ್ರೀಹರಿಯು.**

**೪೨೩. ದೌತ್ಯಕರ್ಮಗ**

ಪಗಡೆಯಾಟದಲ್ಲಿ ಸೋತ ಪಾಂಡವರು ಹನ್ನೆರಡು ವರ್ಷವನವಾಸ ಹಾಗೂ ಒಂದುವರ್ಷ ಅಜ್ಞಾತವಾಸವನ್ನು ಕಳೆದು, ವಿರಾಟರಾಜನ ರಾಜಧಾನಿಯಲ್ಲಿ ಪ್ರಕಟವಾದನಂತರ, ತಮ್ಮ ರಾಜ್ಯವನ್ನು ತಮಗೆ ಮರಳಿಕೊಡಬೇಕೆಂದು ಓರ್ವ ಪುರೋಹಿತನಿಂದ ಹೇಳಿಕಳುಹಿ ವಿಫಲರಾದ ಬಳಿಕ ಕೌರವ ಸಭೆಗೆ ಪಾಂಡವರ ದೂತನಾಗಿ ಶ್ರೀಕೃಷ್ಣ ಪರಮಾತ್ಮನು ತಾನೇ ಹೋಗಿ ಅವರಿಗೆ ಪಾಂಡವರ ಪರವಾಗಿ ಅವರ ಕೋರಿಕೆಯನ್ನು ಧೃತರಾಷ್ಟ್ರನಿಗೆ ಅರುಹಿ, ದೂತಕಾರ್ಯವನ್ನೆಸಗಿದಂಥ ಶ್ರೀಕೃಷ್ಣಾವತಾರದ – **ಶ್ರೀಹರಿಯು.**

**೪೨೪. ದ್ರುಹಿಣದೇಹ್ಯಗ** – ದ್ರುಹಿಣ – ಬ್ರಹ್ಮ

ಬ್ರಹ್ಮದೇವರ ದೇಹದಲ್ಲಿಯೂ ಇದ್ದಂಥ – ಶ್ರೀಹರಿಯು.

**೪೨೫. ದಂಡಕಾರಗ**

ದಂಡನೆ ಮಾಡುವಂಥ ರಾಜರಲ್ಲಿ – ರಾಜೇಶ್ವರ ರೂಪದಲ್ಲಿ ಇರುವಂಥ – ಶ್ರೀಹರಿಯು.

**೪೨೬. ದರ್ಪಕ ಸಹ**

ಅಸುರರು ಎಸೆದ ದರ್ಪನಾಶಕ ಶಸ್ತ್ರಾಸ್ತ್ರಗಳನ್ನು ಸಹಿಸುವಂಥ – **ಶ್ರೀಹರಿಯು.**

**ಧ**ರ್ಮನಿಚಯಪ **ಧಾ**ತುಸಮೂಹಪ ।
ಕರ್ಮ**ಧಿ**ಷಣಪ **ಧೀ**ರ ಪ್ರಜ್ಞಪ ।
ನರ್ಮವಾಗ್ಮಿಪ **ಧು**ನಿಕದಂಬಪ ಧೂರ್ಜಚಾಂಕಿತಪ ॥
**ಚರ್ಮಖಡ್ಗಪ ಧೇ**ನುವಿಪ್ರಪ ।
ವರ್ಮ **ಧೈ**ರ್ಯಾಂಕಿತಪಾಧೋಕ್ಷಜ ।
ನಿರ್ಮಲಾತ್ಮ **ಧೌ**ಮ್ಯರ್ಗಪ ಧ್ವನಿಪ ಜನಪ ನಮೋ ॥ ೩೧ ॥
(ಈ ನುಡಿಯಲ್ಲಿ –**ಧಂ, ಧಃ**– ಅಕ್ಷರಮಾಲೆ ಉಳಿದಿವೆ)

**೪೨೭. ಧರ್ಮನಿಚಯಪ** ನಿಚಯ = ಸಮೂಹ

ಧರ್ಮ ಸಮುದಾಯವನ್ನು, ಮಾಡುವವರನ್ನು ರಕ್ಷಿಸುವಂತಹ – **ಶ್ರೀಹರಿಯು.**

**೪೨೮. ಧಾತು ಸಮೂಹಪ**

ರಸರಕ್ತಾದಿ ಸಪ್ತಧಾತುಗಳ ಸಮೂಹವನ್ನು ರಕ್ಷಿಸುವಂಥ – **ಶ್ರೀಹರಿಯು.**

---

೨೦೬. ಶ್ರೀಮದ್ಭಾಗವತ ನಾಲ್ಕನೇಯಸ್ಕಂಧ ೧೪,೧೫,೧೬,೧೭ ಹಾಗೂ ೧೮ನೇಯ ಅಧ್ಯಾಯಗಳು.

**೪೨೯. ಕರ್ಮಧೀಷಣಪ**

ಕರ್ಮದಲ್ಲಿ ಬುದ್ಧಿಯುಳ್ಳ ಜನಕಾದಿ ರಾಜರನ್ನು ಪಾಲಿಸಿದಂಥ – **ಶ್ರೀಹರಿಯು.**

**೪೩೦. ಧೀರಪ್ರಜ್ಞಪ**

ಒಳ್ಳೇ ಜ್ಞಾನವುಳ್ಳಂಥವರನ್ನು ರಕ್ಷಣೆ ಮಾಡುವಂಥ – **ಶ್ರೀಹರಿಯು.**

**೪೩೧. ನರ್ಮವಾಗ್ಮಿಪ**

ಜೇಷ್ಟಯುತವಾದ ಒಳ್ಳೇಮಾತುಗಾರರನ್ನು ಪಾಲಿಸುವಂಥ – **ಶ್ರೀಹರಿಯು.**

**೪೩೨. ಧುನಿದಂಬಪ**

ಧುನಿ = ಧ್ವನಿ; ಕದಂಬ = ಸಮುದಾಯ

(೧) ಧ್ವನಿ ಸಮುದಾಯವನ್ನು ಸಂರಕ್ಷಿಸುವಂಥ – **ಶ್ರೀಹರಿಯು.**

ಧುನಿ – ಅಂದರೆ ನದಿ. – "ತಾರಿಣೀ ಹ್ರಾದಿರ್ನೀ ಧುನಿ" – ಅಮರಕೋಶ

ನದಿಗಳ ಸಮುದಾಯವನ್ನು ರಕ್ಷಿಸುವಂಥ – **ಶ್ರೀಹರಿಯು.**

**೪೩೩. ಧೂರ್ಜಟಾಂಕಿತ ಪ**

ಧೂರ್ಜಡೆಯುಳ್ಳ ರುದ್ರದೇವರನ್ನು ಪಾಲಿಸಿದಂಥ – **ಶ್ರೀಹರಿಯು.**

ನಾಮ – **೨೭೨** – **'ಗಿರಿಗಣಸೇವ್ಯ'** – ನೋಡಿರಿ

**೪೩೪. ಚರ್ಮಪ;** **೪೩೫. ಖಡ್ಗಪ**

ಚರ್ಮಢಾಲು ಹಾಗೂ ಖಡ್ಗಗಳನ್ನು ಹಿಡಿದು ಕಾದಾಡುವ ಸೈನಿಕರನ್ನು ರಕ್ಷಿಸುವಂಥ – ಶ್ರೀಹರಿಯು – ತಾನೇ ಯುದ್ಧದಲ್ಲಿ ಒಂದು ಕೈಯಲ್ಲಿ ಕತ್ತಿ ಹಾಗೂ ಇನ್ನೊಂದು ಕೈಯಲ್ಲಿ ಢಾಲು (ಕಲ್ಲಾವಿಯ ಬೆನ್ನಿನ ಚರ್ಮ) ಧರಿಸಿದಂಥ – **ಶ್ರೀಹರಿಯು.**

**೪೩೬. ಧೇನುಪ;** **೪೩೭. ವಿಪ್ರಪ**

(೧) ಬ್ರಾಹ್ಮಣರನ್ನೂ ಆಕಳನ್ನೂ ರಕ್ಷಿಸುವಂಥ – ಶ್ರೀಹರಿಯು.

(೨) ಕಾರ್ತ್ಯವೀರ್ಯಾರ್ಜುನನು ಭೃಗುವಂಶದ ಜಮದಗ್ನಿ ಮುನಿಯನ್ನು ಸಂಹರಿಸಿ, ಆತನ ಕಾಮಧೇನುವನ್ನು ಅಪಹರಿಸಿಕೊಂಡೊಯ್ದನು. ಆಗ ಜಮದಗ್ನಿ ಮುನಿಯ ಮಗನಾಗಿ ಅವತರಿಸಿದ ಪರಶುರಾಮ ರೂಪೀ ಶ್ರೀಹರಿಯು, ಆ ಕಾರ್ತ್ಯವಿರ್ಯಾರ್ಜುನನ್ನು ಸಂಹರಿಸಿ, ಆತನ ಹೃದಯದಲ್ಲಿದ್ದ ಅಮೃತಕುಂಡವನ್ನು ತಂದು ಜಮದಗ್ನಿ ಮುನಿಯನ್ನು ಸಜೀವಗೊಳಿಸಿ, ಕಾಮಧೇನುವನ್ನೂ ಮರಳಿ ತಂದ ಪರಶುರಾಮಾವತಾರದ – **ಶ್ರೀಹರಿಯು.**

**೪೩೮. ವರ್ಮಧೈರ್ಯಾಂಕಿತ ಪ**

ಕವಚವನ್ನು ಧರಿಸಿದಂಥ ಹಾಗೂ ಧೈರ್ಯಯುಕ್ತರಾದ ಯೋಧರನ್ನು ರಕ್ಷಿಸುವಂಥ – **ಶ್ರೀಹರಿಯು.**

**೪೩೯. ಅಧೋಕ್ಷಜ**

ಎಂದೆಂದೂ ಅಪಕರ್ಷವನ್ನು ಹೊಂದದೇ ಇರುವಂಥ[೨೦೭] – **ಶ್ರೀಹರಿಯು.**

೨೦೭. ಮಹಾಭಾರತ ಉದ್ಯೋಗಪರ್ವ ೭೦–೧೦



**೪೪೦. ನಿರ್ಮಲಾತ್ಮ**

ದೋಷರಹಿತ ಹಾಗೂ ನಿರ್ಮಲವಾದ ಆತ್ಮವುಳ್ಳಂಥ – ಶ್ರೀಹರಿಯು.

ನಾಮ – ೧೨೫ "ಅಶೇಷದೋಷ ವಿದೂರ" ನೋಡಿರಿ

**೪೪೧. ಧೌಮ್ಯಪ**

ಧೌಮ್ಯ ಋಷಿಗಳನ್ನು ಪಾಲಿಸಿದಂಥ – **ಶ್ರೀಹರಿಯು.**

**೪೪೨. ಗರ್ಗಪ**

ಗರ್ಗಾಚಾರ್ಯರು ಒಮ್ಮೆ ಯಾದವರ ಮೇಲೆ ಸಿಟ್ಟಾಗಿ ಅವರನ್ನು ನಾಶಗೊಳಿಸುವಂಥ ಮಗನನ್ನು ಪಡೆದೇನೆಂದು ತಪಮಾಡಿ ಯವನಸ್ತ್ರೀಯಲ್ಲಿ "ಕಾಲಯವನ"ವೆಂಬ ಮಗನನ್ನು ಪಡೆದರು. ಆ ಮೇಲೆ ಪಶ್ಚಾತ್ತಾಪದಿಂದ ಶ್ರೀಕೃಷ್ಣನಲ್ಲಿ ಶರಣಹೋದಾಗ, ಗರ್ಗಾಚಾರ್ಯರಿಂದ ವಿಷ್ಣುಪಂಚಕ ವೃತಮಾಡಿಸಿ ಅವರನ್ನು ಪಾಲಿಸಿದ ಶ್ರೀಕೃಷ್ಣಾವತಾರದ,[೨೦೮] – ಶ್ರೀಹರಿಯು.

**೪೪೩. ಧ್ವನಿಪ**

ಧ್ವನಿ ರಕ್ಷಕನಾದಂಥ – ಉದಾಹರಣೆಗಾಗಿ – ಧ್ರುವನ ತಪಸ್ಸಿನ ಕಾಲಕ್ಕೆ, ಆತನ ಗಲ್ಲಕ್ಕೆ ಶಂಖದಿಂದ ಸ್ಪರ್ಶ ಮಾಡಿದ ಕೂಡಲೆ ಆತನಿಗೆ ಜ್ಞಾನೋದಯವಾಗಿ ಆತನು ಶ್ರೀಹರಿಯನ್ನು ಪ್ರಾರ್ಥಿಸಲು ಸಮರ್ಥನಾದನು. ಇಂಥ – ಧ್ವನಿ ರಕ್ಷಕನಾದಂಥ – ಶ್ರೀಹರಿಯು.

**೪೪೪. ಜನಪ**

ನಾಮ – ೩೮. "ಜನಪ" ನೋಡಿರಿ

ನಗವಿಧೃತಕರ **ನಾ**ಗಗರ್ವಹನ್ ।<br>
**ನಿ**ಗಮರಿಪುನಾಶಕ **ನೀ**ತಪ್ರಭು ।<br>
ಸುಗಣಸೇವ್ಯ **ನು**ತಜನಮಂದಾರ **ನೂ**ತನಾಬ್ಜಾಂಘ್ರೀ ॥<br>
ಯುಗಯುಗಾಂತರ**ನೇ**ಮನೈಷ್ಟಿಕ ।<br>
ಸುಗುಣ**ನೋ**ದಧೆ ಸೌಗನಂದಕ ।<br>
ವಿಗತ ಸ್ನೇಹವಿಮನಷ್ಟ ಜಗದೋಧರಣಶೀಲ ನಮೋ ॥ ೩೨ ॥<br>
(ಈ ನುಡಿಯಲ್ಲಿ –**ನೌ** ಹಾಗೂ **ನಃ**– ಅಕ್ಷರಮಾಲೆ ಉಳಿದಿವೆ)

**೪೪೫. ನಗ ವಿಧೃತ್‌ಕರ**

ಗೋವರ್ಧನ ಪರ್ವತವನ್ನೆತ್ತಿದ ಕೃಷ್ಣಾವತಾರದ – ಶ್ರೀಹರಿಯು. ನಾಮ – ೭೮ – "ಶಕ್ರಅರ್ಚಿತ ಪದಾಬ್ಜ" ನೋಡಿರಿ.

**೪೪೬. ನಾಗಗರ್ವಹನ್**

ನಾಮ – ೭೫ – "ನಾಗರಕ್ಷಕ" ಹಾಗೂ ೨೩೦ "ಫಣಿಮದಹರ" ನೋಡಿರಿ

೨೦೮. ಶ್ರೀಮದ್ಭಾಗವತ ಸ್ಕಂದ ಅಧ್ಯಾಯ

**೪೪೭. ನಿಗಮರಿಪುನಾಶಕ**

ನಾಮ – "ಕಫಲಿ ರೂಪ" ನೋಡಿರಿ

**೪೪೮. ನೀತಪ್ರಭುನೀತಾಃ**

**(ಪ್ರಭವಃ ಬಂಧನಾತ್ ಏನ ಸಹಾ = ನೀತಪ್ರಭು)**

ಜರಾಸಂಧನಲ್ಲಿ ಬಂಧನದಲ್ಲಿದ್ದ ರಾಜರನ್ನು ಬಂಧನ ಮುಕ್ತರನ್ನಾಗಿ ಮಾಡಿದ ಕೃಷ್ಣಾವತಾರದ – **ಶ್ರೀಹರಿಯು.**

**೪೪೯. ಸುಗಣಸೇವ್ಯ ಸು+ಗಣ+ಸೇವ್ಯ**

ಶ್ರೇಷ್ಠರಾದ ಋಜುಗಣದವರಿಂದ ಸೇವಿತನಾಗುವಂಥ – **ಶ್ರೀಹರಿಯು.**

**೪೫೦. ನುತಜನಮಂದಾರ**

ತನ್ನನ್ನು ಸೇವಿಸಿದ ಜನರಿಗೆ ಮಂದಾರ ವೃಕ್ಷದಂತೆ ಅಭಿಷ್ಟವನ್ನು ಕೊಡುವಂಥ – **ಶ್ರೀಹರಿಯು.**

**೪೫೧. ನೂತನಾಬ್ಜಾಂಘ್ರಿ**

ನೂತನಕಮಲದಂತೆ ಕೋಮಲಪಾದಗಳುಳ್ಳಂಥ – **ಶ್ರೀಹರಿಯು.**

**೪೫೨. ಯುಗಯುಗಾಂತರನೇಮ**

ಯುಗ ಯುಗಾಂತರಗಳ ನಿಯಮನಗಳನ್ನು ಮಾಡುವಂಥ – **ಶ್ರೀಹರಿಯು.**

**೪೫೩. ನೈಷ್ಟಿಕ ಸುಗುಣನೋದಧೆ**

ನಾಮ (೧) ೭೪೫ ಷಡ್ಗುಣೇಶ್ವರ

(೨) ೨೯. ಬಲಪೂರ್ಣ – ನೋಡಿರಿ

**೪೫೪. ಸೌಗನಂದಕ**

ಸೌ = ಸುಮನ = ಸೌಮನ ಅಂಥವರು, ಸೌಗಃತಾನ್ ನಂದಯತಿ ।

ಒಳ್ಳೆಯ ಮನಸ್ಸುಳ್ಳವರನ್ನು ಸಂತೋಷಪಡಿಸುವಂಥ –**ಶ್ರೀಹರಿಯು.**

**೪೫೫. ವಿಗತಸ್ನೇಹವಿನಷ್ಟ**

ಸ್ಥಾಮಪಲ್ಲಟದಿಂದ ವಿನಷ್ಟವಿಗತ ಸ್ನೇಹ

ದುಷ್ಟರ ಸ್ನೇಹವಿಲ್ಲದಂಥ – **ಶ್ರೀಹರಿಯು.**

ವಿ.ವಿ. ಪರಾಪೂರ್ವೇಕಾಮ್ ಸರತ್ಯಾ ವೃಣೋ ವಿರ್ತರಾಣೋ ಅಪರೋಭಿರೋತಿ ಋಗಮಮ್ ॥ – ಭೃಗುವಂಶಾ

**೪೫೬. ಜಗದೋದ್ಧರಣಶೀಲ;** ಉದ್ಧರಣ – ಎತ್ತಿಹಿಡಿ

ನಾಮ (೧) ೭೨. ವರಹ (೨) ಮೂಗಸಂಭವ – ನೋಡಿರಿ

**ಪ**ವನ ಮತ ಪರ **ಪಾ**ಕಭಿತ್ತಂ ।



ಸ್ತವನನಿರತ ಪಿನಾಕಿಮೋಹಕ ।
ಸುವಧು ಪೀಯೂಷಧರ ಸು**ಪು**ಷ್ಪವಿಹಾಸ **ಪೂ**ರ್ಣಪ್ರಭಾ ॥
ಕವಿವರದ ಜೈಮಿನಿ ಸುಮಂತ **ಪೈ**–।
ಲ ವೈಶಂಪಾಯನ ಶುಕವಿ**ಪೋ**ಷಕ ಪೌರಾ – ।
ಣ ವಿರಚಕ **ಪಂ**ಚರಾತ್ರ ಭಾರತ ಸೂತ್ರಕರ್ತ ನಮೋ ॥ ೩೩ ॥
(ಈ ನುಡಿಯಲ್ಲಿ –**ಪೇ** ಹಾಗೂ **ಪಃ**– ಅಕ್ಷರಮಾಲೆ ಉಳಿದಿವೆ)

**೪೫೭. ಪವನಮತಪರ**

ನಾಮ ೮೪೬ "ವಾತಸುತಮತ" ನೋಡಿರಿ.

**೪೫೮. ಪಾಕಭಿತ್ತಂ**

ಪಾಕಶಾಸನಃ ಅಂದರೆ ಇಂದ್ರ; ಅವನಲ್ಲಿದ್ದ ಪಾಕನೆಂಬದೈತ್ಯನನ್ನು ಸಂಹರಿಸಲು ಬಲನೀಡಿದ – **ಶ್ರೀಹರಿಯು.**

**೪೫೯. ಸ್ತವನನಿರತ ಪಿನಾಕಿಮೋಹಕಸುವಧು**

ತನ್ನ ಸ್ತುತಿಯಲ್ಲಿಯೇ ನಿರತನಾಗಿರುವಂಥ ಪಿನಾಕಿ ಅಂದರೆ ಶಂಕರನನ್ನು ಸಂಹರಿಸಲು ಬಲ ನೀಡಿದ – **ಶ್ರೀಹರಿಯು.**

**೪೬೦. ಪೀಯೂಷಧರ**

ಪೀಯೂಷ = ಅಮೃತ; ಪೀಯೂಷಧರ – ಅಮೃತಕಲಶಧರಿಸಿದಂಥ ಶ್ರೀಧನವಂತರಿರೂಪೀ – **ಶ್ರೀಹರಿಯು.**

**ತ್ರಿವಿಡಿತಾಳ –**

**ಅಸುರನಿರ್ಜರತತಿ ನೆರೆದು ಗಿರಿಯತಂದು ।**
**ಮಿಸಕದಲೆ ಮಹೋದಧಿ ಮರ್ದಿಸಲಾಗಿ ।**
**ನಸುನಗುತ ಪುಟ್ಟಿದೆ ಪೀಯೂಷಘಟಧರಿಸಿ ।**
**............................................................ ।**
**ದಶದಿಶದೊಳು ಮೆರೆವ ವಿಜಯವಿಠ್ಠಲ ಬಿಷ್ಕಾ ।**
**ಅಸು ಇಂದ್ರಿಯಂಗಳ ರೋಗ ನಿವಾರಣ ॥ ೩ ॥,**[೨೦೯]

**ಶ್ರೀ ಭಾಗವತ ಸಾರೋದ್ಧಾರದ ಶ್ಲೋಕ ೨೨೪**

**ಏವಂ ಸುರಾಸುರಾಣಾಃ ಸಮದೇಶಕಾಲ –**
**ಹೇತ್ವರ್ಥಯೋಗಗತಯೋಽಪಿ ಫಲೆ ವಿಕಲ್ಪಾಃ ।**
**ತತ್ವಾಮೃತಂ ಸುರಗಣಾಃ ಫಲಮಂಜಸಾಪು –**
**ರ್ಯತ್ಪಾದ ಪಂಕಜರಜಃ ಶ್ರಯಣಾನ್ನದೈತ್ಯಾಃ ॥ ೮–೮–೨೩ ॥**

---

೨೦೯. ಶ್ರೀವಿಜಯದಾಸರ ಶ್ರೀ ಧನ್ವಂತ್ರಿ ಅವತಾರ ಸ್ತೋತ್ರ ಸುಳಾದಿ
ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ – "ಸ್ತೋತ್ರಸುಳಾದಿ" ಪುಟ – ೪೬

"ಸಮುದ್ರ ಮಥನದ ಕಾಲದಲ್ಲಿ, ಕಾಲ, ದೇಶ, ಕಾರ್ಯ ಒಂದೇ ಆಗಿದ್ದರೂ, ನಿನ್ನನ್ನು ಅರಿತ ದೇವತೆಗಳು ಅಮೃತವನ್ನು ಪಡೆದರು; ಅರಿಯದೆ ದೈತ್ಯರು ಮದ್ಯವನ್ನೇ ಪಡೆದು ತೃಪ್ತರಾದರು".[೨೧೦]

**೪೬೧. ಸುಪುಷ್ಪವಿಹಾಸ**

ಯಾವಾಗಲೂ ಆನಂದದಿಂದ ನಗುತ್ತಿರುವ – ಶ್ರೀಕೃಷ್ಣಾವತಾರದ – **ಶ್ರೀಹರಿಯು.**

**೪೬೨. ಪೂರ್ಣಪ್ರಭಾ**

ಸೂರ್ಯ, ಚಂದ್ರ, ನಕ್ಷತ್ರಾದಿಗಳು ಪ್ರಕಾಶಕಗಳು. ಆದರೆ ಅವೆಲ್ಲ ಸಹಜವಾಗಿ ಪ್ರಕಾಶಿಸುವುಗಳಲ್ಲ. ಭಗವಂತನೇ ಸ್ವಾಭಾವಿಕವಾಗಿ ಪ್ರಕಾಶಕನೆನಿಸಿದ್ದು ಅವನ ಪ್ರಕಾಶವನ್ನು ಅನುಸರಿಸಿಕೊಂಡು, ಆಶ್ರಯಿಸಿಕೊಮಡು ಉಳಿದ ಪ್ರಕಾಕ ಪದಾರ್ಥಗಳು ಪ್ರಕಾಶಿಸುತ್ತವೆ – ಎಂಬುದಾಗಿ ಉಪನಿಷತ್ತುಗಳು ಸಾರುತ್ತಿವೆ.[೨೧೧]

ಜಗತ್ತನ್ನು ಬೆಳಗುವ ಆದಿತ್ಯನಲ್ಲಿರುವ ತೇಜಸ್ಸು ಹಾಗೂ ಚಂದ್ರ ಮತ್ತು ಅಗ್ನಿಯಲ್ಲಿರುವ ತೇಜಸ್ಸು – ನ್ನದೆಂದು ತಿಳಿ; ಎಂಬುದಾಗಿ ಗೀತಾಚಾರ್ಯನು ಸಂದೇಶಿಸಿರುವನು.[೨೧೨]

"ಪರಾವರ" ಎನಿಸಿರುವ ಭಗವಂತನು ರವಿಯಲ್ಲಿಕೊಂಡು; ಬ್ರಹ್ಮಾಂಡದ ಮಧ್ಯದಲ್ಲಿರುವವನಾಗಿ ಎಲ್ಲವನ್ನು ಬೆಳಗಿಸುತ್ತಿರುವನೆಂದು ಅಥರ್ವಣೋಪನಿಷತ್ತು ತಿಳಿಸುತ್ತದೆ.[೨೧೩]

ಹೀಗೆ ನಿಜವಾಗಿ ತಾನೇ ಪ್ರಕಾಶಿಸುವವನಾಗಿ, "ಪೂರ್ಣಪ್ರಭಾ" ಎಂದೆನಿಸಿಕೊಳ್ಳುವಂಥ.[೨೧೪] **– ಶ್ರೀಹರಿಯು.**

**೪೬೩. ಕವಿವರದ**

ಕವಿ ಅಂದರೆ ಬ್ರಹ್ಮದೇವರು; ಅವರಿಗೆ ಜ್ಞಾನೋಪದೇಶ ಮಾಡಿದಂಥ – **ಶ್ರೀಹರಿಯು.**

**೪೬೪. ಜೈಮಿನಿ ವಿಪೋಷಕ;** **೪೬೫. ಸುಮಂತ ವಿಪೋಷಕ;**

**೪೬೬. ವೈಶಂಪಾಯನ ವಿಪೋಷಕ;** **೪೬೭. ಪೈಲ ವಿಪೋಷಕ**

**೪೬೮. ಶುಕ ವಿಪೋಷಕ**

ಅಲ್ಪಾಯುಗಳೂ ಮಂದ ಬುದ್ಧಿಗಳೂ ಆದ ಜನರನ್ನು ನೋಡಿ, ದ್ವಾಪರಾಂತ್ಯದಲ್ಲಿ ಧರ್ಮರಕ್ಷಣೆಗಾಗಿ ಬ್ರಹ್ಮರುದ್ರಾದಿ ದೇವತೆಗಳಿಂದ ಪ್ರಾರ್ಥಿತನಾದ "ನಾರಾಯಣ"ನು ಪರಾಶರದಿಂದ ಸತ್ಯವತಿಯಲ್ಲಿ "ವೇದವ್ಯಾಸ" ನಾಮಕನಾಗಿ ಅವತರಿಸಿ, ಋಕ್, ನಿಗಮ (ಯಜು), ಸಾಮ, ಅಥರ್ವವೆಂಬ ನಾಲ್ಕು ವೇದಗಳಿಂದ ಉದ್ಧೃತಗಳಾದ ಋಕ್, ಯಜಸ್ಸು,

೨೧೦. ಶ್ರೀಮದ್ಭಾಗವತ ಸಾರೋದ್ಧಾರದ – ಅಧ್ಯಾತ್ಮ ಪ್ರಕರಣದಲ್ಲಿಯ ೨೨೨೪ನೇ ಶ್ಲೋಕ. ಮೂಲಭಾಗವತದ ಅಷ್ಟಮಸ್ಕಂಧದ ಅಷ್ಟಮೋಧ್ಯಾಯದ ೨೩ನೇ ಶ್ಲೋಕ.
೨೧೧. ಕಾಠೋಪನಿಷತ್ತು ೨–೪–೩–೩–೩; ಹಾಗೂ ಅಥರ್ವಣೋಪನಿಷತ್ತು ೨–೧–೧೨
೨೧೨. ಶ್ರೀದ್ಭಗವದ್ಗೀತಾ ಅಧ್ಯಾಯ ೧೫ ಶ್ಲೋಕ ೧೨
೨೧೩. ಅಥರ್ವಣೋಪನಿಷತ್ತು ೨–೧–೧೨ ಹಾಗೂ ಅದರ ಭಾಷ್ಯ
೨೧೪. ಶ್ರೀವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿಟೀಕೆ ನಾಮ –೧೨೮ "ಭಾನುಃ"ಕ್ಕೆ ಪುಟ – ೪೪೭



ಸಾಮ, ಅಥರ್ವಣ ಸಂಹಿತೆಗಳೆಂಬ ನಾಲ್ಕು ಸಂಹಿತೆಗಳನ್ನು ಮಾಡಿ – ಪೈಲ, ವೈಶಂಪಾಯನ, ಜೈಮಿನಿ ಮತ್ತು ಸುಮಂತು ಎಂಬ ಋಷಿಗಳಿಗೆ ಕ್ರಮವಾಗಿ ಉಪದೇಶಿಸಿದರು; ಹಾಗೂ ವೇದವ್ಯಾಸರ ಸಾಕ್ಷಾತ್ ಪುತ್ರರಾದ ಶುಕಾಚಾರ್ಯರಿಗೆ ಈ ನಾಲ್ಕು ಸಂಹಿತೆಗಳನ್ನಲ್ಲದೆ ಹದಿನೆಂಟು ಪುರಾಣಗಳನ್ನು ಉಪದೇಶಿಸಿದರು.

ಶುಕಾಚಾರ್ಯರು ರುದ್ರಾವತಾರರು; ಹಾಗೂ ವಾಯುದೇವರ ಆವೇಶಯುಕ್ತರು; ವೈಶಂಪಾಯನರು ಬ್ರಹ್ಮಾಂಶಯುಕ್ತರು; ಪೈಲ, ಸುಮಂತ ಹಾಗೂ ಜೈಮಿನಿಗಳಲ್ಲಿ ಕ್ರಮವಾಗಿ ಶೇಷ, ಗರುಡ, ಮತ್ತು ಇಂದ್ರರ ಸನ್ನಿಧಾನವಿದೆ.[೨೧೫] ಹೀಗೆ ಬ್ರಹ್ಮಾದಿ ದೇವತೆಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ವ್ಯಾಸಶಿಷ್ಯರಾಗಿ ಜ್ಞಾನ ಪಡೆದಿದ್ದಾರೆ.[೨೧೬] ಆ ಕಾಲದಲ್ಲಿ ಅವತರಿಸಿದ್ದ ಪ್ರತಿಯೊಬ್ಬ ದೇವತೆಯೂ ವ್ಯಾಸರ ಶಿಷ್ಯನೇ ಆಗದ್ದನು.[೨೧೭]

ಆದ್ದರಿಂದ ಶುಕ, ಪೈಲ, ವೈಶಂಪಾಯನ, ಜೈಮಿನಿ ಹಾಗೂ ಸುಮಂತ ಇವರೆಲ್ಲರಿಗೂ ಜ್ಞಾನ ನೀಡಿ ಪೋಷಕನಾದಮಥ – ವ್ಯಾಸಾವತಾರದ – **ಶ್ರೀಹರಿಯು.**

**೪೬೯. ಪೌರಾಣವಿರಚಕ**

ವೇದಾರ್ಥವನ್ನು ನಿರ್ಣಯ ಮಾಡುವ ಋಷಿಪ್ರೋಕ್ತವಾದ ಗ್ರಂಥಗಳೇ ಪುರಾಣಗಳು, ಇವುಗಳಲ್ಲಿ ಮಹಾಪುರಾಣ ಮತ್ತು ಉಪಪುರಾಣವೆಂದು ಎರಡು ವಿಧ. ಮಹಾಪುರಾಣಗಳು ಹದಿನೆಂಟು. (೧) ಬ್ರಹ್ಮಪುರಾಣ (೨) ಪದ್ಮಪುರಾಣ (೩) ವಿಷ್ಣುಪುರಾಣ (೪) ಶಿವಪುರಾಣ (೫) ಭಾಗವತಪುರಾಣ (ದೇವೀಭಾಗವತ) (೬) ನಾರದೀಯ ಪುರಾಣ (೭) ಮಾರ್ಕಂಡೇಯ ಪುರಾಣ (೮) ಅಗ್ನಿಪುರಾಣ (೯) ಭವಿಷ್ಯತ್ ಪುರಾಣ (೧೦) ಬ್ರಹ್ಮ ವೈವರ್ತಪುರಾಣ (೧೧) ಲಿಂಗ ಪುರಾಣ (೧೨) ವರಾಹಪುರಾಣ (೧೩) ಸ್ಕಂಧಪುರಾಣ (೧೪) ವಾಮನಪುರಾಣ (೧೫) ಕೂರ್ಮಪುರಾಣ (೧೬) ಮತ್ಸಪುರಾಣ (೧೭) ಗರುಡ ಪುರಾಣ (೧೮) ಬ್ರಹ್ಮಾಂಡ ಪುರಾಣ.

ಇವುಗಳಲ್ಲಿ ಒಟ್ಟು ನಾಲ್ಕು ಲಕ್ಷ ಶ್ಲೋಕಗಳಿವೆ. ಇವುಗಳಲ್ಲಿ ಹತ್ತು ಶಿವಪುರಾಣಗಳು, ನಾಲ್ಕು ವಿಷ್ಣು ಪುರಾಣಗಳು, ಎರಡು ಬ್ರಹ್ಮ ಪುರಾಣಗಳು ಒಂದು ಸೂರ್ಯಪುರಾಣ, ಒಂದು ಅಗ್ನಿಪುರಾಣ; ಹೀಗೆ ಉಂಟು.

ಉಪಪುರಾಣಗಳು ಹದಿನೆಂಟು – (೧) ಸನತ್ಕುಮಾರ ಪುರಾಣ (೨) ನಾರಸಿಂಹಪುರಾಣ (೩) ನಂದಿಪುರಾಣ (೪) ಶಿವಧರ್ಮಪುರಾಣ (೫) ದುರ್ವಾಸಪುರಾಣ (೬) ನಾರದೀಯ ಪುರಾಣ (೭) ಕಪಿಲ ಪುರಾಣ (೮) ಮಾನವ ಪುರಾಣ (೯) ಉಶನಃ ಪುರಾಣ (೧೦) ಬ್ರಹ್ಮಾಂಡ ಪುರಾಣ (೧೧) ವಾರುಣಪುರಾಣ (೧೨) ಕಾಳೀ ಪುರಾಣ (೧೩) ವಾಷಿಷ್ಠ ಲೈಂಗಪುರಾಣ, (೧೪) ಸಾಂಗಪುರಾಣ (೧೫) ಸೌರ ಪುರಾಣ (೧೬) ಪರಾಶರ ಪುರಾಣ (೧೭) ಮರೀಚಿ ಪುರಾಣ (೧೮) ಭಾರ್ಗವ ಪುರಾಣ.

೨೧೫. ಮಹಾಭಾರತ ತಾತ್ಪರ್ಯನಿರ್ಣಯ ೧೦–೭೪ ೨೧೬. ಅನುವ್ಯಾಖ್ಯಾನ
೨೧೭. ಮಹಾಭಾರತ ತಾತ್ಪರ್ಯನಿರ್ಣಯ – ೧೨–೧೧)

ಮಹಾಪುರಾಣಕ್ಕೆ ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತ, ಸಂಸ್ಥಾ, ಹೇತು, ಅಪಾಶ್ರಯವೆಂಬ ಹತ್ತು ಲಕ್ಷಣಗಳಿವೆ.

ಉಪಪುರಾಣಗಳಲ್ಲಿ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತೆಗಳೆಂಬ ಐದು ಲಕ್ಷಣಗಳಿರಬೇಕು. ಈ ಹದಿನೆಂಟು ಪುರಾಣಗಳನ್ನು ರಚಿಸಿದ ವೇದವ್ಯಾಸಾವತಾರದ – ಶ್ರೀಹರಿಯು.

**೪೭೦. ಪಂಚರಾತ್ರಿ ವಿರಚಕ; ೪೭೧. ಭಾರತ ವಿರಚಕ**

**೪೭೨. ಸೂತ್ರ ಕರ್ತೃ ವಿರಚಕ**

ಪಂಚರಾತ್ರಿ, ಮಹಾಭಾರತ, ಹಾಗೂ ಬ್ರಹ್ಮ ಸೂತ್ರಗಳನ್ನು ರಚಿಸಿದಂಥ ವೇದವ್ಯಾಸಾವತಾರದ – ಶ್ರೀಹರಿಯು.

**ಫ**ಲಿತಸದ್ರಸ **ಫಾ**ಲಲೇಖಕ ।
ಲಲಿತ **ಸ್ಫಿ**ತಾತ್ಮಕ **ಸ್ಫು**ಟಿಥವೃ– ।
ಜ್ಜಲ ಮರುತ್ಪಯಃ **ಫೇ**ನಭುಕ್ವತೆ ವಿ**ಸ್ಫೋ**ಟಕ ಕಟಾಹ ॥
**ಬ**ಲಬಲದ **ಬಾ**ಣಘ್ನ **ಬಿ**ಲಗಿರಿ
ನಿಲಯ ಮುನಿ ಹೃನ್ನಿಲಯ **ಬು**ಧ ಮಂ – ।
ಡಲ ವಿರಾಜಿತ **ಬೋ**ಧಯುತ **ಬಂ**ಧಮೋಕ್ಷರಕ ನಮೋ ॥ ೩೪ ॥

(ಈ ನುಡಿಯಲ್ಲಿ (೧) **ಫೀ, ಫೂ, ಫೈ, ಫೇ, ಫಂ, ಫಃ**
(೨) **ಬೀ, ಬೂ, ಬೆ, ಬೈ, ಬೇ, ಬಃ** – ಅಕ್ಷರಮಾಲೆ ಉಳಿದಿವೆ)

**೪೭೩. ಫಲಿತ ಸದ್ರಸ**

ರಸಕೆ ರಸರೂಪ – ಶ್ರೀ ಹರಿಕಥಾಮೃತಸಾರ

ಫಲಿತವಾದ ವೃಕ್ಷಗಳಲ್ಲಿಯ ಫಲಗಳಲ್ಲಿ ರಸರೂಪನಾಗಿಯೂ ರಸನಿಯಾಮಕ ನಾಗಿಯೂ ಇರುವಂಥ – **ಶ್ರೀಹರಿಯು.**

**೪೭೪. ಫಾಲಲೇಖಕ**

ಬ್ರಹ್ಮಾಂತರ್ಗತನಾಗಿದ್ದುಕೊಂಡು ಜೀವಿಗಳ ಹಣೆಬರಹ ಬರೆಸುವಂಥ – **ಶ್ರೀಹರಿಯು.**

**೪೭೫. ಲಲಿತ ಸ್ಥಿತಾತ್ಮಕ**

ಲಲಿತ = ಸುಂದರ, ಸ್ಥಿತಾತ್ಮಕ = ಪ್ರಕಾಶಮಾನವಾದ

ಸುಂದರ ಹಾಗೂ ಪ್ರಕಾಶಮಾನವಾದ ರೂಪವುಳ್ಳಂಥ – **ಶ್ರೀಹರಿಯು.**

**೪೭೬. ಸ್ಫುಟಿಥ ವೃಜ್ಜಲ**

ಸ್ಫುಟಿಥ = ಹೊರಹೊಮ್ಮಿದ; ವೃತ್ + ಜಲ = ವೃಜ್ಜಲ

ನಾಮ – ೭೦ – **"**ತ್ರಿವಿಕ್ರಮ**"** ನೋಡಿರಿ

**೪೭೭. ಮರುತ್ ಭುಕ್ವತೆ; ೪೭೮. ಪಯಃ ಭುಕ್ವತೆ**



**೪೭೯. ಫೇನ ಭುಕ್ವತೆ**

ಮರುತ್ = ಗಾಳಿ; ಪಯಃ = ಹಾಲು; ಫೇನ = ಆಕಳುಕರು ಹಾಲು ಕುಡಿಯುವಕಾಲಕ್ಕೆ ಬರುವ ನೊರೆ.

ಗಾಳಿ ಸೇವಿಸಿ ಇಲ್ಲವೆ ಹಾಲು ಕುಡಿದು ಅಥವಾ ಹಾಲಿನ ನೊರೆಯನ್ನಷ್ಟೇ ಸೇವಿಸಿ ಜೀವಿಸುವ ಮುನಿವರ್ಗಕ್ಕೆ ಪತಿ ಅಂದರೆ ಅಧಿಪತಿಯಾದಂಥ – **ಶ್ರೀಹರಿಯು.**

**೪೮೦. ವಿಸ್ಫೋಟಕ ಕಟಾಹ**

ನಾಮ : (೧) ೭೦ – ತ್ರಿವಿಕ್ರಮ (೨) ೩೫೦ ಕಟಾಹಭಂಜಕ (೩) ೭೦೪ ತ್ರಪಥಗಾಪಿತ (೪) ಬಾಹ್ಯಾಂಬುಪ್ರವಾಹಕ – ನೋಡಿರಿ.

**೪೮೧. ಬಲಬಲದ**

ಬಲಿಷ್ಠರಲ್ಲಿ ಇದ್ದುಕೊಂಡು ಅವರಿಗೆ ಬಲವನ್ನು ನೀಡುತ್ತಿರುವ ಭಗದ್ರೂಪ **ಬಲ** ನಾಮಕವಾದುದು. ಬಲಪೂರ್ಣನಾದ ಭಗವಂತನು ಬಲಕ್ಕಾಗಿ ಕಾಮಿಸುವುದಿಲ್ಲ. ರಾಜಸವಲ್ಲದ ಅವನ ಬಲವನ್ನು ಅವನು ಅನರ್ಹರಲ್ಲಿ ಪ್ರಯೋಗಿಸುವದೇ ಇಲ್ಲ. ಆದ್ದರಿಂದ ಅವನ ಸ್ವರೂಪಾತ್ಮಕ ಬಲವು ಕಾಮ ಹಾಗೂ ರಾಗದ ಸೊಂಕು ಇಲ್ಲದ್ದು. ಇಂತಹ ಬಲವೇ ತನ್ನ ವಿಭೂತಿರೂಪವಾದುದೆಂದು – "ಬಲಿನಾಂ ಬಲದಃ ಸ್ವಯಮ್" ಅಂತಾ ಗೀತಾಚಾರ್ಯರ ಸಂದೇಶ ಉಂಟು. ಇಂಥ ಬಲಬಲದನಾದಂಥ,[೨೧೮] – **ಶ್ರೀಹರಿಯು.**

**ಬಲೀಬಲದ**

ಹಿರಣ್ಯಕಶಿಪುವು ತಪಸ್ಸನ್ನು ಮಾಡಲು ಮಂದರ ಗಿರಿಗೆ ಹೋದಾಗ ದೇವತೆಗಳು ದೈತ್ಯಪುರವನ್ನು ಮುಕ್ತಿ ದಾನವರನ್ನು ಸದೆ ಬಡಿದರು. ಆಕಾಲಕ್ಕೆ ಇಂದ್ರನು ಗರ್ಭಿಣೀಯಾದ ಕಯಾಧುವನ್ನು ಸೆರೆಹಿಡಿದು ಒಯ್ಯುತ್ತಿದ್ದಾಗ ನಾರದರು, ನಿರಪಾಧಿಯಾದ ಅವಳನ್ನು ಬಿಟ್ಟು ಬಿಡೆಂದು ಇಂದ್ರನಿಗೆ ಹೇಳಿದರು. ಅದಕ್ಕೆ ಇಂದ್ರನು, "ಇವಳ ಗರ್ಭದಲ್ಲಿ ಹಿರಣ್ಯಕಶಿಪುವಿನ ವೀರ್ಯೋದ್ಭವನಿರುವನು. ಅವನು ಹುಟ್ಟಿ ಅವನಿಗಿಂತ ದುಷ್ಟನಾದರೆ ಮಾಡುವುದೇನು? ಇವಳು ಹೆತ್ತ ಕೂಡಲೆ ಶತ್ರುವಿನ ಮಗನನ್ನು ಕೊಂದು, ಇವಳನ್ನು ಬಿಟ್ಟು ಬಿಡುವೆನು." ಅಂತಾ ಹೇಳಿದ್ದಕ್ಕೆ ನಾರದರು, "ಇಂದ್ರ! ಇವಳ ಉದರದಲ್ಲಿರುವವನು ದುಷ್ಟನಲ್ಲ; ಹಾಗೂ ಅವನನ್ನು ನೀನು ಕೊಲ್ಲಲಾರೆ. ಏಕೆಂದರೆ ಅವನು "ಬಲಿ" ಅಂದರೆ ಬಲಕ್ಕೆ ಮುಖ್ಯಾಭಿಮಾನಿ ಯಾಗಿರುವದರಿಂದ ಮಹಾವಾಯು ದೇವರಿಗೆ "ಬಲಿ" ಎಂದು ಹೆಸರು. ಅವರು ಈ ಭಗವದ್ಭಕ್ತನಾದ ಪ್ರಲ್ಹಾದನಲ್ಲಿ ಆವಿಷ್ಟನಾಗಿರುವರು. ಆದ್ದರಿಂದ ಈ ಮಗವೂ "ಬಲಿ" ಆಗಿರುವನು.

**ವಿ.ವಿ.** ಅಥೋ ಶುಚಿಷ್ಮತಿದೇವಿ ಸುಷಾದ ಪುತ್ರ ಮುತ್ತಮಂ ।
ವಾಯುನಾ ಚ ಸಮಾವಿಷ್ಟಂ ಹರಿಪಾದಾಬ್ಜ ಸಂಶ್ರಯಂ ॥

– ಬ್ರಹ್ಮಾಂಡ ಗರುಡಪುರಾಣ ಅಧ್ಯಾಯ ೩೮ ಶ್ಲೋಕ ೯೮.

---

೨೧೮. ಶ್ರೀಮದ್ಭಗೀತಾ ೭–೧೧ ಹಾಗೂ ಅದರ ತಾತ್ಪರ್ಯ ಹಾಗೂ ಶ್ರೀ.ವಿ.ಸ.ನಾ. ಸ್ತೋತ್ರಕ್ಕೆ ಉಡುಪಿ ಟೀಕೆ ನಾಮ ೯೯ – "ಪ್ರಾಣಃ"ಕ್ಕೆ ಪುಟ ೨೩೫ ಹಾಗೂ ನಾಮ ೧೭೬ "ಮಹಾಬಲಃ"ಕ್ಕೆ ಪುಟ ೬೬೦.

**ಅರ್ಥ :–** ಶುದ್ಧಳಾದ ಕಯಾಧುದೇವಿಯು ವಾಯುದೇವರಿಂದ ಚನ್ನಾಗಿ ಆವಿಷ್ಟನಾದ, ಶ್ರೀಹರಿಯ ಪಾದ ಕಮಲವನ್ನು ಚನ್ನಾಗಿ ಆಶ್ರಯಿಸಿರುವವನೂ ಆದ್ದರಿಂದಲೇ ಉತ್ತಮಪುತ್ರನೂ ಆದ ಪ್ರಲ್ಹಾದನನ್ನು ಹೆತ್ತಳು.

ಪ್ರಲ್ಹಾದನು ಹುಟ್ಟುವಾಗಲೇ ವಾಯ್ವಾದೇಶ ಯುಕ್ತನೆಂದು ವೇದವ್ಯಾಸರು ಹೇಳಿರುವದರಿಂದ ಅವನು ಹುಟ್ಟುವುದಕ್ಕೆ ಮುಂಚೆ ತಾಯಿಯ ಹೊಟ್ಟೆಯಲ್ಲಿವಾಗಲೇ ವಾಯ್ವಾವೇಶ ವುಳ್ಳವನಾಗಿದ್ದನೆಂದು ಬೇರೆ ಹೇಳಬೇಕಾಗಿಲ್ಲ. ಆದ್ದರಿಂದ ಜ್ಞಾನಿಗಳಾದ ನಾರದರು ಮಾತೃಗರ್ಭದಲ್ಲಿದ್ದ ಪ್ರಲ್ಹಾದನನ್ನು ವರ್ಣಿಸುವಾಗ "ಬಲೀ" ಎಂದು ಹೇಳಿರುವರು.

ಇಂಥ ವಾಯ್ವಾವೇಶಯುಕ್ತರಾದ ಪ್ರಲ್ಹಾದನಿಗೂ, ಬಲಿ ನಾಮಾಭಿದಾನದ ಮುಖ್ಯಪ್ರಾಣದೇವರಿಗೂ ಬಲಪ್ರದನಾದಂಥ,[೨೧೯] – **ಶ್ರೀಹರಿಯು.**

**೪೮೨. ಬಾಣಘ್ನ**

ಬಲಿಚಕ್ರವರ್ತಿಯ ಹಿರಿಯ ಮಗನಾದ ಬಾಣಾಸುರನು ಶಿವಭಕ್ತನಾಗಿದ್ದನು. ಬಾಣಾಸುರನ ಮಗಳಾದ ಉಷೆಯು ಸ್ವಪ್ನದಲ್ಲಿ ತನ್ನ ನಿಯತ ಪತಿಯಾದ ಅನಿರುದ್ಧನೊಡನೆ ವಿಹರಿಸಿದ ಹಾಗೆ ಸ್ವಪ್ನವನ್ನು ಕಂಡಳು. ಅವನಾರೆಂದು ತಿಳಿಯದೇ ಒದ್ದಾಡುತ್ತಿದ್ದಾಗ, ಅವಳ ಗೆಳತಿಯಾದ ಚಿತ್ರಲೇಖೆ ಎಂಬವಳು ಉಷೆಯನ್ನು ಸಮಾಧಾನಮಾಡಿ, ಚಿತ್ರಗಳನ್ನು ಬರೆಯುವದರಲ್ಲಿ ಪರಿಣತಳಾದ ಇವಳು, ಆಗಿನ ಎಲ್ಲ ರಾಜಕುಮಾರರ ಚಿತ್ರಗಳನ್ನು ಬರೆದು ತೋರಿಸಿದಳು. ಆ ಚಿತ್ರಗಳಲ್ಲಿ ಸ್ವಪ್ನದಲ್ಲಿ ಕಾಣಿಸಿಕೊಂಡಿದ್ದ ಅನಿರುದ್ಧನನ್ನು ಉಷೆಯು ಗುರುತಿಸಿದಳು. ಚಿತ್ರಲೇಖೆಯು ಗಗನಮಾರ್ಗದಿಂದ ದ್ವಾರಕೆಯಲ್ಲಿದ್ದ ಅನಿರುದ್ಧನನ್ನು ಕರೆತಂದಳು. ಉಷೆಯು ಗಾಂಧರ್ವವಿಧಿಯಿಂದ ಅವನನ್ನು ಮದುವೆಯಾದಳು. ಮಗಳ ಅಂತಃಪುರದಲ್ಲಿ ಅಡಗಿದ್ದ ಅನಿರುದ್ಧನ ವಿಷಯವನ್ನು ಬಾಣಾಸುರನು ತಿಳಿದು ಕಿಡಿಕಿಡಿಯಾಗಿ ಯುದ್ಧ ಮಾಡಲಾರಂಭಿಸಿದನು. ನಾರದರು ಈ ವಿಷಯವನ್ನು ಶ್ರೀಕೃಷ್ಣನಲ್ಲಿಗೆ ಬಂದು ತಿಳಿಸಿದರು. ಕೂಡಲೆ ಶ್ರೀಕೃಷ್ಣನು ಬಾಣನ ಪಟ್ಟಣಕ್ಕೆ ಬಂದು ಯುದ್ಧ ಮಾಡಿ ಬಾಣನ ಅಪಾರ ಸೈನ್ಯವನ್ನು ಮರ್ದನ ಮಾಡಿದನು. ಶಿವನು ಬಾಣನ ಪಟ್ಟಣವನ್ನು ರಕ್ಷಿಸುತ್ತಿದ್ದುದರಿಂದ ಅವನು ಕೃಷ್ಣನೊಡನೆ ಯುದ್ಧಕ್ಕೆ ನಿಂತನು; ಆದರೇನು ಶಿವನು ಸೋತನು. ಕೃಷ್ಣನು ಬಾಣಾಸುರನನ್ನು ಕೊಲ್ಲಲು ಸಿದ್ಧನಾದಾಗ, ಶಿವನು ತನ್ನ ಭಕ್ತನಾದ ಬಾಣನನ್ನು ಕೊಲ್ಲಬೇಡವೆಂದು ಬೇಡಿಕೊಂಡನು. ಶ್ರೀಕೃಷ್ಣನು ಬಾಣನನ್ನು ಕೊಲ್ಲದೆ, ಅವನಿಗಿದ್ದ ಸಾವಿರ ತೋಳುಗಳಲ್ಲಿ ಎರಡು ತೋಳುಗಳನ್ನು ಮಾತ್ರ ಉಳಿಸಿ, ಮಿಕ್ಕ ತೋಳುಗಳನ್ನೆಲ್ಲ ಕತ್ತರಿಸಿ, ಶಿವನ ಪ್ರಾರ್ಥನೆಯಂತೆ ಬಾಣನನ್ನು ರಕ್ಷಿಸಿದನು. ಅದುವರೆಗೂ ಬಾಣನ ದೇಹಯೊಳಗೆ ಸೇರಿ, ಹರಿಯಲ್ಲಿ ದ್ವೇಷ ಮಾಡುತ್ತಿದ್ದ ಬಾಣನೆಂಬ ಹೆಸರುಳ್ಳ ದೈತ್ಯನು ಆದೇಹವನ್ನು ಬಿಟ್ಟು ಹೊರಟು ಹೋದನು.

ಬಾಣನು ತನ್ನ ಮಗಳಾದ ಉಷೆಯನ್ನು ಅನಿರುದ್ಧನೊಡನೆ ಕಳುಹಿಸುತ್ತ ಮಗಳಿಗೆ ಬೇಕಾದ ಬಳುವಳಿಯನ್ನು ಕೊಟ್ಟನು. ಹೀಗೆ ಬಾಣಘ್ನನಾದ ಕೃಷ್ಣಾವತಾರದ[೨೨೦] – **ಶ್ರೀಹರಿಯು.**

---

೨೧೯. ಶ್ರೀಮದ್ಭಾಗವತ ಸಪ್ತಮಸ್ಕಂಧ ಏಳನೇಯ ಅಧ್ಯಾಯ.
೨೨೦. ಶ್ರೀಮದ್ಭಾಗವತ ದಶಮಸ್ಕಂಧ ಉತ್ತರಾರ್ಧ ಎಪ್ಪತ್ತಾರನೇಯ ಅಧ್ಯಾಯ



**೪೮೩. ಬಿಲಗಿರಿ ನಿಲಯ ಬಿಲ = ಗುಹಾ**

ಗುಹಾ ವಿಶಿಷ್ಟವಾದ ಪರ್ವತವೆಂದರೆ – ವೆಂಕಟಗಿರಿ. ಅಲ್ಲಿದ್ದ ಶ್ರೀವೆಂಕಟೇಶ ರೂಪದಲ್ಲಿದ್ದ – **ಶ್ರೀಹರಿಯು.**

**೪೮೪. ಮುನಿ ಹೃನ್ನಿಲಯ;** ಮುನಿ+ಹೃದ್+ನಿಲಯ

ಮುನಿಗಳ ಹೃದಯವೆಂಬ ನಿಲಯ – ಮನೆ – ಯಲ್ಲಿ ಯಾವಾಗಲೂ ವಾಸವಾಗಿದ್ದ "ಪುರುಷ"ನೆಂದು ಹೆಸರಾದಂಥ,[೨೨೧] – **ಶ್ರೀಹರಿಯು.**

**೪೮೫. ಬುಧಮಂಡಲ ವಿರಾಜಿತ**

ಜ್ಞಾನಿಗಳ ಸಮುದಾಯದಲ್ಲಿ ವಿರಾಜಿಸುವಂಥ – **ಶ್ರೀಹರಿಯು.**

೪೮೬. ಬೋಧಯುತ ಬಂಧಮೋಕ್ಷಕರ ಸ್ವಗುಣಾಚ್ಛಾದಿಕಾ ಎಂಬ ಪ್ರಕೃತಿಯಿಂದ ಜೀವಾತ್ಮನ ಸ್ವರೂಪವನ್ನು ಮುಚ್ಚುವ ಭಗವಂತನು ಜೀವಾತ್ಮನಿಗೆ ತನ್ನ ಜ್ಞಾನ ಬರದಂತೆ ಮಾಡುವನು. **ಪರಮಾಚ್ಛಾದಿಕಾ** ಎಂಬ ಪ್ರಕೃತಿಯಿಂದ ಭಗವಂತನು ತನ್ನ ಜ್ಞಾನವನ್ನು ಗುಣಗಳ ಜ್ಞಾನದಿಂದಲೂ, ಭಗವಂತನ ಸ್ವರೂಪ ಜ್ಞಾನದಿಂದಲೂ ಹೀನನಾದ ಪ್ರಯುಕ್ತ ಅವನು ಸಂಸಾರದಲ್ಲಿ ಬೀಳುವಂತೆ ಮಾಡುವ ಭಗವಂತನೇ ಯಾವ ಜೀವಾತ್ಮನ ಬಗ್ಗೆ ಪ್ರಸನ್ನನಾಗುವನೋ ಅಂತಹ ಜೀವಾತ್ಮನನ್ನು ಈ ಎರಡೂ ಬಗೆಯ ಪ್ರಕೃತಿಗಳಿಂದಲೂ ಬಿಡುಗಡೆಗೊಳಿಸಿ, ಅವನು ಭಗವಂತನ ಸ್ವರೂಪದ ಹಾಗೂ ತನ್ನ ಸ್ವರೂಪದ ಬಗ್ಗೆ ಸರಿಯಾದ ತಿಳಿವಳಿಕೆಯನ್ನು ಪಡೆಯುವಂತೆ ಅನುಗ್ರಹಿಸಿ, ಜ್ಞಾನಿಗಳಿಗೆ ಇದ್ದ ಭಂದನವನ್ನು ಬಿಡಿಸಿ, ಅವರನ್ನು ಮುಕ್ತಗೊಳಿಸುವನು ಹೀಗೆ ಬೋಧಯುತ ಬಂಧ ಮೋಕ್ಷಕರನಾದ,[೨೨೨] – **ಶ್ರೀಹರಿಯು.**

"ಮನ ಏವ ಮನುಷ್ಯಾಣಾಂ ಬಂಧ ಮೋಕ್ಷಯೋಃ ಕಾರಣಂ।

ಮನಸ್ಸೇ ಬಂಧಮೋಕ್ಷಕ್ಕೆ ಕಾರಣವು; ಮನೋ ನಿಯಾಮಕನಾದ ಭಗವಂತನು ಮಾನವರಿಂದ ಪಾಪಪುಣ್ಯಗಳ ಕರ್ಮ ಮಾಡಿಸಿ, ಅವುಗಳಿಗೆ ತಕ್ಕಂತೆ ಫಲ ನೀಡಿ, ನಿತ್ಯ ಸಂಸಾರದಲ್ಲಿ ತೊಡಗುವಂತೆಯೂ ಅಥವ ಮೋಕ್ಷಾ ಪಡೆಯುವಂತೆಯಾ ಮಾಡುವಂಥ. ಮನೋನಿಯಾಮಕನಾದ – **ಶ್ರೀಹರಿಯು.**

**ಭ**ದ್ರಪದ **ಭಾ**ವುಕಭಿಷಗ್ವರ ।
ರುದ್ರ **ಭೀ**ಕರ **ಭು**ಕ್ತಿದಾ ದಾ– ।
ರಿದ್ರ್ಯದೂರಕ **ಭೂ**ರಿಭೂತಿದ **ಭೇ**ದವಾದೀಶಾ ॥
ಹೃದ್ರುಜಹನ್ **ಭೈ**ಷ್ಮೀಶ **ಭೋ**ಜೇಶಾ – ।
ಘದ್ರಿ ಕುಲಿಶ ಕುಶಸ್ಥಳೋಕ ಸೋ – ।
ಪದ್ರವಾರ್ದಕ **ಭೌ**ಮವರಪ್ರದ **ಭಂ**ಗರಹಿತ ನಮೋ ॥ ೩೫ ॥
(ಈ ನುಡಿಯಲ್ಲಿ–**ಭಃ**– ಅಕ್ಷರಮಾಲೆ ಉಳಿದಿದೆ)

---

೨೨೧. ಶ್ರೀವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೧೪–"ಪುರುಷಃ" ಕ್ಕೆ ಪುಟ ೫೮–೫೯
೨೨೨. ಮಹಾತತ್ವವಿವೇಕ ಹಾಗೂ ಶ್ರೀಮದ್ಭಾಗವತ ತಾತ್ಪರ್ಯ ನಿರ್ಣಯ ೧೦–೯೪–೧೨. ಹಾಗೂ ಶ್ರೀವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೧೩೦. "ಜನಾರ್ದನ"ಕ್ಕೆ ಪುಟ ೪೫೫.

**೪೮೭. ಭದ್ರಪದ**

ಮಂಗಳಕರವಾದ ಪದವುಳ್ಳಂಥ – **ಶ್ರೀಹರಿಯು.**

**೪೮೮. ಭಾವುಕಭೀಷ್ಟಗ್ವರ**

ತನ್ನ ಭಕ್ತರಾದ ವೈದ್ಯರಿಗೆ ವರಕೊಡುವಂಥ – **ಶ್ರೀಹರಿಯು.**

**೪೮೯. ರುದ್ರಭೀಕರ**

ರುದ್ರದೇವನಿಗೂ ಭಯವನ್ನುಂಟು ಮಾಡುವಂಥ ಭಯಂಕರನಾದ – **ಶ್ರೀಹರಿಯು.**

**೪೯೦. ಭುಕ್ತಿದಾ**

ಕ್ರೀಡಾ ರೂಪವಾಗಿ ಭಗವಂತನು, ಜೀವಾತ್ಮರ ಶ್ರೋತ್ರ, ಚಕ್ಷುಸ್ಸೇ ಮೊದಲಾದ ಇಂದ್ರಿಯಗಳನ್ನಾಶ್ರಯಿಸಿಕೊಂಡು, ತಾನು ಮಾತ್ರ ಶುಭ ಭೋಗಗಳನ್ನಷ್ಟೇ – ವಿಷಯ ಪದಾರ್ಥಗಳಲ್ಲಿಯ ಸಾರಭಾಗವನ್ನಷ್ಟೇ ಭೋಗಿಸುವನು.[೨೨೩]

ಅಸ್ವತಂತ್ರರಾದ ಜೀವಾತ್ಮರು ಅಸಾರಭಾಗವನ್ನಷ್ಟೇ ಭೋಗಿಸುವದೂ ಕೂಡ ಭಗವಂತನ ಅನುಗ್ರಹದಿಂದ ಮಾತ್ರ ಭೋಕ್ತೃ ಜೀವರಲ್ಲಿ ಭಗವಂತನು – ಸಂಕರ್ಷಣ ಮತ್ತು ಪ್ರದ್ಯುಮ್ನ ರೂಪಗಳಿಂದ ಇದ್ದು, ಅವರಿಗೆ ಭೋಕ್ತೃತ್ವ ಸಾಮರ್ಥ್ಯವನ್ನು ಅನುಗ್ರಹಿಸುವನು; ಮತ್ತು ತಾನು "ಅನ್ನಾದ" ಎನಿಸಿಕೊಳ್ಳುವನು. ಹೀಗೆ "ಭುಕ್ತಿದಾ" ಆದಂಥ – **ಶ್ರೀಹರಿಯು.**[೨೨೪]

**೪೯೧. ದಾರಿದ್ರ್ಯದೂರಕ**

ಕುಚೇಲ (ಸುದಾಮ)ನ ಭಕ್ತಿಗೆ ಮೆಚ್ಚಿ ಕೇಳದಿದ್ದರೂ ಆತನಿಗೆ ಸಕಲೈಶ್ವರ್ಯವನ್ನು ದಯಪಾಲಿಸಿದಂತೆ, ತನ್ನ ಭಕ್ತರ ದಾರಿದ್ರ್ಯವನ್ನು ಹೋಗಲಾಡಿಸುವಂಥ – **ಶ್ರೀಹರಿಯು.**

**೪೯೨. ಭೂರಿಭೂತಿದ**

ನಾಮ (೧) ೩೦೧ ಚಾರುಗಣಸೃತ್‌ಕುಕ್ಷೇ (೨) ३೫೬ ಜಠರನೃಪ (೩) ೪೦೦ ಪ್ರಥಮ ಪುರುಷ – ನೋಡಿರಿ

**೪೯೩. ಭೇದವಾದೀಶಾ**

(೧)ಜೀವಜೀವಭೇದ (೨) ಜೀವ ಜಡಭೇದ (೩) ಜೀವ ಈಶ ಭೇದ (೩) ಜಡಜಡಬೇದ (೫) ಜಡ ಈಶ ಭೇದ – ಎಂದು ಪಂಚಭೇದಗಳನ್ನು ತಿಳಿಸಿರುವ ಭೇದಮತ ವಾದಿಯಾದ, ವಾಯುದೇವರ ಮೂರನೇಯ ಅವತಾರವಾದ – ಶ್ರೀಮಧ್ವಮುನಿಯ ಪ್ರಭುವಾದ – **ಶ್ರೀಹರಿಯು.**

**೪೯೪. ಹೃದ್ರುಜಹನ್** ಹೃದ್+ರುಜ+ಹನ್

ಹೃದಯ ರೋಗ ನಾಶಮಾಡುವಂಥ – **ಶ್ರೀಹರಿಯು.**

---

೨೨೩. ಶ್ರೀಮದ್ಭಗವದ್ಗೀತಾ ಅಧ್ಯಾಯ ೧೫ ಶ್ಲೋಕ ಹಾಗೂ ಭಾಷ್ಯ; ನಾರಾಯಣಶ್ರುತಿ, ಮತ್ತು ಶ್ರೀಮದ್ಭಾಗವತ ೪–೨೩–೬೪

೨೨೪. ಐತರೇಯ ಸಂಹಿತಾ (ಐತರೇಯ ಉಪನಿಷತ್ ಭಾಷ್ಯ ೨–೨, ೧–೨) ಹಾಗೂ ಶ್ರೀ.ವಿ.ಸ.ನಾ.ಸ್ತೋತ್ರ – ಉಡುಪಿಟೀಕೆ ನಾಮ –೧೪೭ "ಭೋಕ್ತಾ"ಕ್ಕೆ ಪುಟ ೫೩೦ –೫೩೧.



**೪೯೫. ಭೈಷ್ಮೀಶ.**

ಭೈಷ್ಮೀ – ಭೀಷ್ಮಕ ರಾಜನ ಮಗಳು; ಈಶ = ಪತಿ = ವಲ್ಲಭ ನಾಮ – ೭೫೫ "ಅಷ್ಟಮಹಿಷೆಯರ" ನೋಡಿರಿ.

**೪೯೬. ಭೋಜೇಶ**

**೪೯೭. ಅಘದ್ರಿಕುಲಿಶ**

ಭೋಜಕಚಾ ಎಂಬ ಪದ್ಟಣದ ಒಡೆಯನಾದ ರುಕ್ಮಿಯಲ್ಲಿಯ ಬಲಪರಾಕ್ರಮಿ ಎಂಬ ಹೆಮ್ಮೆಯ ಪರ್ವತಕ್ಕೆ ವಜ್ರ ಪ್ರಾಯನಾದಂಥ – ಕೃಷ್ಣಾವತಾರದ – **ಶ್ರೀಹರಿಯು.**

**೪೯೮. ಕುಶಸ್ಥಳೋಕ** ಕುಶಸ್ಥಳ + ಓಕ = ಮನೆ

**೪೯೯. ಸೋಪದ್ರವಾರ್ದಕ**

ಕುಶಸ್ಥಳ + ಓಕ + ಸೋಪದ್ರವ + ಅರ್ದಕ

ದ್ವಾರಕಾಪಟ್ಟಣ + ಮನೆ + ಬಹಳ ಉಪದ್ರವ + ನಾಶಮಾಡುವವ

ದ್ವಾರಕಾಪಟ್ಟಣವು – ಶ್ರೀಕೃಷ್ಣನ ಮುಖ್ಯರಾಜಧಾನಿಯು. ಇಲ್ಲಿ ಮೊದಲು ಶ್ರೀರಾಮನು ಕುಶನಿಗಾಗಿ ಒಂದು ಪಟ್ಟಣವನ್ನು ನಿರ್ಮಿಸಿಕೊಟ್ಟಿದ್ದನು. ರೇವತನೆಂಬ ರಾಜನು ಇಲ್ಲಿ ಬಹಳಕಾಲ ರಾಜ್ಯಭಾರ ಮಾಡುತ್ತಿದ್ದನು. ಇದೇ ಪ್ರದೇಶದಲ್ಲಿಯೇ ವಿಶ್ವಕರ್ಮನಿಂದ ದ್ವಾರಕಾ ನಗರಿಯನ್ನು ನಿರ್ಮಿಸಿಕೊಂಡ – ಕೃಷ್ಣಾವತಾರದ – **ಶ್ರೀಹರಿಯು.**

ಕಂಸನನ್ನು ಹತ್ಯೆಗೈಯ್ದ ಕಾರಣ ಆತನಿಗೆ ಹೆಣ್ಣು ಕೊಟ್ಟ ಮಾವನಾದ ಜರಾಸಂಧನು ತನ್ನ ದುಷ್ಟಕೂಟವನ್ನು ಕರೆದುಕೊಂಡು ಬಂದು ದ್ವಾರಕೆಯ ಮೇಲೆ ಯುದ್ಧಕ್ಕೆ ಬರುತ್ತಿದ್ದನು. ಇಂಥ ಆ ದ್ವಾರಕಾನಿವಾಸಿಗಳ ಉಪದ್ರವವನ್ನು ತಡೆದಂಥ – ಕೃಷ್ಣಾವತಾರದ,[೨೨೫] – **ಶ್ರೀಹರಿಯು.**

**೫೦೦. ಭೌಮವರ ಪ್ರದ**

ಭೂಪುತ್ರನಾದ ನರಕಾಸುರನಿಗೆ ಭೂದೇವಿಯ ಕೋರಿಕೆಯಂತೆ ವೈಷ್ಣವಾಸ್ತ್ರ ವರವನ್ನು ಕೊಟ್ಟಂಥ,[೨೨೬] – **ಶ್ರೀಹರಿಯು.**

**೫೦೧. ಭಂಗರಹಿತ**

ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಹರಿಯ ಸಂಕಲ್ಪಕ್ಕೆ ಯಾವ ಕಾಲಕ್ಕೂ, ಯಾವ ರೀತಿಯಿಂದಲೂ, ಯಾರಿಂದಲೂ ಭಂಗ ಬರಲಾರದ್ದರಿಂದ, ಸತ್ಯಸಂಕಲ್ಪನಾಗಿಯೂ ಭಂಗರಹಿತನಾದಂಥ – **ಶ್ರೀಹರಿಯು.**

**ಮ**ಕರಧ್ವಜಜಿತ**ತಮಾ**ಸಖಾ**ಮಿ**ತಾ – ।
ಭಕುಲಜೀವನಮೀನ **ಮು**ರಲೀಧ – ।
ರಕರ **ಮೂ**ಲಕವೀಂದ್ರ **ಮೇ**ಧ್ಯಚರಿತ **ಮೈ**ದುನಪಾ ॥

---

೨೨೫. ಪುರಾಣಭಾರತ ಕೋಶ – ಪುಟ – ೧೪–೨೭–೧೪೩.

೨೨೬. ಶ್ರೀಮದ್ಭಾಗವತ ದಶಮಸ್ಕಂಧ – ಉತ್ತರಾರ್ಧ ಅಧ್ಯಾಯ

ಸುಕರ**ಮೋ**ಹಕ **ಮೌ**ನಿಪೂಜಿತ – ।
ಚಕಿತಕರನುಜೇಂದ್ರ ಕರುಣಾಂ – ।
ಬಕ ಬಕಾಂತಕ **ಮಂ**ಜುಹಾಸ ಮಹಾಧಿರಾಜ ನಮೋ ॥ ೩೬ ॥

**೫೦೨. ಮಕರ ಧ್ವಜಜಿತ ತಮ**

ಮಕರಧ್ವಜ + ಜೀತತಮ

ಕಾಮನನ್ನು ಗೆದ್ದವರಲ್ಲಿ ಶ್ರೇಷ್ಠನಾದಂಥ – **ಶ್ರೀಹರಿಯು.**

**೫೦೩. ಅಸಖಾ (ಗೆಳೆಯರಿಲ್ಲದವ)**

ತನ್ನ ಕಾರ್ಯಕ್ಕೆ ಬೇರೆಯವರ ಅಪೇಕ್ಷೆ ಇಲ್ಲದೆಯೇ ತನ್ನ ಇಚ್ಛಾ ಮಾತ್ರದಿಂದಲೇ ತನ್ನ ಕಾರ್ಯ ನೆರವೇರಿಸಿಕೊಳ್ಳುವಂಥ – **ಶ್ರೀಹರಿಯು.**

**೫೦೪. ಅಮಿತಾಭಕುಲಜೀವನ ಮೀನ**

ಅಮಿತ + ಅಭಿ + ಕುಲ + ಜೀವನಮೀನ

ಅಗಣಿತ + ಕಾಂತಿಯುಳ್ಳವರೆಂದರೆ – ದೇವತೆಗಳು

ಅಗಣಿತ ಕಾಂತಿಯುಳ್ಳ ದೇವತೆಗಳ ಸಮುದಾಯಕ್ಕೆ ಜೀವನಪ್ರದನಾದಂಥ – **ಶ್ರೀಹರಿಯು.**

**೫೦೫. ಮುರಳೀಧರಕರ**

ತನ್ನ ಕೈಯಲ್ಲಿ ಮುರಲೀ (ಕೊಳಲು) ಯನ್ನು ಹಿಡಿದುಕೊಂಡಂಥ ಕೃಷ್ಣಾವತಾರದ – **ಶ್ರೀಹರಿಯು.**

**೫೦೬. ಮೂಲಕವಿಂದ್ರ**

ಭಗವಂತನು ಅನಾದ್ಯನಂತ ಕಾಲದಲ್ಲಿ ಯಥಾರ್ಥಪದಾರ್ಥಗಳ ಸೃಷ್ಟಿಯನ್ನು ನಡೆಸುವನೆಂದು ಹೇಳಹೊರಟ ಈಶಾವಾಸ್ಯೋಪನಿಷತ್ತಿನಲ್ಲಿ, ಜಗತ್ಸೃಷ್ಟಿಗೆ ಬೇಕಾದ ಸರ್ವಜ್ಞತ್ವವನ್ನು – "ಕವಿ" – ಶಬ್ದವನ್ನು ಬಳಸಿಯೇ ತಿಳಿಸಲಾಗಿದೆ.[೨೨೭]

ಋಗ್ವೇದದಲ್ಲಿ ಇಂದ್ರನಾಮಕ ಭಗವಂತನನ್ನು ಸರ್ವಜ್ಞನೆಂಬ ಅರ್ಥದಲ್ಲಿ – ಕವಿ' ಎಂದು ವಿಶೇಷಿಸಲಾಗಿದೆ.[೨೨೮]

"ನನ್ನನ್ನು ಯಾವಾಗಲೂ ಸ್ಮರಿಸುತ್ತಿರು" ಎಂದು ಅರ್ಜುನನಿಗೆ ಸಂದೇಶಿಸಿದ ಗೀತಾಚಾರ್ಯನು, ತನ್ನನ್ನು ಯಾವ ರೀತಿಯಾಗಿ ಸ್ಮರಿಸಬೇಕೆಂಬುದನ್ನು ತಿಳಿಸುತ್ತ ಸರ್ವಜ್ಞನಾಗಿರುವ ಪ್ರಯುಕ್ತ – "ಕವಿ" ಎಂಬುದಾಗಿಯೂ ತನ್ನನ್ನು ಧ್ಯಾನಿಸಬೇಕೆಂದು ಸಂದೇಶಿಸಿರುವನು.[೨೨೯]

"ಸಕಲವೇದಗಳ ಕವಿಯೂ ನೀನೆ ಆಗಿರುವಿ" ಎಂಬುದಾಗಿ ಬ್ರಾಹ್ಮದಲ್ಲಿ ಭಗವಂತನನ್ನು ಸಂಬೋಧಿಸಿ ನಿವೇದಿಸಿಕೊಳ್ಳಲಾಗಿದೆ.[೨೩೦]

ಹೀಗೆ ಮೂಲ ಕವೀಂದ್ರನಾದಂಥ,[೨೩೦ಅ]

೨೨೭. ಈಶಾವಾಸ್ಯೋಪನಿಷತ್ತು ೧–೮; ಅದರ ಭಾಷ್ಯ ಹಾಗೂ ವರಾಹ ಪುರಾಣ.
೨೨೮. ಋಗ್ವೇದ ೧೧–೪; ಹಾಗೂ ಮಂತ್ರಾರ್ಥ ಮಂಜರಿ.
೨೨೯. ಶ್ರೀಮದ್ಭಗವದ್ಗೀತಾ ೮–೯ ಹಾಗೂ ಭಾಷ್ಯ ೨೩೦. ಬ್ರಾಹ್ಮ ಹಾಗೂ ಗೀತಾಭಾಷ್ಯ ೮–೯
೨೩೦ಅ. ಶ್ರೀವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿಟೀಕೆ ನಾಮ – ೧೩೬ "ಕವಿಃ" ಇದಕ್ಕೆ ಪುಟ – ೪೮೩



– **ಶ್ರೀಹರಿಯು.** ಶ್ರೀವಿಷ್ಣು ಸಹಸ್ರನಾಮನಾದಂಥ – **ಶ್ರೀಹರಿಯು.**

**೫೦೭ ಮೇಧ್ಯ ಚರಿತ** **ಮೇಧ್ಯ = ಪವಿತ್ರ**

ಪವಿತ್ರವಾದ ಚಾರಿತ್ರ್ಯವುಳ್ಳಂಥ – **ಶ್ರೀಹರಿಯು.**

**೫೦೮. ಮೈದುನಪಾ.**

ತನ್ನ ಮೈದುನ (ತಂಗಿ – ಸುಭದ್ರೆಯ ಗಂಡನಾದ ಅರ್ಜುನನ್ನು ಪಾಲಿಸಿದಂಥ ಕೃಷ್ಣಾವತಾರದ – **ಶ್ರೀ ಹರಿಯು.**

**೫೦೯. ಸುಕರ ಮೋಹಕ**

ಒಳ್ಳೆಯ ಕರಕಮಲಗಳುಳ್ಳವನಾಗಿ ಗೋಪಿಕಾಸ್ತ್ರೀಯರಿಗೆ ಮೋಹವನ್ನುಂಟು ಮಾಡಿದ – ಕೃಷ್ಣಾವತಾರದ – **ಶ್ರೀ ಹರಿಯು.**

**೫೧೦. ಮುನಿ ಪೂಜಿತ.**

ಮುನಿಗಳಿಂದ ಯಾವಾಗಲೂ – ಮಾನಸ – ಪೂಜೆಗೊಳ್ಳುವಂತಹ – **ಶ್ರೀಹರಿಯ**

**೫೧೧. ಚಕಿತಕರನುಜೇಂದ್ರ.**

ಅಜುನ+ಇಂದ್ರ=ಶ್ರೇಷ್ಠ ತಮ್ಮ = ಚಕಿತಕರೆ

ನಾಮ – ೫೦ – "ಭರತ ಪಾಲಕ" ನೋಡಿರಿ.

**೫೧೨. ಕರುಣಾಂಬಕ**

ಕರುಣ + ಅಂಬಕ = ನಯನ.

ಕರುಣಾಪೂರ್ಣ ದೃಷ್ಟಿಯುಳ್ಳಂಥ – **ಶ್ರೀ ಹರಿಯು.**

**೫೧೩.** **ಬಕಾಂತಕ ಬಕ+ಅಂತರ = ಹಂತಕ.**

ಕಂಸ ಭೃತ್ಯನಾದ ಬಕರೂಪೀ ಅಸುರನನ್ನು ಸಂಹರಿಸಿದಂಥ – ಕೃಷ್ಣಾವತಾರದ – **ಶ್ರೀಹರಿಯು**

**೫೧೪. ಮಂಜುಹಾಸ.**

ಯಾವಾಗಲೂ ಮುಗುಳ್ನಗೆ ನಗುತ್ತಲೇ ಇರುವ ಕೃಷ್ಣಾವತಾರದ – **ಶ್ರೀಹರಿಯು**

**೫೧೫. ಮಹಾಧಿರಾಜ**

ಪಾಂಡವರು ಮಾಡಿದ ರಾಜಸೂಯ ಯಾಗದ ಕೊನೆಯಲ್ಲಿ, ಸರ್ವಶ್ರೇಷ್ಠರ ಪೂಜೆ ಮಾಡುವರು ಯಾರಿಗೆ? ಅಂತಾ ಸುದೀರ್ಘ ಚರ್ಚೆ ನಡೆದು, ಆ ಅಗ್ರಪೂಜೆಗೆ ಶ್ರೀಕೃಷ್ಣನೇ ಅರ್ಹನು ಅಂತಾ ನಿರ್ಣಯಿಸಿ, ಆ ಪ್ರಕಾರ ಧರ್ಮರಾಜನು ಆತನಿಗೆನೇ ಅಗ್ರಪೂಜೆ ಸಲ್ಲಿಸಿದನು. ಇಂಥ – ಮಹಾಧಿರಾಜ ನಾದ ಕೃಷ್ಣವತಾರದ – **ಶ್ರೀ ಹರಿಯು**

**ಯ**ಜ್ಞ ಭಿಕ್ಷುಕ ಯಜ್ಞರತ ಇಂ – ।
ದ್ರಾಜ್ಞಾ ದೂಷಕ ಈಷಣಾ**ಧೃ**ತ – ।
ಸುಜ್ಞರಾಡ್ಯುಗ **ಮ**ಖಸಂಭವ **ಯೂ**ಥಪೋತ್ತಂಸ ॥
ಅಜ್ಞಭಿದ್ಯೇಕೇಶ **ಮೌ**ನಿಗ – ।

ಣಜ್ಞ **ಯೌವ್ವನಪುಂಸ ಮಂತ್ರಾ** – ।
ರ್ಥಜ್ಞ **ಪೋಷಕ** ಕಿಂಕರೋಧೃತ ಕಾಮಕಾಷ್ಠ ನಮೋ ॥ ೩೭ ॥
(ಈ ನುಡಿಯಲ್ಲಿ **ಯಾ,ಯೀ, ಯೀ, ಯು,ಯೆ, ಯೈ, ಯೋ, ಯಂ, ಯಃ**
ಅಕ್ಷರಮಾಲೆ ಉಳಿದಿವೆ)

**೫೧೬. ಯಜ್ಞಭಿಕ್ಷುಕ**

ಪ್ರಲ್ಹಾದನ ಮೊಮ್ಮಗನಾದ ಬಲಿಯೂ ನಡೆಸಿದ ಯಜ್ಞದಲ್ಲಿ, ವಟು ರೂಪದಿಂದ ಬಂದು, ಆತನಿಂದ ಮೂರು ಪಾದ ಭೂಮಿಯನ್ನು ದಾನವಾಗಿ ಪಡೆದುಕೊಂಡಂಥ – ವಾಮನಾವತಾರದ – **ಶ್ರೀ ಹರಿಯು.**

ನಾಮ (i) ೭೦– ತ್ರಿವಿಕ್ರಮ (ii) ೭೩– ವಾಮನ
(iii) ೧೯೬ ಉಪೇಂದ್ರ – ನೋಡಿರಿ

**೫೧೭ ಯಜ್ಞರತ**

ಯಜ್ಞಾಸಕ್ತರಾದಂಥ – ರಾಮ ಹಾಗೂ ಕೃಷ್ಣ ಅವತಾರದ – **ಶ್ರೀ ಹರಿಯು**

**೫೧೮. ಇಂದ್ರಾಜ್ಞಾದೂಷಕ**

ನಾಮ (i) ಶಕ್ರ ಅರ್ಚಿತ ಪದಾಬ್ಜ – ನೋಡಿರಿ.

**೫೧೯. ಈಷಣಾರ್ಧೃತ ಸುಜ್ಞರಾಡ್ಯುಗ ಮಖಸಂಭವ.**

ಈಷಣ = ಈಷಣತ್ರಯ – ದಾರೇಷಣ, ಪುತ್ರೇಷಣ, ವಿತ್ತೇಷಣ (ಹಂಡತಿ, ಮಕ್ಕಳು, ಹಣದ ಮೇಲಣ ಮೋಹ,[೨೩೧])

ಅರ್ಧೃತ –= ಧಾರಣ ಮಾಡದೆ ಇದ್ದ; ತ್ಯಜಿಸಿದ

ಸುಜ್ಞರಾಡ್ಯುಗ = ಸುಜ್ಞರಾಟ + ಯುಗ = ಜ್ಞಾನಶ್ರೇಷ್ಠರಾದ ಈರ್ವರು.

ಮಖ = ಯಜ್ಞ; ಸಂಭವ = ಅಭಿವ್ಯಕ್ತವಾದ.

ಮೋಹವನ್ನು ಧಾರಣ ಮಾಡದೇ ಇದ್ದ ಅಂದರೆ ತ್ಯಜಿಸಿದ ಜ್ಞಾನ ಶ್ರೇಷ್ಠರಾದ – ಬ್ರಹ್ಮ ವಾಯುಗಳೀರ್ವರು ನಡೆಸಿದ ಯಜ್ಞದಲ್ಲಿ ಅಭಿವ್ಯಕ್ತವಾದ – ಹಯಗ್ರೀವ ರೂಪದ – **ಶ್ರೀಹರಿಯು**

**೫೨೦ ಯೂಥಪೋತ್ತಂಸ** **ಯೂಥ+ಪ+ಉತ್ತಂಸ**

ಯೂಥ ಅಥವಾ ಯೂಧ = ಆನೆಗಳ ಹಿಂಡು (ಕನ್ನಡ ರತ್ನಕೋಶ)
ಉತ್ತಂಸ = ಶ್ರೇಷ್ಠ ಅಥವಾ ಸಮುದಾಯ (ಕನ್ನಡ ರತ್ನಕೋಶ)
ಯೂಥ ಉತ್ತಂಸ + ಪ = ಸ್ಥಾನ ಪಲ್ಲಟದಿಂದ
ನಾಮ – ೭೪ – ನಕ್ರ ಶಿಕ್ಷಕ – ನೋಡಿರಿ.
ಭಕ್ತ ಸಮುದಾಯವನ್ನು ರಕ್ಷಿಸುವಲ್ಲಿ ಶ್ರೇಷ್ಠನಾದಂಥ – **ಶ್ರೀಹರಿಯು**

---
೨೩೧. ಕನ್ನಡ ಅಧ್ಯಯ ಸಂಸ್ಥೆ – ಗೋಪಾಲದಾಸರ ಕೃತಿಗಳು ಪುಟ ೪೦೬



**೫೨೧. ಅಜ್ಞಭಿದ್**

ಅಜ್ಞಾನವನ್ನು ನಾಶಮಾಡುವಂಥ – **ಶ್ರೀ ಹರಿಯು**

**೫೨೨. ಏಕೇಶ**

ಹದಿನಾಲ್ಕು ಲೋಕಗಳಿಗೂ ಒಬ್ಬನೇ ಒಡೆಯನಾದಂಥ – **ಶ್ರೀ ಹರಿಯು**

**೫೨೩. ಮುನಿಗಣಜ್ಞ** **ಮುನಿಗಣ+ಜ್ಞ**

ಮುನಿವೃಂದದಿಂದ ತಿಳಿಯಲ್ಪಡುವವನಾದಂಥ – **ಶ್ರೀ ಹರಿಯು.**

**೫೨೪. ಯೌವ್ವನ ಪುಂಸ.**

ನಿತ್ಯ ತರುಣನಾದಂಥ – **ಶ್ರೀಹರಿಯು**

**೫೨೫. ಮಂತ್ರರ್ಥಜ್ಞಪೋಷಕ**

ಮಂತ್ರದ ಅರ್ಥ ಬಲ್ಲವರನ್ನು ಪೋಷಿಸುವಂಥ – **ಶ್ರೀ ಹರಿಯು.**

**೫೨೬. ಕಿಂಕರೋಧೃತ ಕಾಮಕೇಷ್ಟ**

ಕಾಮಕಷ್ಟಗಳನ್ನು ತನ್ನ ಕಿಂಕರರಿಂದ ದೂರಮಾಡುವಂಥ – **ಶ್ರೀಹರಿಯು**

**ರಸಿಕರಾಜಿಪ ರಾಜ್ಯಚಕ್ರಪ** ।
ವಸು ಪರಿಕ್ಷಪ ಕುಲಪರೀಕ್ಷಿಪ
ಪರರ ಪಾಂಥಪ **ರುಜಿಗುಣೌಘಪರೂಪ** ಬಹುರೂಪಾ ॥
ಅಸುಪ **ರೇತೋದ್ಭವಪ ರೈ**ಗಪ ।
ರಸಪ **ರೋರೌ**ಪ್ಯನಗಪಪಾ ।
ಕುಸುಮ ಬಾಣಪ **ರಂಗಾ**ಕ್ಷೇತ್ರಪ **ರಹ**ಸ್ಯಪಾಲನಮೋ ॥ ೩೮ ॥
(ಈ ನುಡಿಯಲ್ಲಿ **ರಹ** = **ರಃ** ಅಂತಾ ಬಳಸಿದ್ದಾರೆ)

**೫೨೭ ರಸಿಕರುಜಿಪ**

ಸೌಂದರ್ಯ ಪ್ರಧಾನಗಳಾಗಿರುವ ಸ್ತ್ರೀಯನ್ನು ಪ್ರೇರಿಸುವಂಥ – **ಶ್ರೀ ಹರಿಯು.**

ಭಗವಂತನು, ಸೌಂದರ್ಯ ಪ್ರಧಾನರಾಗಿದ್ದು ವಾಮ ಎನಿಸುವ ಸ್ತ್ರೀಯರನ್ನು ನಿಯಮಿಸುವದರಿಂದಲೇ – "ವಾಮನಿ" ಎನಿಸುವನೆಂದು ಛಾಂದೋಗ್ಯೋಪನಿಷತ್ತು ಸಂದೇಶಿಸಿದೆ.

ನಾಮ – ೭೩ – "ವಾಮನ" ನೋಡಿರಿ.

**೫೨೮. ರಾಜ್ಯ ಚಕ್ರಪ**

ರಾಜ್ಯಚಕ್ರವನ್ನು ಪಾಲಿಸಿದಂಥ ಶ್ರೀ ರಾಮಾವತಾರದ – **ಶ್ರೀ ಹರಿಯು.**

**೫೨೯. ವಸು ಪರಿಕ್ಷಪ**

ಅಷ್ಟ ವಸುಗಳಲ್ಲಿ ಶ್ರೇಷ್ಠರಾದ ಭೀಷ್ಮಾಚಾರ್ಯರನ್ನು ಪರೀಕ್ಷಿಸಿ ಪಾಲಿಸಿದಂಥ – ಕೃಷ್ಣಾವತಾರದ – **ಶ್ರೀ ಹರಿಯು.**

**೫೩೦. ಕುಲ ಪರೀಕ್ಷಿಪ –**

ಜ್ಞಾನಿಕುಲದಲ್ಲೇ ಸೇರಿದವರನ್ನು ಪರೀಕ್ಷಿಸಿ ರಕ್ಷಿಸುವಂಥ – **ಶ್ರೀ ಹರಿಯು.**

**೫೩೧. ಪರರ**

ಪರ = ಶ್ರೇಷ್ಠಳಾದ ಲಕ್ಷ್ಮೀದೇವಿ; ಅವಳನ್ನು ರಮಿಸುವವ– ಅಂದರೆ ಸಂತೋಷ ಪಡಿಸುವವನಾದ್ದರಿಂದ – ಪರರ ಆದಂಥ – **ಶ್ರೀಹರಿಯು.**

**೫೩೨. ಪಾಂಥಪ...**

ಮೋಕ್ಷದ ದಾರಿ ಹಿಡಿದವರನ್ನು ಪಾಲಿಸುವಂಥ – **ಶ್ರೀ ಹರಿಯು**

**೫೩೩. ರುಜಿಗುಣೌಘಪರೂಪ.** **ರುಜಿ = ಕಾಂತಿ**

ಕಾಂತಿ ಮೊದಲಾದ ಗುಣಗಳ ಸಮುದಾಯವನ್ನೂ ರಕ್ಷಿಸುವ ರೂಪವುಳ್ಳಂಥ – **ಶ್ರೀ ಹರಿಯು.**

**೫೩೪. ಬಹುರೂಪಾ ನಾಮ – ೧೪೩ ಬಹುಳ ಜೀವಂತರೀಯ" ನೋಡಿರಿ.**

ಶ್ರೀ ಹರಿಯು ಸರ್ವಶಬ್ದ ವಾಚ್ಯನೆಂದು ಐತರೇಯೋಪನಿಷತ್ತು ಸಾರುವದು. ಸಕಲ ಲೌಕಿಕ ವೈದಿಕ ಶಬ್ದಗಳು ಮುಖ್ಯವಾಗಿ ಶ್ರೀ ಹರಿಯ ನಾಮಗಳಾದರಿಂದ ಅವನು ಸಮಸ್ತ ಗುಣಪೂರ್ಣನೆಂದು ಸಿದ್ಧವಾಗುತ್ತದೆ. ಉದಾಹರಣೆಗೆ ಶ್ರೀ ಹರಿಯು ಹೇಗೆ ಸರ್ವಶಬ್ದ ವಾಚ್ಯನೆಂದು ಪರಿಶೀಲಿಸಬಹುದು.

"ಸತ್ಯ" ಶಬ್ದ ವಾಚ್ಯನು ಶ್ರೀ ಹರಿ **"ಸ ಏಷ ಭಗವಾನ್ವಿಷ್ಣುಃ ಸತ್ಯಮಿತ್ಯಭಿಧೀಯತೆ; ಸರ್ವೋತ್ತಮತ್ವಾತ್ಪೂರ್ಣತ್ವಾತ್ಸರ್ವಜ್ಞತ್ವಾತ್ತಥೈವಚ."** "ಸತ್ ಎಂದರೆ ಸರ್ವೋತ್ತಮ – ಎಂದರೆ ಗುಣಪೂರ್ಣ; ಯ "ಎಂದರೆ ಸರ್ವಜ್ಞ, ಹೀಗೆ ಶ್ರೀ ಹರಿ ಸತ್ಯ ಶಬ್ದ ವಾಚ್ಯನು. **"ಪಿತೃತ್ವಾತ್ಪರಮೇಶಿತುಃ ತನ್ನಾಮಾಪಃ – "ಸರ್ವೋತ್ತಮನೂ, ಸರ್ವನಿಯಾಮಕನೂ ಸರ್ವರಿಗೂ ಪಿತೃಭೂಷಣನಾದುದರಿಂದ "ಆಪಃ"** ಶಬ್ದ ವಾಚ್ಯನು ಸಕಲ ಶಬ್ದಗಳೂ ಪ್ರವೃತ್ತಿ ನಿಮಿತ್ತತ್ವೇನ ಪರಮ ಮುಖ್ಯಾರ್ಥವಾಗಿ ಶ್ರೀ ವಿಷ್ಣುವಿನಲ್ಲಿಯೇ ಸಂಗತವಾಗುತ್ತದೆ. **"ಯೋ ದೇ ವಾ ನಾಂ ನಾಮಧಾ ಏಕ ಏವತಂ ಸಂಪ್ರಶ್ನಂ ಭುವನಾ ಯಂತನ್ಯಾ"** ಅವನನ್ನೇ ಇಂದ್ರನೆಂದೂ, ವರುಣನೆಂದೂ, ಅಗ್ನಿಯೆಂದೂ ಹೇಳುತ್ತಾರೆ. ಮುಖ್ಯತಃ ಆ ನಾಮಗಳೆಲ್ಲ ಅವನದೇ ಆಗಿವೆ. **"ನಾಮಾನಿ ಸರ್ವಾಣಿ ಯಮಾ ವಿಶಂತಿ ತಂ ವೈ ವಿಷ್ಣುಂ ಪರಮ ಮುದಾಹರಂತಿ"** ಸರ್ವೋತ್ತಮನಾದ ಶ್ರೀ ಹರಿಯನ್ನೇ ಸಕಲ ನಾಮಗಳೂ ಹೊಂದುತ್ತವೆ. ಹೀಗೆ **"ಅನಂತನಾಮಕತ್ವಾಚ್ಚ ಸೋನಂತ ಗುಣ ಈರತಃ"** ಅವನಿಗೆ ಅನಂತ ನಾಮಗಳಿರುವದರಿಂದ ಅವನು ಅನಂತ ಗುಣ ಪರಿಪೂರ್ಣನು. ಇದನ್ನೇ **"ಅನಂತರೂಪೋಹಿ ಹರಿಃ ಶಬ್ದೋऽ ಪ್ಯೆಷಹ್ಯನಂತಥಾ"** ಎಂಬ ಭಾಷ್ಯವಚನವು ಹೇಳುತ್ತದೆ. ವಿಷ್ಣು ಸಹಸ್ರನಾಮವು ಅನಂತ ರೂಪಗಳನ್ನು ಪ್ರತಿಪಾದಿಸುತ್ತದೆ. ಇದಕ್ಕೆ ವ್ಯಾಖ್ಯಾನರೂಪವಾದ ಬ್ರಹತೀ ಸಹಸ್ರವೂ ಶ್ರೀಹರಿಯು ಅನಂತನಾಮಗಳ ಮಹಿಮೆಯನ್ನು ಹೇಳುತ್ತದೆ.

ಮೇಲೆ ಹೇಳಿದ ಶ್ರೀ ಹರಿಯ ಅನಂತ ರೂಪಗಳಿಗೆ ಭೇದವಿಲ್ಲ. ಶ್ರೀ ಹರಿಯ ಅವತಾರಗಳಾಗಲಿ ರೂಪಗಳಾಗಲಿ ಎಳ್ಳಷ್ಟೂ ಭೇದವಿಲ್ಲ ಆದರೂ ತನ್ನ ಅದ್ಭುತ ಅಚಿಂತ್ಯ



ಐಶ್ವರ್ಯದಿಂದ **ಶ್ರೀ ಹರಿಯು** ಒಬ್ಬನಾಗಿದ್ದರೂ ಬಹುರೂಪಗಳುಳ್ಳವನಾಗಿ ಭೇದವುಳ್ಳವನಂತೆ ರಾರಾಜಿಸುವಂಥ,[೨೩೨] – **ಶ್ರೀ ಹರಿಯು**

**ಪಶ್ಯ ಮೇ ಪಾರ್ಥರೂಪಾಣಿ ಶತಶೋऽಥ ಸಹಸ್ರಶಃ ।**
**ನಾನಾ ವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫॥**

ವಿ.ವಿ. ಶ್ರೀಮದ್ಭಗವದ್ಗೀತಾ – ಅಧ್ಯಾಯ ೧೧–ಶ್ಲೋಕ ೫

ಮೇಲಿನ ಶ್ಲೋಕಕ್ಕೆ – ಪು.ತಿ. ನರಸಿಂಹಾಚಾರ್ಯಕೃತ – **ಕನ್ನಡ ಅನುವಾದ.**

ನೋಡೈಪಾರ್ಥ, ನೂರು ಲೆಕ್ಕದ ಸಾಸಿರದೆಣಿಕೆಯ ರೂಪಗಳ ।
ಬಗೆಬಗೆಯಾಗಿಹ ನನ್ನೀ ದಿವ್ಯದ ಬಹುವರ್ಣಾಕೃತಿಗಳ ನೀನು ॥೫॥

(i) **ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ।**
**ಸಪ್ತಧಾ ನವಧಾ ಚೈವ ಪುನಶ್ಚೈಕಾದಶಃ ಸ್ಮೃತಃ ।**
**ಶತ ಚ ದಶಚೈಕಶ್ಚ ಸಹಪ್ರಾಣಿ ಚ ವಿಂಶತಿಃ ।,**[೨೩೩]

ಒಂದು, ಮೂರು, ಐದು, ಏಳು, ಒಂಭತ್ತು, ಹನ್ನೊಂದು, ನೂರಹನ್ನೊಂದು ಸಾವಿರದಾ ಇಪ್ಪತ್ತು ಎಂದು ಮುಂತಾಗಿ ಇಚ್ಛಾನುಸಾರ ಅನೇಕ ರೂಪಗಳುಳ್ಳವನಾಗುತ್ತಾನೆ.

(ii) **ಪಂಚಾತ್ಮಕಃ ಸಭಗವಾನ್ ದ್ವಿಷಡಾತ್ಮಕೋऽಭೂ – ।**
**ತ್ಸಂಚದ್ವಿಯೀ ಶತಸಹಸ್ರರೋऽಮಿತಶ್ಚ ॥**
**ಏಕಃ ಸಮೋಪ್ಯಖಿಲ ದೋಷಸಮುಜ್ಝ ಇತೋऽಪಿ ।**
**ಸರ್ವತ್ರ ಪೂರ್ಣಗುಣಕೋऽಪಿ ಬಹುರೂಪಮೋऽಭೂತ್ ॥**[೨೩೪]

**ಅರ್ಥ :**

ಪಂಚರೂಪಿಯಾದ ಆ ಪರಮಾತ್ಮನು ದ್ವಾದಶ (೧೨) ರೂಪಗಳುಳ್ಳವನಾದನು; ದಶ (೧೦) ರೂಪಗಳುಳ್ಳವನಾದನು; ಶತ (೧೦೦) ರೂಪಗಳುಳ್ಳವನಾದನು; ಸಹಸ್ರ (೧೦೦೦) ರೂಪಗಳುಳ್ಳವನಾದನು; ಬಹುರೂಪಗಳುಳ್ಳವನಾದನು; ಅಮಿತ ರೂಪಗಳುಳ್ಳವನಾದನು; ಅನಂತನಾದನು. ಏಕತ್ವ ಸಂಖ್ಯೆಯುಳ್ಳವನು (ಅಭಿನ್ನನು) ಸರ್ವರೂಪಗಳಲ್ಲಿ (ದೇಶಕಾಲಗಳಿಂದ) ಸಮನಾದಾಗ್ಯೂ, ಸರ್ವದೋಷಗಳಿಂದ ವಿರಹಿತನಾದಾಗ್ಯೂ ಪೂರ್ಣಗಳಾದ ಗುಣಗಳುಳ್ಳ ವನಾದಾಗ್ಯೂ (ಸ್ವಾಭಾವಿಕವಾಗಿ) ಬಹುವಿಧರಾದ ಜೀವಾದಿಗಳ ಸಾದೃಶ್ಯವುಳ್ಳವ ನಾದನು.

**ವಿಶೇಷಾಂಶಃ : –**

(೧) ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂದು ೫ ರೂಪಗಳು (೨) ಕೇಶವ, ನಾರಾಯಣ ಮೊದಲಾದ ೧೨ ರೂಪಗಳು. (೩) ಮತ್ಸ ಮೊದಲಾದುವು

---

೨೩೨. ಹರಿ ವಿಠಲ ಪ್ರಕಾಶನದ – ಮು. ಶ್ರೀ. ಗುಂಡೂರಾವ ಕೃತ "ಶ್ರೀಮನ್ಮತೌಮತಸುಧಾ" – ಪುಟ – ೫೭ & ೫೮
೨೩೩. ಸರ್ವಮೂಲ ಗ್ರಂಥಗಳು – ಛಾಂದೋಯೋಪನಿಷತ್ – ಸಪ್ತಮೋಧ್ಯಾಯ ಖಂಡ – ೨೬ ಪುಟ. ೪೬೭
೨೩೪. ಶ್ರೀಮನ್ಮಮಹಾಭಾರತ ತಾತ್ಪರ್ಯ ನಿರ್ಣಯ – ಅಧ್ಯಾಯ ೧ ಶ್ಲೋಕ ೧೦.

೧೦ ರೂಪಗಳು (೪) ನಾರಾಯಣ ಮೊದಲಾದವು ೧೦೦ ರೂಪಗಳು (೫) ವಿಶ್ವ ಮೊದಲಾದವು ೧೦೦೦೦ ರೂಪಗಳು (೬) ಪರ ಮೊದಲಾದುವು ಬಹುರೂಪಗಳು (೭) ಅಜಿತ ಮೊದಲಾದುವು ಅಪರಿಮಿತ ರೂಪಗಳು (೮) ಈ ಶ್ರೀ ಭಗವಂತನಿಗೆ ವಿಶೇಷ ಶಕ್ತಿ ಪ್ರಸಾದಿತವಾದುದೇ ಬಹುತ್ವವು. ಜೀವರಂತೆ ಸ್ವಾಭಾವಿಕ ಬಹುತ್ವವಲ್ಲ. ಆದುದರಿಂದ ಭಗವದ್ರೂಪಗಳಲ್ಲಿಬೇಧವನ್ನು ಶಂಕಿಸಕೂಡದು[೨೩೫].

**೫೩೫. ಅಸುಪ**

ಸಕಲ ಜೀವಿಗಳ ಪ್ರಾಣವನ್ನು ಪಾಲಿಸುವಂಥ – **ಶ್ರೀ ಹರಿಯು**

**೫೩೬. ರೇತೋದ್ಭವಪ**

ಪುರುಷ ರೇತಸ್ಸು ಸ್ತ್ರೀ ಗರ್ಭ ಸೇರಿ ಭ್ರೂಣ ಉದಯಿಸಿ, ನಿರ್ದಿಷ್ಟ ಕಾಲಾನಂತರ ಸ್ತ್ರೀ ಗರ್ಭದಿಂದ ಜನಿಸಿ ಬರುವಂಥ – ಮಾನವ, ಚತುಷ್ಪಾದ ಪ್ರಾಣಿಗಳು ಮೊದಲಾದ ಜೀವಿಗಳ ರಕ್ಷಣೆ ಮಾಡುವಂಥ – **ಶ್ರೀಹರಿಯು**

**೫೩೭. ರೈಗಪ**

ರೈ = ಧನ; ಗ = ಹೊಂದಿರುವರು.

ಧನವನ್ನು ಹೊಂದಿದಂಥ ಕುಬೇರ ಮೊದಲಾದವರನ್ನೂ ಪಾಲಿಸುವಂಥ – **ಶ್ರೀಹರಿಯು**

**೫೩೮. ರಸಪ**

ರಸವನ್ನು ಪಾಲನ ಮಾಡುವಂಥವರಲ್ಲಿ ಶ್ರೇಷ್ಠನಾದಂಥ – **ಶ್ರೀಹರಿಯು**

**೫೩೯. ರೋರೇಪ್ಯನಗಪ** ರೋ+ರೇಪ್ಯ +ನದಪಪಾ

ರೋ=ವಿಶೇಷವಾಗಿ ಹೊಳೆಯುವ ; ರೇಪ್ಯ = ಬೆಳ್ಳಿಯಂತೆ

ವಿಶೇಷವಾಗಿ ಬೆಳ್ಳಿಯಂತೆ ಹೊಳೆಯುವ ಮೇರು ಪರ್ವತವನ್ನು ಪಾಲಿಸುವಂಥ – **ಶ್ರೀಹರಿಯು**

**೫೪೦. ಕುಸುಮ ಬಾಣಪ**

ಹೂವಿನ ಬಾಣಗಳುಳ್ಳಂಥ ಕಾಮದೇವನನ್ನು ಪಾಲಿಸುವಂಥ – **ಶ್ರೀಹರಿಯು**

**೫೪೧. ರಂಗಾಕ್ಷೇತ್ರಪ**

ಶ್ರೀ ರಂಗಕ್ಷೇತ್ರದ ಒಡೆಯ ಹಾಗೂ ಪಾಲಕನಾದಥ – **ಶ್ರೀಹರಿಯು**

**೫೪೨. ರಹಸ್ಯಪಾಲ –**

ಜೀವನ ರಹಸ್ಯ; ವೇದ ರಹಸ್ಯ ಮೊದಲಾದ ರಹಸ್ಯವನ್ನು ಕಾಯ್ದುಕೊಳ್ಳುವಂಥ – **ಶ್ರೀ ಹರಿಯು**

**ಲ**ವಜನಕ **ಲಾ**ಘವಕರಾಜ್ಜ **ಲಿ** – ।
ಪ್ತವಿಮಲ ಶ್ರೀಚಂದನಾಂಗ **ಲೀ**– ।
ಲಾವಿನೋದ ವನಚರಪಾವನ **ಲು**ಬ್ಧವಧು ಫಲ ಭೋಕ್ತಾ – ॥

೨೩೫. ಅಗ್ರಹಾರ ನಾರಾಯಣ ತಂತ್ರಿಯವರ – ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ಟೀಕೆ – ಮೊದಲ ಸಂಪೂರ್ಣ – ಪುಟ. ೮೯



ಮಲಾಭ ಬೋಧಕ ಭವಜಪಾಕ್ಷರ ।
ಅತೀಶ ಮೋಹಮದವಿರಹಿತ **ಲೋ**ಭ – ।
ಘ್ನ **ಲೌ**ಕಿಕ ಪ್ರವಹೇತ **ಲಂ**ಕೌಕ ಸಾರ್ದಕ ಲುಬ್ಧತುಷ್ಟ ನಮೋ ॥ ೩೯ ॥
(ಈ ನುಡಿಯಲ್ಲಿ – **ಲೂ, ಲೆ,ಲೈ** ಹಾಗೂ **ಲಃ** – ಉಳಿದಿವೆ)

**೫೪೩. ಲವಜನಕ –**

ಲವ, ಕುಶರು ಶ್ರೀರಾಮ ಚಂದ್ರನ ಮಕ್ಕಳು – ಆದ್ದರಿಂದ ಲವ–ಜನಕನಾದ ಶ್ರೀರಾಮಾವತಾರದ – **ಶ್ರೀ ಹರಿಯು.**

**೫೪೪. ಲಾಘವ ಕರಾಬ್ಜ –**

ಸಂಸಾರದ ಭಾರವನ್ನು ಕಡಿಮೆ ಮಾಡುವ ಕರಕಮಲವುಳ್ಳಂಥ – **ಶ್ರೀ ಹರಿಯು**

**೫೪೫. ಲಿಪ್ತ ವಿಮಲ**

**೫೪೬. ಶ್ರೀ ಚಂದ್ರನಾಂಗ**

ನಿರ್ಮಲವಾದ ಹಾಗೂ ಶ್ರೇಷ್ಠವಾದ ಶ್ರೀ ಚಂದನದಿಂದ ಲೇಪಿಸಲ್ಪಟ್ಟ ಅಪ್ರಾಕೃತ ಶರೀರವುಳ್ಳಂಥ – **ಶ್ರೀ ಹರಿಯು**

**೫೪೭. ಲೀಲಾ ವಿನೋದ.**

ಲೀಲೆಯಿಂದ ಅವತಾರಾದಿಗಳನ್ನು ಸ್ವೀಕರಿಸುವಂಥ – **ಶ್ರೀ ಹರಿಯು.**

**೫೪೮. ವನಚರ ಪಾವನ.**

ಸುಗ್ರೀವ, ಅಂಗದ, ಹನುಮಂತ, ನಲ, ನೀಲ ಮೊದಲಾದ ಕಪಿಗಳಿಗೂ; ಜಾಂಬುವಂತ ಮೊದಲಾದ ವನಚರ ಕರಡಿಗಳಿಗೂ, ತನ್ನ ಸೇವೆಯ ಸದಾವಕಾಶ ಒದಗಿಸಿಕೊಟ್ಟು, ಅವರೆಲ್ಲರನ್ನೂ ಪಾವನಗೊಳಿಸಿದಂಥ ಶ್ರೀ ರಾಮಾವತಾರದ – **ಶ್ರೀ ಹರಿಯು.**

**೫೪೯. ಲುಬ್ಧವಧು ಫಲ ಭೋಕ್ತಾ –**

ಸ್ವರ್ಗ ಲೋಕದಲ್ಲಿಯ ಒಬ್ಬ ಅಪ್ಸರೆಯು ಶಚಿದೇವಿಯ ಶಾಪದಿಂದ ಶಬರ (ಬೇಡರ) ಕುಲದಲ್ಲಿ ಶಬರಿಎಂಬ ನಾಮದಿಂದ ಜನಿಸಿದಳು. ಮತಂಗ ಋಷಿಗಳ ಬಳಿ ಆಶ್ರಮಕಟ್ಟಿಕೊಂಡು ರಾಮನ ದರ್ಶನವನ್ನು ಅಪೇಕ್ಷಿಸಿ ಇದ್ದಳು. ರಾಮನು ಈ ಆಶ್ರಮಕ್ಕೆ ಬಂದಾಗ್ಗೆ ಅವನನ್ನು ಫಲಪುಷ್ಪಾದಿಗಳಿಂದ ಪೂಜಿಸಿ, ಆ ರಾಮನ ಸನ್ನಿಧಾನದಲ್ಲಿಯೇ ಅವನ ಆಜ್ಞೆಯಂತೆ ಅಗ್ನಿ ಪ್ರವೇಶ ಮಾಡಿದಳು. ಕಾಮಿನಿ ಸ್ತ್ರೀಯರಿಗೆ ಕಾಮನನ್ನು ಹತ್ತಿಕ್ಕುವದು ಬೆಂಕಿಯ ರಾಶಿಗಿಂತಲೂ ಸಂತಾಪಕರವಾದದ್ದು. ಆ ಶಬರಿಯನ್ನೂ ಪೂರ್ವದಂತೆ (ಶಾಪದಂತೆ ವಿಮೋಚಿಸಿ) ಸ್ವರ್ಗದ ಅಪ್ಸರೆಯನ್ನು ಮಾಡಿ, ಮತಂಗ ಋಷಿಗಳು – ರಾಮನು ಸಾನುಜ ಸಹಿತವಾಗಿ ಇಲ್ಲಿಗೆ ಬಂದು ನಿನ್ನ ಶಾಪವನ್ನು ಕಳೆಯುವನೆಂದು ಹೇಳಿದ ಮಾತನ್ನು ಸತ್ಯವಾಗಿ ಮಾಡಿದನು.” ನಂತರ ಕಬಂಧನಿಂದ ಸೂಚಿಸಿದ ಮಾರ್ಗವನ್ನು ಅನುಸರಿಸಿ ಪಂಪಾತೀರಕ್ಕೆ ಬಂದನು. ಹೀಗೆ ತನ್ನಲ್ಲಿಯೇ ಭಕ್ತಿ ಇಟ್ಟ ಶಬರಿಯು ಕೊಟ್ಟ ಹಣ್ಣುಗಳನ್ನು ಮೆದ್ದ ರಾಮಾವತಾರದ,[೨೩೬] – **ಶ್ರೀಹರಿಯು.**

೨೩೬. ಶ್ರೀ ಹುಲಗಿ ಶ್ರೀನಿವಾಸಚಾರ್ಯ ಕೃತಿ – ಶ್ರೀ ಲಘುರಾಮಾಯಣ ಮ “ದ ಶ್ಲೋಕಗಳು ೭೨ & ೭೩ ಸರ್ಗತ್ರಿತೀಯ.

**೫೫೦. ಅಮಲಾಭ**

ನಿರ್ಮಲವಾದ ಕಾಂತಿಯುಳ್ಳಂಥ – **ಶ್ರೀ ಹರಿಯು.**

**೫೫೧. ಬೋಧಕ**

ಸರಿಯಾದ ಜ್ಞಾನದಾಯಕನಾದಂಥ – **ಶ್ರೀ ಹರಿಯು**

**೫೫೨. ಭವಜಪ**

ಭವ – ಮರ್ತ್ಯಲೋಕದಲ್ಲಿ ಜನಿಸಿದವರನ್ನು ಪಾಲಿಸುವಂಥ – **ಶ್ರೀ ಹರಿಯು.**

**೫೫೩. ಅಕ್ಷರ**

ಅಕ್ಷರ ಕ್ಷರ = ನಾಶ. ಅಕ್ಷರ = ನಾಶವಿಲ್ಲದವ.

ನಾಶಗಳು ನಾಲ್ಕು ವಿಧವಾಗಿವೆ. ಮಡಿಕೆ ಮೊದಲಾದವುಗಳು (i) ಸ್ವರೂಪ ನಾಶವನ್ನೂ; ಜೀವಾತ್ಮರು (ii) ಶರೀರ ನಾಶವನ್ನೂ (iii) ದುಃಖ ಹೊಂದುವ ನಾಶವನ್ನೂ; ಶ್ರೀ ಲಕ್ಷ್ಮೀದೇವಿಯು (iv) ಅಪೂರ್ಣತಾ ನಾಶವನ್ನು ಪಡೆಯುತ್ತಿದ್ದರೆ, ಭಗವಂತನು ಈ ಬಗೆಯ ಯಾವ ನಾಶಕ್ಕೂ ಒಳಗಾಗದೆ, "ಅಕ್ಷರ"ನೆನಿಸುವನು.[೨೩೭]

ಕಾಠೋಪನಿಷತ್ತು ಭಗವಂತನನ್ನು ನಿತ್ಯಗಳಲ್ಲೂ ನಿತ್ಯನಾಗಿರುವನೆಂದು ಪರಿಚಯಿಸಿ ಕೊಟ್ಟಿದೆ.[೨೩೮]

ಗೀತಾಚಾರ್ಯನು, ಸರ್ವಾತ್ಮನಾ ವಿನಾಶವಿಲ್ಲದಿರುವವನು ಭಗವಂತನೇ ಎಂದು ಸಂದೇಶಿಸಿರುವನು.[೨೩೯]

ವಾಸ್ತವವಾಗಿ ಜಡಪ್ರಕೃತಿ, ಚೇತನ ಪ್ರಕೃತಿಗಳಿಬ್ಬರೂ ಭಗವಂತನಂತೆಯೇ ಅಕ್ಷರ ಎನಿಸಿರುವರು. ಆದರೆ ಜಡಪ್ರಕೃತಿ ಅಪರಾಕ್ಷರ ಎನಿಸಿದರೆ, ಚೇತನ ಪ್ರಕೃತಿ ಪರಮಾಕ್ಷರ ಎನಿಸಿರುವಳು. ಭಗವಂತನಾದರೂ ಪರತಃ ಪರಮಾಕ್ಷಶ ಎಂದೂ ಕರೆಯಲ್ಪಡುವಂಥ – **ಶ್ರೀ ಹರಿಯು.**[೨೪೦]

**೫೫೨–೫೫೩ : ಭವಜಪಾಕ್ಷರ**

ಭವ ಅಂದರೆ ರುದ್ರ ದೇವರಿಂದ ಜಪಿಸಲ್ಪಡುವ **"ರಾಮ"** ರೂಪ ನಾಮಾಕ್ಷರವುಳ್ಳಂಥ **– ಶ್ರೀಹರಿಯು**

**೫೫೪. ಅತೀಶ**

ರುದ್ರ ದೇವರನ್ನು ಕೂಡಿಕೊಂಡು ಇದ್ದಂಥ – **ಶ್ರೀಹರಿಯು.**

**ಮೋಹಮದವಿರಚಿತ**

**೫೫೫. ಮೋಹ ವಿರಹಿತ; ೫೫೬. ಮದ ವಿರಹಿತ**

ಯಾವದೇ ಬಗೆಯ ಮೋಹಕ್ಕೆ ಒಳಗಾಗದೆ ಇದ್ದು; ತನ್ನಲ್ಲಿ ಇದ್ದ ಅತಿಶಯ ಶಕ್ತಿಗಳ ಬಗ್ಗೆ ಮದವನ್ನು ತಾಳಲಾರದೆ ಇದ್ದಂಥ – **ಶ್ರೀ ಹರಿಯು.**

---

೨೩೭. ಗೀತಾ ತಾತ್ಪರ್ಯ – ಅಧ್ಯಾಯ ೨ ಶ್ಲೋಕ ೧೭

೨೩೮. ಕಾಠೋಪನಿಷತ್ತು – ೨–೩–೧ ೨೩೯. ಗೀತಾ ಅಧ್ಯಾಯ ೨ – ಶ್ಲೋಕ ೧೭.

೨೪೦. ಅರ್ಥರ್ವಣೋಪನಿಷದ್ಭಾಷ್ಯ – ೧–೩–೧ ಹಾಗೂ ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಫಲಿಮಾರುಮಠದ ಟೀಕೆ ನಾಮ – ೧೭ "ಅಕ್ಷರಃ"ಕ್ಕೆ ಪುಟ ೭೦–೭೧



**೫೫೭. ಲೋಭಘ್ನ**

ಸದ್ಗತಿಯನ್ನು ದಯಪಾಲಿಸಲೋಸುಗ ತನ್ನ ಭಕ್ತರ ಲೋಭ ಅಂದರೆ ಆಶೆಯನ್ನು ನಷ್ಟಗೊಳಿಸುವಂಥ – **ಶ್ರೀ ಹರಿಯು**

**೫೫೮. ಲೌಕಿಕ ಪ್ರವಹೇತ**

ಲೋಕದಲ್ಲಿ ವ್ಯಾಪ್ತವಾದ ಪ್ರವಹ ವಾಯುವಿನಿಂದ ಪೂಜಿತನಾದಂಥ – **ಶ್ರೀ ಹರಿಯು**

**೫೫೯. ಲಂಕೌಶ ಸಾರ್ದಕ; ಓಕ = ಮನೆ**

ಲಂಕಾಪಟ್ಟಣವೇ ಮನೆಯಾಗಿಯುಳ್ಳಂಥ ರಾವಣನನ್ನು ನಾಶಗೊಳಿಸಿದಂಥ – ರಾಮಾವತಾರದ – **ಶ್ರೀ ಹರಿಯು.**

**೫೬೦. ಲುಬ್ಧ ೫೬೧. ತುಷ್ಟ ನಮೋ**

ಭಕ್ತರ ಮೇಲೆ ಲೋಭವುಳ್ಳ ಹಾಗೂ ಅವರ ಪೂಜೆಯಿಂದ ತುಷ್ಟನಾದಂಥ – **ಶ್ರೀಹರಿಯು**

**ವ**ಕ್ತ್ರ್ಯವರ **ವಾ**ಲ್ಮೀಕಿ ಕೃತೀಶ ವಿ – ।
ವಿಕ್ತಮತಿ ಪರರೀಶ ಗತಿಪ್ರದ ।
ವ್ಯಕ್ತಸುಚರಿತ **ವೂ**ರ್ದ್ವಪಟಪ್ರಸ್ಥಾಪ **ವೇ**ದ್ಯ ನಮೋ ॥
ರಿಕ್ತಭಯ **ವೈ**ದೇಹಿಮನೋಹರ ।
ತ್ಯಕ್ತಪ್ರುಕೃತ **ವೊಂ**ಪೇಷಧಾಕ್ಷಯಾ ।
ದ್ಯುಕ್ತಿವಾಚಕ **ವಂ**ದ್ಯವಂದಿತ ವಹಕವಾಹಕ ನಮೋ ॥ ೪೦ ॥
(ಈ ನುಡಿಯಲ್ಲಿ – **ವೀ, ವು, ವೌ** – ಅಕ್ಷರಮಾಲೆ ಉಳಿದಿವೆ)

**೫೬೨. ವಕ್ತ್ಯವರ / ವಾಲ್ಮೀಕಿ ಕೃತಿಶ.**

ವಕ್ತ್ಯಗಳಲ್ಲಿ ಶ್ರೇಷ್ಠನಾದ ವಾಲ್ಮೀಕಿಯ ಕೃತಿಯಾದ ರಾಮಾಯಣದಿಂದ ಪ್ರತಿಪಾದ್ಯನಾದಂಥ – **ಶ್ರೀಹರಿಯು.**

**೫೬೩. ವಿವಿಕ್ತಮತಿ ಪರರೀಶ**

ಏಕಾಂತ ಪ್ರಿಯಭಕ್ತರಿಗೆ ಒಡೆಯನಾದಂಥ – **ಶ್ರೀಹರಿಯು**

**೫೬೪. ಗತಿಪ್ರದ**

ಜೀವಾತ್ಮರು ತಮ್ಮ ತಮ್ಮ ಕರ್ಮಗಳಿಂದ ಸ್ವರ್ಗಾದಿ ಸುಖಫಲಗಳನ್ನೂ, ಅಂಥ ತಮಸ್ಸಿನಂತಹ ದುಃಖಫಲಗಳನ್ನು ಹೊಂದುವಂತೆ ಅನುಗ್ರಹಿಸುವದರಿಂದ ಗತಿಪ್ರದನಾದಂಥ **– ಶ್ರೀ ಹರಿಯು**

**೫೬೫. ವ್ಯಕ್ತ ಸುಚರಿತ.**

ರಾಮಕೃಷ್ಣಾದಿ ಅವತಾರಗಳಲ್ಲಿ ತನ್ನ ಒಳ್ಳೇ ಚಾರಿತ್ರ್ಯಗಳನ್ನು ವ್ಯಕ್ತಮಾಡಿದಂಥ – **ಶ್ರೀ ಹರಿಯು.**

**೫೬೬. ವೂರ್ಧ್ವಪಟಪ್ರಸ್ಥಾಪ**

ವೂರ್ಧ್ವಪಟ = ದಿಗಂಬರು ದಿಗಂಬರರನ್ನು ಯೋಗ್ಯ ಸ್ಥಾನದಲ್ಲಿಡುವಂಥ – **ಶ್ರೀ ಹರಿಯು.**

**೫೬೭. ವೇದ್ಯನಮೋ**

ಸಜ್ಜನರಿಂದಲೂ ಜ್ಞಾನಿಗಳಿಂದಲೂ ಚನ್ನಾಗಿ ತಿಳಿಯಲ್ಪಡುವಂಥ – **ಶ್ರೀ ಹರಿಯು**

**೫೬೮. ರಿಕ್ತಭಯ**

ಯಾರಿಂದಲೂ, ಯಾವ ಕಾಲಕ್ಕೂ, ಯಾವ ಸ್ಥಿತಿಯಲ್ಲಿಯೂ, ಯಾವ ದೇಶದಲ್ಲಿಯೂ, ಯಾವ ರೀತಿಯ ಭಯವಿಲ್ಲದೆ ಭಯರಹಿತನಾದಂಥ – **ಶ್ರೀ ಹರಿಯು**

**೫೬೯. ವೈದೇಹಿ ಮನೋಹರ**

ವೈದೇಹಿ – ವೈದೇಹ ದೇಶದವಳಾದ – ಸೀತಾದೇವಿ

ಮನೋಹರ, ಮನಸ್ಸನ್ನೂ ಗೆದ್ದವ.

ಶ್ರೀ ಲಕ್ಷ್ಮೀದೇವಿಯ ಅವತಾರಗಳಾದ ಸೀತಾದೇವಿಯ ಮನಸ್ಸನ್ನು ಗೆದ್ದಂಥ – ಶ್ರೀ ರಾಮಾವತಾರದ – **ಶ್ರೀ ಹರಿಯು.**

**೫೭೦. ತ್ಯಕ್ತ ಪ್ರಾಕೃತ**

ಪ್ರಾಕೃತಾಂಶ ರಹಿತನಾಗಿ ಅಪ್ರಾಕೃತ ರೂಪವುಳ್ಳಂಥ – **ಶ್ರೀ ಹರಿಯು**

**೫೭೧.ರಿಂದ ೫೭೫. ವೌಂಪೌಷಧಾಕ್ಷಯಾದ್ಯುಕ್ತಿವಾಚಕ.**

**ವ+ಉ+ಓಂ+ಪ+ಔಷಧ – ಆದಿ ಉಕ್ತಿ ವಾಚಕ**

ಈ ಎಲ್ಲ ಶಬ್ದ ವಾಚ್ಯನಾದಂಥ – **ಶ್ರೀ ಹರಿಯು.**

**೫೭೬. ವಂದ್ಯ ವಂದಿತ**

ಜಗದ್ವಂದರಾದ ಬ್ರಹ್ಮಾದಿಗಳಿಂದಲೂ ವಂದಿತನಾಗುವಂಥ – **ಶ್ರೀ ಹರಿಯು**

**೫೭೭ ವಹಕವಾಹಕ**

ವಹಕನಾದ ವಾಯುದೇವರಿಗೂ ಪ್ರೇರಕನಾದಂಥ – **ಶ್ರೀ ಹರಿಯು**

**ಶ**ಮಯುತಾಗ್ರಣಿ **ಶಾ**ಮ ಶಿವಕರ ।
ಗಮನ **ಶೀ**ಫ್ರಗ **ಶು**ದ್ಧವಿದ್ಯೋ – ।
ದ್ಯಮ ಶುಚಿವೃತ **ಶೂ**ರ್ಪನಖಿಮದಹರ್ತಾಶೇಷಸಹ ॥
ಶಮದಮಾಂಬುಧೆ **ಶೈ**ಲಗೃಹಸಂ – ।
ಯಮೀಗಣಾರ್ಚಿತ **ಶೋ**ಕತಾಪಪ್ರ – ।
ಶಮನ ಕೌಜಾರಮುತ ಮಹಾಪ್ರಭೋ **ಶಾಂ**ತಶಸ್ತ ನಮೋ ॥ ೪೧ ॥
(ಈ ನುಡಿಯಲ್ಲಿ – **ಶೌ ಶಃ** – ಅಕ್ಷರಮಾಲೆ ಉಳಿದಿವೆ)



**೫೭೮. ಶಮಯುತಾಗ್ರಣಿ**

ಶಮ ಅಂದರೆ ಭಗವನ್ನಿಷ್ಟ ಬುದ್ಧಿಯುಳ್ಳವರಿಗೆ ನಾಯಕ ನಾದಂಥ – **ಶ್ರೀ ಹರಿಯು.**

**೫೭೯. ಶಾಮ**

ನಾಮ – ೩೭ "ಕೃಷ್ಣ" – ನೋಡಿರಿ.

**೫೮೦. ಶಿವಕರ.**

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**
**– ಶ್ರೀ ಮದ್ಭಗವದ್ಗೀತಾ ಅಧ್ಯಾಯ – ೯ ಶ್ಲೋಕ – ೨೨**

**ಆವ ಜನಂಗಳು ಇನ್ನೊಂದಿಲ್ಲೆನೆ ನನ್ನನೇ ಚಿಂತಿಸಿ ಭಜಿಸುವರೋ।**
**ನನ್ನನು ಕೂಡಿಯೇ ನಿತ್ಯವಿರುತಿಹಾ ಜನರ ಹೊಣೆಯೆಲ್ಲ ನಾ ಹೊರುವೆ ॥**
**– ಪು.ತಿ. ನರಸಿಂಹಾಚಾರ್ಯ ಕೃತ – ಗೀತಾ ಅನುವಾದ**

ಭಕ್ತರ ಪ್ರಾಪ್ತ ರಕ್ಷಣೆ ರೂಪವಾದ ಕ್ಷೇಮವನ್ನು ನಿರ್ವಹಿಸುವವನು – ಭಗವಂತನು. ತನ್ನ ಅನನ್ಯೋಪಾಸಕರ ಯೋಗಕ್ಷೇಮವನ್ನು ತಾನೇ ನಿರ್ವಹಿಸುವದಾಗಿ ಗೀತಾಚಾರ್ಯನು ಸಂದೇಶಿಸಿರುವನು. ಇಂಥ ಶಿವ – ಶುಭ–ಕರನಾದಂಥ,[೨೪೧] – **ಶ್ರೀ ಹರಿಯು**

**೫೮೧. ಗಮನಶೀಫ್ರಗ;** ನಾಮ –೪೧೯ – "ದೂರಗ" ನೋಡಿರಿ.

ಭಗವಂತನು ಸರ್ವಗತ – ಎಲ್ಲೆಡೆ ಇರುವವನು. ಅಂದರೆ ಭಗವಂತನು. ದೂರದಲ್ಲಿ, ಸಮೀಪದಲ್ಲಿಯೂ, ಎಲ್ಲದರ ಒಳಗೂ ಹೊರಗೂ ಇರುವನು.[೨೪೨]

ಹಾಗೆಯೇ ಭಗವಂತನು ನಿಂತವನಾಗಿಯೇ ಬಿಡುತ್ತಿರುವ ಉಳಿದವರನ್ನು ಅತಿಕ್ರಮಿಸುವನು; ಎಂದೂ ತಿಳಿಸಿದೆ.[೨೪೩]

ಭಗವಂತನು ಎಲ್ಲೆಡೆ ಇರುವದರಿಂದಲೇ ಸಕಲ ಭುವನಗಳೂ ಅವನ ಸಮೀಪದಲ್ಲೇ ಇವೆ; ಎಂದು ಋಗ್ವೇದ ಸಂದೇಶಿಸಿದೆ.[೨೪೪]

ಹೀಗೆ ಗಮನ ಶೀಫ್ರಗನಾದಂಥ[೨೪೫] – **ಶ್ರೀ ಹರಿಯು.**

**೫೮೨. ಶುದ್ಧ ವಿದ್ಯೋದ್ಯಮ**

ಶುದ್ಧ ವಿದ್ಯಾಪ್ರಸಾರವೇ ಮುಖ್ಯೋದ್ದೇಶವುಳ್ಳ – ವ್ಯಾಸಾವತಾರದ – **ಶ್ರೀಹರಿಯು.**

---

೨೪೧. ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಫಲಿಮಾರು ಮಠದ ಟೀಕೆ ನಾಮ – ೨೭ – "ಶಿವಃ"ಕ್ಕೆ ಪುಟ ೧೦೦.
೨೪೨. ಈಶಾವಾಸ್ಯೋಪನಿಷತ್ತು ೧ – ೫ ಹಾಗೂ ಭಾಷ್ಯ; ಮತ್ತು ತತ್ವ ಸಂಹಿತ
೨೪೩. ಈಶಾವಾಸ್ಯೋಪನಿಷತ್ತಾ ೧–೪ ಹಾಗೂ ಭಾಷ್ಯ, ಮತ್ತು ಬ್ರಹ್ಮಾಂಡ
೨೪೪. ಋಗ್ವೇದ ೩೪ – ೫ ಮತ್ತು ಭಾಷ್ಯ
೨೪೫. ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಫಲಿಮಾರು ಮಠದ ನಾಮ – ೧೨೬ – "ಸೌಗಃ" ಇದಕ್ಕೆ ಪುಟ ೪೪೨.

**೫೮೩. ಶುಚಿವೃತ**

ಶುದ್ಧ ವೃತವುಳ್ಳಂಥ – **ಶ್ರೀ ಹರಿಯು**

**೫೮೪. ಶೂರ್ಪನಖಿ ಮದಹರ್ತ**

ಶೂರ್ಪನಖಿಯ ಮದ ಹರಣ ಮಾಡಿದ – ರಾಮಾವತಾರದ – **ಶ್ರೀಹರಿಯು**

**೫೮೫. ಅಶೇಷಸಹ**

ಎಲ್ಲವನ್ನೂ ಸಹನೆಮಾಡುವಂಥ – **ಶ್ರೀಹರಿಯು.**

**೫೮೬. ಶಮಾಂಬುಧೆ;** **(ಶಮ – ಭಗವನ್ನಿಷ್ಟತಾಬುದ್ಧಿಃ)**

**೫೮೭. ದಮಾಂಬುಧೆ;** **(ದಮ – ಇಂದ್ರಿಯ ನಿಗ್ರಹಃ)**

ವಿಷ್ಣು ಭಕ್ತಿಯಿಂದ ಕೂಡಿ ವೇದಾಧ್ಯಯನ ಮಾಡಿದವನು ಮಂದಾಧಿಕಾರಿ. ಶಮದಮಾದಿಗಳಿಂದ ಕೂಡಿ ಭಕ್ತಿ, ವೇದಾಧ್ಯಯನಗಳುಳ್ಳವನು ಮಧ್ಯಮಾಧಿಕಾರಿಯು, ಅಂತಾ ಗುಣಕೃತಿವಾದ ಅಧಿಕಾರ ಪ್ರಬೇಧ. ಹೀಗೆ ತನ್ನ ಭಕ್ತರಲ್ಲಿ ಶಿಮ, ದಮಗಳನ್ನು ಸಮುದ್ರಗಳಂತೆ ವಿಶಾಲವಾಗಿ ದಯಪಾಲಿಸುವಂಥ – **ಶ್ರೀ ಹರಿಯು.**

**೫೮೮. ಶೈಲಗೃಹ ಸಂಯಮೀಗಣಾರ್ಚಿತ.**

ಶೈಲ + ಗ್ರಹ + ಸಂಯಮೀ + ಗಣ + ಅರ್ಜಿತ

ಪರ್ವತ + ಮನೆ + ಸಂಯಮನ ಉಳ್ಳವನ + ಸೇವಕ ವೃಂದ + ಪೂಜಿತ.

ಪರ್ವತವೇ ಮನೆಯನ್ನಾಗಿ ಮಾಡಿಕೊಂಡಿದ್ದು ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ಸಂಯಮ ಶ್ರೇಷ್ಠರಾದ ಮುನಿಗಳಿಂದ ಪೂಜಿತನಾಗುವಂಥ – **ಶ್ರೀ ಹರಿಯು.**

**೫೮೯. ಶೋಕ ಪ್ರಶಮನ;** **೫೯೦. ತಾಪ ಪ್ರಶಮನ**

ಶೋಕ + ತಾಪ + ಪ್ರ + ಶಮನ

ದುಃಖ + ಬೇಗೆ + ಚನ್ನಾಗಿ + ನಾಶಗೊಳಿಸಿ ಶಾಂತಗೊಳಿಸು.

ದುಃಖ ಹಾಗೂ ಬೇಗೆಯನ್ನು ತನ್ನ ಕೃಪಾದೃಷ್ಟಿಯ ಅವಲೋಕನೆಯಿಂದ ಶಾಂತ ಗೊಳಿಸುವಂಥ – **ಶ್ರೀಹರಿಯು.**

**೫೯೧. ಕೌಜಾರಯುತ ಮಹಾಪ್ರಭೋ**

**ಕೌ** – ಅಂದರೆ ಭೂಮಿಯಲ್ಲಿ – ಜಾತಃ – ಹುಟ್ಟಿದ ಸಜ್ಜನರು

ತಾನ್‌ರಮಯತಿ ಇತಿ – **ಕೌ**ಜಾರಃ ಯುತ ಮಹಾಪ್ರಭೋ.

ಭೂಮಿಯಲ್ಲಿ ಹುಟ್ಟಿದ ಸಜ್ಜನರ ಮಹಾಪ್ರಭುವಾದ – **ಶ್ರೀಹರಿಯು**

**೫೯೨. ಶಾಂತಶಸ್ತ**

ಶಾಂತನಿಯಮನವುಳ್ಳಂಥ – **ಶ್ರೀಹರಿಯು**



**ಷ**ಡ್ವಿಭೂತೆ ನಿ**ಷಾ**ದಭಯಹರ ।
ಷಡ್ವಧೂಧವ ಋ**ಷಿ**ವಧೂಸಖ ।
ಶಾಡ್ವಲಚರ ಇಷ್ವೀಕ ಇ**ಷು**ಕಾಂಡ ಸವಿಹಾರಾ ॥
ಷಡ್ವಿಕಾರಾತೀತ ವಿಜಿತಾ – ।
ನಡ್ವೇಶ ಉಚಿತ ಸೌರಭೇಯಭೂ – ।
ವಿಡ್ವರಘ್ನ ವೃಕ್ಷಾಘ್ನ ಸ್ವರ್ಣನಿ**ಷಂ**ಗಚಾಪ ನಮೋ ॥ ೪೫ ॥
(ಈ ನುಡಿಯಲ್ಲಿ – **ಷೂ,ಷೆ, ಷೈ, ಷೋ, ಷೇ, ಷಃ** – ಅಕ್ಷರಮಾಲೆ ಉಳಿದಿವೆ.

**೫೯೩ ಷಡ್ವಿಭೂತೆ**

ಷಡ್ = ಆರು; ವಿಭೂತಿ = ಐಶ್ವರ್ಯ

ಆರು ಐಶ್ವರ್ಯಗಳುಳ್ಳಂಥ – **ಶ್ರೀಹರಿಯು**

ನಾಮ – ೧ – ಶ್ರೀರಮಾವರ – ನೋಡಿರಿ

**೫೯೪. ನಿಷಾದ ಭಯಹರ**

ಬೇಡ ಜಾತಿಯವನಾದ ಶ್ರೀ ರಾಮಾಯಣ ಕರ್ತೃವಾದ ವಾಲ್ಮೀಕಿ ಮುನಿಯ ಭಯವನ್ನು ನಾಶ ಮಾಡಿದಂಥ – **ಶ್ರೀ ಹರಿಯು.**

**೫೯೫. ಷಡ್ವಧೂಧವ...**

ರುಕ್ಮಿಣಿ ಸತ್ಯಭಾಮಾ ಅವರನ್ನಲ್ಲದೇ ಇನ್ನು ಆರು ಕನ್ಯೆಯರ ನಲ್ಲ ನಾದಂಥ ಕೃಷ್ಣ ವಂಶದ – ಶ್ರೀ ಹರಿಯು ನಾಮ – ೭೫೫ ಅಷ್ಟ ಮಹಿಷೆಯರು – ನೋಡಿರಿ.

**೫೯೬. ಋಷೀವಧೂ ಸಖ...**

ಇಂದ್ರನು ಗೌತಮರು ಆಶ್ರಮದಲ್ಲಿಲ್ಲದಾಗ – ಆಶ್ರಮ ಪ್ರವೇಶಿಸಿ ಅವರ ಪತ್ನಿಯಾದ ಅಹಲ್ಯೆಯನ್ನು ಗೌತಮರ ಮಾರು ವೇಷದಿಂದ ಭೋಗಿಸಿದನು. ಇದನ್ನು ಅರಿತ ಗೌತಮರು, ಅಹಲ್ಯೆಗೆ ಕಲ್ಲಾಗೆಂದು ಶಾಪಕೊಟ್ಟರು. ಶ್ರೀ ರಾಮನು ಕಾಡಿನಲ್ಲಿ ಸಂಚರಿಸುವಾಗ, ಅಹಲ್ಯೆಯಲ್ಲಿಯ ಸ್ವಾಭಾವಿಕವಾದ ಭಕ್ತಿಗೆ ಮೆಚ್ಚಿ, ಅವಳನ್ನು ಕಲ್ಲಿನ ಸ್ವರೂಪದಿಂದ ಮೋಚಿಸಿ, ಶಾಪ ಬಿಡುಗಡೆ ಮಾಡಿ, ಪುನಃ ಗೌತಮರ ಜೊತೆ ಗೂಡಿಸಿದನು. ಹೀಗೆ ಗೌತಮರನ್ನು ಸಪತ್ನೀಕರಿಸಿದಂಥ – ರಾಮಾವತಾರದ,[೨೪೬] – **ಶ್ರೀ ಹರಿಯು.**

**೫೯೭. ಶಾಡ್ವಲಚರ ಇಷ್ವೀಕ**

ಶಾಡ್ವಲ = ಹಸಿರು ಹುಲ್ಲುಗಾವಲು; ಇಷ್ವೀಕ = ಇಚ್ಛೆಯುಳ್ಳವ ಹಸಿರು ಹುಲ್ಲು ಗಾವಲಿನಲ್ಲಿ ಸಂಚರಿಸಲಿಚ್ಛೆ ಪಟ್ಟಂಥ – ರಾಮಾವತಾರದ – **ಶ್ರೀಹರಿಯು.**

**೫೯೮. ಇಷು ಕಾಂಡಸವಿಹಾರಾ –**

ಇಷು = ಬಾಣ + ಕಾಂಡ + ಭಾಗ + ಸ + ವಿಹಾರಾ.

ಬಿಲ್ಲುಬಾಣಗಳೊಂದಿಗೆ ಸಂಚರಿಸಿದ – ರಾಮಾವತಾರದ – ಶ್ರೀಹರಿಯು.

---

೨೪೬. ಶ್ರೀ ಹುಲಗಿ ಶ್ರೀನಿವಾಸಾಚಾರ್ಯ ಕೃತ "ಶ್ರೀ ರಘುರಾಮಾಯಣವರ್ಯ ಪ್ರಥಮಸರ್ಗ – ಶ್ಲೋಕ ೨೨ ಹಾಗೂ ೨೫

**೫೯೯. ಷಡ್ವಿಕಾರಾತೀತ**

(೧) ಕಾಮ (೨) ಕ್ರೋಧ (೩) ಲೋಭ (೪) ಮೋಹ (೫) ಮದ ಹಾಗೂ (೬) ಮತ್ಸರ, ಈ ಆರೂ ವಿಕಾರಗಳಿಗೆ ವಶನಾಗದಂಥ – **ಶ್ರೀಹರಿಯು**

ನಾಮ – ಷಡೂರ್ಮಿಹರ" ನೋಡಿರಿ.

**೬೦೦. ವಿಜಿತಾನಡ್ವೇಶ –**

ವಿಜಿತ + ಅನಡ್ವ + ಈಶ

ಗೆದ್ದವ + ಎತ್ತೋ ಅಥವಾ ಹೋರಿ + ಈಶ

ನೀಲಾ ದೇವಿಯ ಸ್ವಯಂವರ ಕಾಲದಲ್ಲಿ ಏಳು ಹೋರಿಗಳನ್ನು ಅಂಕಿತದಲ್ಲಿ ತಂದುಕೊಂಡು ಅವುಗಳಿಗೆ ಮೂಗುದಾರ ಹಾಕಿದಂಥ ಕೃಷ್ಣನವತಾರದ – ಶ್ರೀ ಹರಿಯು ನಾಮ ೭೫೫ – ಅಷ್ಟ ಮಹಿಷೆಯರ ನೋಡಿರಿ.

**ಉಚಿತಸೌರಭೇಯ ಭೂ – ವಿಡ್ವರಘ್ನ**

**೬೦೧. ಉಚಿತ ವಿಡ್ವರಘ್ನ; ೬೦೨. ಸೌರಭೇಯ – ವಿಡ್ವರಘ್ನ**

**೬೦೩. ಭೂ – ವಿಡ್ವರಘ್ನ.**

ಉಚಿತ + ಸೌರಭೇಯ + ಭೂ – ವಿಟ್ + ವರ+ ಘ್ನ; ಯೋಗ್ಯ + ಆಕಳು+ ಭೂದೇವಿ – ಕಾಡೂವ + ಶ್ರೇಷ್ಠ + ನಾಶಮಾಡುವವ + ಸಜ್ಜನರನ್ನು

ಆಕಳುಗಳನ್ನು ಹಾಗೂ ಭೂದೇವಿಯನ್ನು ಪೀಡಿಸುವದರಲ್ಲಿ ಹೆಚ್ಚಿನವರೆನಿಸಿದ ದುಷ್ಟರನ್ನು ನಾಶಮಾಡುವಂಥ – **ಶ್ರೀಹರಿಯು.**

**೬೦೪. ವೃಕ್ಷೌಘ್ನ**

ಹಾಲು ಉಕ್ಕಿತೆಂದು ಅದಕ್ಕೆ ತಣ್ಣೀರು ಬೆರೆಸಲಿಚ್ಛಿಸಿ ಯಶೋಧೆಯು ಶ್ರೀ ಕೃಷ್ಣನಿಗೆ ಮೊಲೆಯುಣಿಸುವದನ್ನು ತಡೆದು ಆತನನ್ನು ಅಲ್ಲಿಯೇ ತಾನು ಕಡೆಯುತ್ತಿರುವ ಮೊಸರು ಗಡಿಗೆಯ ಹತ್ತಿರ ಕುಳ್ಳಿರಿಸಿ ಒಳಗೆ ಹೋಗಿ ಬರುವಷ್ಟರಲ್ಲಿ ಮೊಸರು ಗಡಿಗೆಯನ್ನು ಒಡೆದು ಅದರಲ್ಲಿದ್ದ ಬೆಣ್ಣೆಯನ್ನು ತನ್ನ ಕೈಗಳಲ್ಲಿ ಒಂದಷ್ಟು ತೆಗೆದುಕೊಂಡು ಹೋಗಿ, ಇನ್ನೊಂದು ಕೋಣೆಯಲ್ಲಿ ಕುಳಿತು, ತಾನೂ ಮೆಲ್ಲುತ್ತಾ ತನ್ನ ಬಳಿ ಬಂದು ಕುಳಿತ ಮಂಗನಿಗೂ ಆಗಾಗ ಸ್ವಲ್ಪ ಸ್ವಲ್ಪ ಕೊಡುತ್ತಿರುವದನ್ನು ಕಂಡ ಯಶೋಧೆಯು ಆತನನ್ನು ಹಿಡಿದು ಪ್ರಯಾಸಬಿಟ್ಟು ಅಲ್ಲಿಯೇ ಇದ್ದ ಒಂದು ಕಟ್ಟಿಗೆಯ ಒರಳಿಗೆ ಕಟ್ಟಿ ಹಾಕಿದಳು. ಹೀಗೆ ನಡುವಿಗೆ ಹಗ್ಗದಿಂದ ಕಟ್ಟಿಸಿಕೊಂಡು "ದಾಮೋದರ"ನಾದ ಶ್ರೀ ಕೃಷ್ಣನು ಆ ಒರಳು ಸಹಿತ ಎಳೆಯುತ್ತ ಸಮೀಪದ ಅಂಗಳದಲ್ಲಿ ಬೆಳೆದು ನಿಂತ. ಎರಡು ಅರ್ಜುನ – ಮತ್ತಿಯ – ಜೋಡಿ ಮರದತ್ತ ನಡೆದನು. ಅವನಿಗೆ ಆ ಮರಗಳನ್ನು ಉರುಳಿಸಬೇಕಾಗಿತ್ತು. "ಯಮಳಾರ್ಜುನ ಭಂಜನಃ" ಎನ್ನಿಸಿಕೊಳ್ಳಬೇಕಾಗಿತ್ತು.

ಇದಕ್ಕೆ ಕಾರಣ, ಕುಬೇರನ ಮಕ್ಕಳಾದ ನಳಕೂಬರ – ಮಣಿಗ್ರೀವರು ನಾರದರ ಶಾಪದಿಂದ ಇಲ್ಲಿ ಮರವಾಗಿದ್ದರು. ಕೃಷ್ಣನ ಸ್ಪರ್ಶದಿಂದ ಅವರ ಶಾಪ ವಿಮೋಚನೆಯಾಗಬೇಕಿತ್ತು.



ಅದಕ್ಕಾಗಿ ಕೃಷ್ಣ ಆಮರಗಳ ನಡುವೆ ಒರಳನ್ನು ಎಳೆದುಕೊಂಡು ಬಂದ, ಅವಳಿಮರು ಉರಳಿ ಬಿತ್ತು. ನಳಕೂಬರಮಣಿಗ್ರೀವರ ಶಾಪ ವಿಮೋಚನೆಯಾಯಿತು. ಅವರು ಮೈವೆತ್ತು ಒಂದು, "ನಾವು ಉನ್ಮತ್ತರಾಗಿ ನಡೆದು ಕೊಂಡದ್ದರಿಂದ ನಮಗೆ ಈ ಗತಿ ಬಂತು. ನಮ್ಮ ಅಹಂಕಾರಕ್ಕೆ ತಕ್ಕ ಶಾಸ್ತಿಯಾಯಿತು." ಎಂದು ಹೇಳಿ," ನಮ್ಮ ಕಣ್ಣು ಸದಾ ನಿನ್ನ ರೂಪವನ್ನು ಕಾಣುವಂತೆ, ಕಿವಿ ನಿನ್ನ ಮಹಿಮೆಯನ್ನು ಕೇಳುವಂತೆ, ಬಾಯಿ ನಿನ್ನ ಗುಣಗಳನ್ನು ಕೊಂಡಾಡುವಂತೆ, ಕೈಗಳು ನಿನ್ನ ಸೇವೆ ಮಾಡುವಂತೆ, ತಲೆ ಸದಾ ನಿನಗೆ ಬಾಗಿರುವಂತೆ, ಮನಸ್ಸು ಸದಾ ನಿನ್ನ ಪಾದಸ್ಮರಣೆ ಮಾಡುವಂತೆ ಅನುಗ್ರಹಿಸು" ಅಂತಾ ಪ್ರಾರ್ಥಿಸಿಕೊಂಡು ಹೋದರು. ಅದೇ ಕಾಲಕ್ಕೆ, ಆ ಮರಗಳಲ್ಲಿ ಸೇರಿಕೊಂಡು ತಪಸ್ಸನ್ನೂ ಮಾಡುತ್ತಿದ್ದ ಧುನಿ ಮತ್ತು ಚಮು ಎಂಬ ಇಬ್ಬರು ದೈತ್ಯರೂ ಸತ್ತರು.

ಸವಿಷಮುಧ್ರೂಪ ಉಚ್ಛಿದ್ಯ ದೈತ್ಯನೆ ಗೌವಪುಷೋ ಆಹನತ್ । – ಮಣಿ ಮಂಜರಿ

ಯಶೋಧೆ ಬಂದು ನೋಡುತ್ತಾಳೆ. ಭಾರಿ ಗಾತ್ರದ ಜೋಡಿ ಮತ್ತಿಯ ಮರ ಉರುಳಿ ಬಿದ್ದಿದೆ. ಕೃಷ್ಣನಿಗೆ ಏನು ಅಪಾಯವಾಯಿತೋ ಎನ್ನುವ ಭಯ ಅವಳಿಗೆ ಹತ್ತಿರ ಬಂದು ನೋಡಿದರೆ ಕೃಷ್ಣ ಮುರಿದ ಮರದ ಮೇಲೆ ಹಾಯಾಗಿ ಆಡುತ್ತ ನಲಿಯುತ್ತಿದ್ದಾನೆ.[೨೪೭]

ಹೀಗೆ " ವೃಕ್ಷೌಘ್ನ"ನಾದಂಥ – ಕೃಷ್ಣಾವತಾರದ – **ಶ್ರೀಹರಿಯು.**

**೬೦೫. ಸ್ವರ್ಣನಿಷಂಗ ಚಾಪ –**

ನಿಷಂಗ = ಬತ್ತಳಿಕೆ; ಚಾಪ = ಬಿಲ್ಲು.

ಚಿನ್ನದ ಬಿಲ್ಲು ಬತ್ತಳಿಕೆಗಳನ್ನು ಧರಿಸಿದಂಥ – **ಶ್ರೀಹರಿಯು**

**ಸ**ರಸಿಜಾನನ **ಸಾ**ಧ್ಯಸಿದ್ಧನಿ – ।
ಕರಕರಾರ್ಚಿತ ಶಿಕ್ಷಾರಕ್ಷಕ – ।
**ಸು**ರಹೃನ್ಮಂದಿರ **ಸೂ**ರಿ ಹೃದ್ಗುಹ**ಸೇ**ವ್ಯ ಸುರಮೌಳಿ ॥
ನಿರಜಸ್ಸೈಂಧವ ಶಾಸ್ತ್ರ, **ಸ್ತೋ**ಮಾ – ।
ಭರಣತೋಷಕ **ಸೌ**ಮ್ಯರತ್ನಾ – ।
ಕರಗ ನಿರಂಜನ **ಸಂ**ಜಯೋತ್ಸವ **ಸ**ಹಜಶೂರ ನಮೋ ॥ ೪೩॥
(ಈ ನುಡಿಯಲ್ಲಿ –ಸೀ– ಇದೊಂದು ಅಕ್ಷರಮಾಲೆ ಮಾತ್ರ ಉಳಿದಿದೆ)

**೬೦೬. ಸರಸಿ ಜಾನನ**

ಸರಸ್ಸು + ಜ + ಆನನ

ಕಮಲದಂತೆ ಯಾವಾಗಲೂ ಅರಳಿದ ಮುಖವುಳ್ಳಂಥ – **ಶ್ರೀಹರಿಯು**

**೬೦೭. ಸಾಧುನಿಕರ ಕರಾರ್ಚಿತ ಮತ್ತು ೬೦೮ ಸಿದ್ಧ ನಿಕರ ಕರಾರ್ಚಿತ**

**ನಿಕರ = ಸಮೂಹ**

ಸಾಧು ಸಿದ್ಧರ ಸಮೂಹದಿಂದ ಕರಾರ್ಚಿತನಾದಂಥ – **ಶ್ರೀಹರಿಯು**

---

೨೪೭. ಶ್ರೀ ಮದ್ಭಾಗವತ ದಶವಂಸ್ಕಂಧ ಪೂರ್ವಾರ್ಧ ಅಧ್ಯಾಯಗಳು ೧೦,೧೧

**೬೦೯. ಶಿಕ್ಷಾರಕ್ಷಕ** ಶಿಕ್ಷಾ=ವೇದಾಂಗ

ವೇದ ಹಾಗೂ ವೇದಾಂಗ ಶಿಕ್ಷಕನಾದಂಥ – **ಶ್ರೀಹರಿಯು**

**೬೧೦. ಸುರಹೃನ್ಮಂದಿರ**

ಸುರ+ಹೃದ್+ಮಂದಿರ

ದೇವತೆಗಳ ಹೃದಯವೆಂಬ ಮಂದಿರದಲ್ಲಿ ವಾಸವಾಗಿರುವಂಥ – **ಶ್ರೀಹರಿಯು**

**೬೧೧. ಸೂರಿಹೃದ್ಗುಹ ಸೇವ್ಯ**

ಸೂರಿ = ವಿದ್ವಾಂಸ, ಬಲ್ಲದ, ಜ್ಞಾನಿಗಳು (ಕನ್ನಡ ಶಬ್ದಕೋಶ)

ಜ್ಞಾನಿಗಳ ಹೃದಯವೆಂಬ ಗುಹೆಯಲ್ಲಿ ಸೇವೆ ಕೈಕೊಳ್ಳುವಂತಹ – **ಶ್ರೀ ಹರಿಯು**

**೬೧೨. ಸುರಮೌಳಿ**

ದೇವತೆಗಳಲ್ಲೆಲ್ಲ ಶ್ರೇಷ್ಠನಾದಂಥ – **ಶ್ರೀಹರಿಯು**

ನಾಮ (i) ೧೨–ಸುರಮಣಿ (ii) ೧೮–ಸುರೇಶ (iii) ೨೫೫ – ಸುರೇಂದ್ರ (iv) ಸುರಜ್ಯೇಷ್ಠ – ನೋಡಿರಿ.

**೬೧೩ ನಿರಜ**

ರಜಗುಣವೇ ಮೊದಲಾದ ಪ್ರಾಕೃತ ಗುಣ ಸಂಪರ್ಕ ರಹಿತನಾದಂಥ – **ಶ್ರೀ ಹರಿಯು**

**೬೧೪. ಸೈಂಧವ**

ಸಿಂದು ಶಯನನಾದಂಥ – **ಶ್ರೀ ಹರಿಯು**

**೬೧೫. ಶಾಸ್ತ್ರಸ್ತೋಮಾಭರಣ ತೋಷಕಃ**

ಶಾಸ್ತ್ರಗಳ ಸಮುದಾಯವೇ ಆಭರಣವಾಗಿ ಉಳ್ಳಂಥ ಜ್ಞಾನಿಗಳನ್ನು ಸಂತೋಷ ಪಡಿಸುವಂಥ – **ಶ್ರೀ ಹರಿಯು.**

**೬೧೬. ಸೌಮ್ಯರತ್ನಾಕರಗ –**

ನಾಮ – ೯೫ – **“ಕುಶಶಯನ”** – ನೋಡಿರಿ

**೬೧೭. ನಿರಂಜನ**

ಅಜ್ಞಾನಾದಿ ಪದ ವಾಚ್ಯವಾದ ಅವಿದ್ಯಾರಹಿತನಾದಂಥ – **ಶ್ರೀಹರಿಯು**

ಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೧ ಶ್ಲೋಕ ೬೪.

**೬೧೮. ಸಂಜಯೋತ್ಸವ**

ಯಾವಾಗಲೂ ಗೆಲವು ರೂಪ ಉತ್ಸವವುಳ್ಳಂಥ – **ಶ್ರೀ ಹರಿಯು**

**೬೧೯. ಸಹಜ ಶೂರ.** *

ಶೂರತ್ವವೇ ಗುಣವಾಗುಳ್ಳಂಥ – **ಶ್ರೀಹರಿಯು**



**ಹಲಿಸಹಗ ಹಾರ್ದಿಕಮನೋಗತ** – ।
ಫಲದ **ಹಿರಣ್ಮಯವಸನ ಹೀರಾ** – ।
ವಲಯ **ಹುತಭುಗ್** ಬಲದ **ಹೂಣಪವಿತ್ರ ಹೇತ್ವಾರ್ಥಾ** ॥
ಜಲಧಿ ಪುರಪತೆ **ಹೈಮರಾಶಿದ** ।
ಬಲದ **ಹೋಮದ ಹೌತ್ರ** ಭಾಗದ ।
ಸಲಲಿತೋದನ ಪರಮ**ಹಂ**ಸ ಸತ್ಕೂಲಹರುಷ ನಮೋ ॥ ೪೪ ॥
(ಈ ನುಡಿಯಲ್ಲಿ – ಹಃ – ಇದೊಂದು ಅಕ್ಷರಮಾಲೆ ಮಾತ್ರ ಉಳಿದಿದೆ)

***೬೨೬. ಹಲಿಸಹಗ –**

ಹಲಿ=ಬಲರಾಮ – ಕನ್ನಡರತ್ನಕೋಶ

ಅಣ್ಣನಾದ ಬಲರಾಮನೊಡಗೂಡಿ ಸಂಚರಿಸಿದ ಶ್ರೀ ಕೃಷ್ಣಾವತಾರದ – **ಶ್ರೀಹರಿಯು**

**೬೨೭. ಹಾರ್ದಿಕ ಮನೋಗತ ಫಲದ**

ಹಾರ್ದಿಕ – ಹೃದಯದಲ್ಲಿದ್ದ ಮುಕ್ತಾತ್ಮರನ್ನು, ಅವರಮನ ಬಯಸಿದಂಥ ಫಲಗಳನ್ನು ಕೊಟ್ಟು, ತನ್ನ ಆಲಯಗಳಲ್ಲಿಟ್ಟು ಸುಖಬಡಿಸುವಂಥ – **ಶ್ರೀಹರಿಯು**

**೬೨೮. ಹಿರಣ್ಮಯವಸನ**

ಚಿನ್ನದಿಂದ ಮಾಡಿದ (ಜರತಾರಿ ಪೀತಾಂಬರ) ವಸ್ತುಗಳನ್ನು ಧರಿಸುವಂಥ – **ಶ್ರೀಹರಿಯು.**

**೬೨೯. ಹೀರಾವಲಯ**

ರತ್ನಮಯವಾದ ಕಡಗ ಮೊದಲಾದ ಆಭರಣಗಳನ್ನು ಧರಿಸಿದಂಥ – **ಶ್ರೀ ಹರಿಯು**

**೬೩೦. ಹುತ್‌ಭುಗ್ಬಲದ –**

ಆಹುತಿಯನ್ನು ಸ್ವೀಕರಿಸುವಂಥ ಹುತವಾದದ್ದನ್ನು ಸ್ವೀಕರಿಸುವ ಅಗ್ನಿದೇವನಿಗೆ ಬಲಿಕೊಡುವಂಥ – **ಶ್ರೀ ಹರಿಯು**

**೬೩೧. ಹೂಣ ಪವಿತ್ರ**

ನೀಚ – ಜಾತಿಯವರನ್ನೂ ಕೂಡ ಪವಿತ್ರ ಗೊಳಿಸುವಂಥ – **ಶ್ರೀ ಹರಿಯು**

**ಕಿರಾತಹೃಡ್ಗರ್ದಪುಲಿಂದಪುಲ್ಕಸಃ ।**
**ಆಭೀರಕಂಕಾಃ ಯವನಾರಕಾದಯಃ ॥**
**ಅನ್ಯೇಶ್ಚಪಾಪಾಃಮದಾಶ್ರಯಾತ್ಕಮಾತ್ ।**
**ಶುದ್ಧಂತಿ ತಸ್ಮೈ ಪ್ರಭುವೇ ನಮಃ॥ – ಶ್ರೀಮದ್ಭಾಗವತ ದ್ವಿತೀಯಸ್ಕಂಥ.**

**೬೩೨. ಹೇತ್ವಾರ್ಥಾ –**

ಸಕಲಕ್ಕೂ ಕಾರಣೀ ಭೂತನಾದಂಥ – **ಶ್ರೀಹರಿಯು**

* ವಿ. ಸೂ. ೬೨೦ ರಿಂದ ೬೨೫ರವರೆಗೆ ಗ್ರಂಥಕರ್ತರು ನಾಮದ ನಂಬರ ಕೊಟ್ಟಿರುವುದಿಲ್ಲ.

**೬೩೩. ಜಲಧಿ ಪುರಪತಿ**

ಕಂಸನನ್ನು ಕೊಂದದ್ದರಿಂದ ಆತನ ಮಾವನಾದ ಜರಾಸಂಧನು ಮಧುರೇಯ ಮೇಲೆ ಮೇಲಿಂದ ಮೇಲೆ ದಾಳಿ ಮಾಡಹತ್ತಿದ್ದರಿಂದ ಯಾದವರಿಗಾಗಿ, ಸಮುದ್ರ ಹಿಂದೆ ಸರಿಸಿ, ದ್ವಾರಕೆಯಲ್ಲಿ ಬಂದು ಜಲದುರ್ಗ ಕಟ್ಟಿಸಿದಂಥ ಕೃಷ್ಣಾವತಾರದ – **ಶ್ರೀ ಹರಿಯು**

(i) ಸುದರ್ಗಮಾಲಯ (ii) ಕುಶಸ್ಥಳೀಕ – ನೋಡಿರಿ

**೬೩೪ ಹೈಮರಾಶಿದ** (ಹೈಮ = ಚಿನ್ನ)

ತನ್ನ ಭಕ್ತನಾದ ಕುಚೇಲನಿಗೆ (ಸುದಾಮನಿಗೆ) ಕೊಟ್ಟಂತೆ ತನ್ನ ಭಕ್ತರಿಗೆ ಚಿನ್ನದ ರಾಶಿಯನ್ನೇ ದಯಪಾಲಿಸುವಂಥ – **ಶ್ರೀಹರಿಯು**

**೬೩೫. ಬಲದ**

ಭಗವಂತನು ಬಲಸ್ವರೂಪಿಯಾದ್ದರಿಂದಲೇ ಸಮಸ್ತ ಜಗತ್ತನ್ನು ಪ್ರೇರಿಸಲು ಸಮರ್ಥನೆನಿಸಿರುವನು. ಭಗವಂತನನ್ನು ಬಲಸ್ವರೂಪಿ ಎಂಬ ಅಭಿಪ್ರಾಯದಲ್ಲಿ –"ಬಲಂ" ಎಂದೇ ಸ್ತುತಿಸಲ್ಪಡುವನು; ಇಂಥ – **ಶ್ರೀ ಹರಿಯು.**[೨೪೮]

**೬೩೬. ಹೋಮದ**

ಹೋಮದ್ರವ್ಯಾದಿಗಳನ್ನು ಪೂರೈಸುವಂಥ – **ಶ್ರೀಹರಿಯು**

**೬೩೭. ಹೌತ್ರಭಾಗದ**

ಹೊತಾ ಎಂಬವನದಲ್ಲಿದ್ದುಕೊಂಡು, ಆ ಭಾಗವನ್ನು ಅವನಿಗೆ ಮುಟ್ಟಿಸುವಂಥ – **ಶ್ರೀ ಹರಿಯು**

**೬೩೮. ಸುಲಲಿತೋದನ** (ಓದನ = ಮುಖ)

ಅತೀ ಶ್ರೇಷ್ಠವಾದ ಯಜ್ಞಭಾಗವನ್ನು ಸ್ವೀಕರಿಸುವಂಥ– **ಶ್ರೀ ಹರಿಯು**

**೬೩೯. ಪರಮಹಂಸ – ಹಾಗೂ ೬೪೦ ಸತ್ಕುಲ ಹರುಷ**

(i) ಕಚೇಚಕ (ii) ಬಹೂದಕ (iii) (iv) ಪರಮಹಂಸ ಇವೇ ಮೊದಲಾದ ಸನ್ಯಾಸದ ಪ್ರಭೇದಗಳಲ್ಲಿಯ ಶ್ರೇಷ್ಟವಾದ ಪರಮಹಂಸರಿಗೆ ಯಾವಾಗಲೂ ಹರ್ಷವನ್ನುಂಟು ಮಾಡುವಂಥ – **ಶ್ರೀಹರಿಯು.**

ಪಳಲವಾಂತಕ**ಳಾ**ಢ್ಯಯಜ್ಞಾ – ।
ವಳಿಕೃತಾದರ ನಿರ್ವಳೀಕ ಅ – ।
ಖಿಳಕೃಪಾ**ಳು**ವರೇಣ್ಯ ಜೀವ ಜಿ**ಳೂ**ಕ ತೃಪ್ತಿಕರ ॥
ಸ್ಥಳ ಕಳೇವರ ಭರಿತ ಬ್ರಹ್ಮವೀ – ।
ಪುಳ ಕಳೈಕ್ಯ ತಳೋರ್ಧ್ವ ಮದವಿ ।
ವ್ಥಳ ಬಳೌಘನೆ ನಿಷ್ಕಳಂಕ ಕಳಾ ಪ್ರಪೂರ್ಣನಮೋ ॥ ೪೫ ॥
(ಈ ನುಡಿಯಲ್ಲಿ – **ಳೆ ಹಾಗೂ ಳಃ** – ಅಕ್ಷರಮಾಲೆಗಳು ಉಳಿದಿವೆ)

೨೪೮. ಶ್ರೀಮದ್ ಭಾಗವತ ೮–೫–೨೮ ಹಾಗೂ ಭಾಷ್ಯ ಹಾಗೂ ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಟೀಕೆ, ನಾವು – ೬೯"ಪ್ರಾಣಃ" ಕ್ಕೆ ಪುಟ ೨೩೪



**೬೪೧. ಪಳಲವಾಂತ; ೬೪೨. ಕಳಾಢ್ಯ**

ಪುಳ, ಲವ ಮೊದಲಾದ ಕಾಲದ ಅಂಶಗಳಲ್ಲಿಯೂ ಕೂಡಾ ಸಮೃದ್ಧವಾಗಿ ಇರುವಂಥ – **ಶ್ರೀ ಹರಿಯು**

**೬೪೩. ಯಜ್ಞಾವಳಿಕೃತಾದರ –**

(ಆವಳಿ – ಸಮುದಾಯ)

ಯಜ್ಞಗಳ ಸಮುದಾಯದಲ್ಲಿ ಆದರವುಳ್ಳಂಥ – **ಶ್ರೀ ಹರಿಯು**

**೬೪೪. ನಿರ್ವ್ಯಲಿಕ –**

ಅಪ್ರಿಯ ರಹಿತನಾದಂಥ ಅಂದರೆ ಎಲ್ಲರಿಗೂ ಪ್ರಿಯನಾದಂಥ – **ಶ್ರೀ ಹರಿಯು**

**೬೪೫. ಕೃಪಾಳುವರೇಣ್ಯ –**

ನಾಮ (i) ಕರುಣ (ii) ಕರುಣ ಸಾಗರ ನೋಡಿರಿ.

ಕೃಪೆ ಮಾಡುವವರಲ್ಲಿ ಶ್ರೇಷ್ಠನಾದಂಥ – **ಶ್ರೀ ಹರಿಯು**

**೬೪೬. ಜೀವತೃಪ್ತಿಕರ**

**೬೪೭. ಜೀಳೂಕ–ತೃಪ್ತಿಕರ –**

ಜೀಳೂಕ – (ಯೂಲೂಕು) ಮೊದಲಾದ ಜೀವವರ್ಗಕ್ಕೂ ತೃಪ್ತಿಯನ್ನುಂಟು ಮಾಡುವಂಥ – **ಶ್ರೀಹರಿಯು**

**೬೪೮. ಸ್ಥಳಕಳೇವರ ಭರಿತ –**

ಸ್ಥಳ = ಸ್ಥಾನ, ಕಳೇವರ = ಶರೀರ

ಸರ್ವ ಶರೀರ ಹಾಗೂ ಸರ್ವ ಸ್ಥಳಗಳಲ್ಲಿ ವ್ಯಾಪ್ತನಾದಂಥ – **ಶ್ರೀ ಹರಿಯು**

**೬೪೯. ಬ್ರಹ್ಮ**

ಓಂ॥ ಓಂ ಅಥಾತೋಬ್ರಹ್ಮ ಜಿಜ್ಞಾಸಾಓಂ ॥೧॥ – ಬ್ರಹ್ಮಸೂತ್ರ – ಜಿಜ್ಞಾಸಾಧಿಕರಣ

ಈ ಸೂತ್ರದ ಪ್ರಕಾರ ಬ್ರಹ್ಮನೆಂದರೆ ವಿಷ್ಣುವೇ ಅಂತಾಭಾಷ್ಯದಲ್ಲೇ ಶ್ರೀ ಮಧ್ವಾಚಾರ್ಯರು ವಿದಿತಪಡಿಸಿದ್ದಾರೆ.

ಬ್ರಹ್ಮ ಶಬ್ದವಾದರೋ ಸರ್ವವ್ಯಾಪ್ತನಾದ ನಾರಾಯಣನಲ್ಲೇ ಸಮನ್ವಿತವಾಗುವುದು. ಏಕೆಂದರೆ, ಜ್ಞಾನಿಗಳು ಯಾವನನ್ನು ಸಮುದ್ರ ಮಧ್ಯದಲ್ಲಿ ತಿಳಿಯುತ್ತಾರೆಯೋ, ಯಾವನಾಶ ರಹಿತನಾದ ಪರಮಾತ್ಮನಲ್ಲಿ ಬ್ರಹ್ಮಾದಿ ಜೀವರಾಶಿಗಳು ಆಶ್ರಿತರಾಗಿದ್ದಾರೆಯೋ, ಯಾವನಿಂದಲೇ ಸಮಸ್ತ ಜಗತ್ತಿನ ಉತ್ಪಾದಕಳಾದ ಲಕ್ಷ್ಮೀದೇವಿಯು ಹುಟ್ಟಿದಳೋ, ನೀರೇ ಮೊದಲಾದ ಸಂಚಭೂತಗಳಿಂದ, ವಿವಿಧ ಯೋನಿ ಜೀವರಾಶಿಗಳನ್ನು ಭೂಮಿಯ ಮೇಲೆ ಸೃಷ್ಟಿ ಮಾಡಿದನೋ, ಅದೇ ಸತ್ಯ ಶಬ್ದ ವಾಚ್ಯವಾದುದು ಎಂದು ಹೇಳುತ್ತಾರೆ. ಅದೇ ಕವಿಗಳಿಗೆ (ಜ್ಞಾನಿಗಳಿಗೆ) ಶ್ರೇಷ್ಠತಮವಾದ ಬ್ರಹ್ಮ ಶಬ್ದವಾಚ್ಯವಾದುದು, ಅಂತಾ ವೇದವು ತಿಳಿಸುವದು.

ಹೀಗೆ, ಶ್ರುತಿ ಹೇಳುವುದರಿಂದ ಬ್ರಹ್ಮ ಶಬ್ದವು, ಬ್ರಹದ್ಧಾತು ಬಲದಿಂದ ಜೀವ, ಶಬ್ದರಾಶಿ, ಪದ್ಮಾಸನ ಇತ್ಯಾದಿ ಅರ್ಥಗಳನ್ನು ಹೇಳುವುದಾದರೂ ವೇದದಲ್ಲಿ ಹೇಳಿದ ಬ್ರಹ್ಮ ಶಬ್ದವು ಗುಣಪೂರ್ಣನಾದ ವಿಷ್ಣುವನ್ನೇ ಹೇಳುತ್ತದೆ. ಆದ್ದರಿಂದ ಬ್ರಹ್ಮನೆಂದರೆ – ಪರಬ್ರಹ್ಮನಾದ **– ಶ್ರೀ ಹರಿಯು** [೨೪೯]

**೬೫೦. ವಿಪುಳಕಳೈಕ್ಯ**

ತನ್ನಲ್ಲಿದ್ದ ವಿಫುಲವಾದ ಕಳೆಗಳಲ್ಲಿ ಅಭೇದವುಳ್ಳಂಥ **– ಶ್ರೀ ಹರಿಯು**

**೬೫೧. ತಳೋರ್ಧ್ವ –**

ತಳ ಅಂದರೆ ಪಾತಾಳ ಹಾಗೂ ಊರ್ಧ್ವ ಅಂದರೆ ಸತ್ಯಲೋಕ ಇವೇ ಮೊದಲಾದ ಎಲ್ಲ ಪ್ರದೇಶಗಳಲ್ಲಿಯೂ ವ್ಯಾಪ್ತವಾದಂಥ **– ಶ್ರೀ ಹರಿಯು**

**೬೫೨. ವಾದವಿಹ್ವಳ**

ಆನಂದ ಪರಿಪೂರ್ಣನಾದಂಥ **– ಶ್ರೀ ಹರಿಯು**

**೬೫೩. ಬಳೌಘ** (ಬಲ + ಓಘ)

ಬಲಪರಿಪೂರ್ಣವಾದಂಥ **– ಶ್ರೀ ಹರಿಯು**

**೬೫೪. ನಿಷ್ಕಳಂಕ –**

ನಾಮ – ದೋಷವಿಹಾರ – ನೋಡಿರಿ.

**೬೫೫. ಕಳಾಪ್ರಪೂರ್ಣ –**

ಸಕಲಕಳೆಗಳಿಂದಲೂ ಪರಿಪೂರ್ಣನಾದಂಥ **– ಶ್ರೀಹರಿಯು**

ಕ್ಷತವಿದೂರ ಕ್ಷೌರುಂಬುಬಂದಿತ ।
ಕ್ಷಿತಿ ಭರಹರ ಕ್ಷೀರನಿಧಿ ಗೃಹ ।
ಅತುಳ ಕ್ಷುದ್ರಾರೆ ಕ್ಷೂರಾಯುದನೆ ಕ್ಷೇಮೈಶ್ವರ್ಯ – ॥
ಗತಿಗತೆ ಕ್ಷೌ ದೀಪೈಕ್ಯ ಕ್ಷೋಣಿ – ।
ಪತಿಪತೆ ಕ್ಷೌಮರಥಕ್ಷಾಂತಿಭ – ।
ರಿತನೃಗೋದ್ಧರ ಕ್ಷತ್ತಾವಲ್ಲಭಕ್ಷತ್ರಿಯವೇಶ ನಮೋ ॥ ೪೬ ॥
(ಈ ನುಡಿಯಲ್ಲಿ – ಕ್ಷೈ, ಕ್ಷಂ, ಕ್ಷಃ – ಅಕ್ಷರಮಾಲೆಗಳು ಉಳಿದಿವೆ)

**೬೫೬. ಕ್ಷತವಿದೂರ – ಕ್ಷತ – ಗಾಯ**

ಯಾವುದೇ ಆಯುಧದಿಂದ ಗಾಯ ಹೊಂದಲಾರದಂಥ **– ಶ್ರೀ ಹರಿಯು**

**೬೫೭ ಕ್ಷಾರಾಂಬು ಬಂಧಿತ –**

(ಕ್ಷಾರ = ಉಪ್ಪು, ಕ್ಷಾರಾಂಬು = ಸಮುದ್ರ)

ನಾಮ – ವನಧಿ ಬಂಧ ವಿಹಾರ – ನೋಡಿರಿ.

---

೨೪೯. ಬ್ರಹ್ಮಸೂತ್ರ – ಜಿಜ್ಞಾಸಾಧಿಕರಣ – ಭಾಷ್ಯ



**೬೫೮. ಕ್ಷಿತಿಭರಹರ –**

"ಕ್ಷಿತಿಭರಹರಣಂಕುಲಚಕ್ರಾಯುಧಸ್ಯ" ಎಂಬ ಭಾಗವತೊಕ್ತಿಯಂತೆ, ಭೂಮಿಗೆ ಭಾರಭೂತರಾದ ದೈತ್ಯರನ್ನು ನಾಶಮಾಡಿದಂಥ **– ಶ್ರೀ ಹರಿಯು**

**೬೫೯. ಕ್ಷೀರನಿಧಿಗೃಹ –**

ಕ್ಷೀರಸಾಗರವನ್ನೇ ತನ್ನ ಮನೆಯಾಗಿಸಿಕೊಂಡಂಥ **– ಶ್ರೀ ಹರಿಯು**

**೬೬೦. ಅತುಳ –**

ಅತುಳ ಅಂದರೆ ಅಸಮನಾದಂಥ **– ಶ್ರೀಹರಿಯು**

**೬೬೧. ಕ್ಷುದ್ರಾರೆ – (ಕ್ಷುದ್ರ – ದುಷ್ಟ)**

ದುಷ್ಟರಕ್ಕಸರವೈರಿಯಾದಂಥ **– ಶ್ರೀಹರಿಯು**

**೬೬೨. ಕ್ಷೂರಾಯುಧನೆ – (ಕ್ಷೂರ = ಚಕ್ರ)**

ಚಕ್ರಾಯುಧನಾದಂಥ **– ಶ್ರೀಹರಿಯು**

**೬೬೩. ಕ್ಷೇಮೇಶ್ವರ್ಯಗತಿಹತೆ**

(ಕ್ಷೇಮ + ಐಶ್ವರ್ಯ + ಗತಿ + ಗತೆ)

ಕ್ಷೇಮ, ಐಶ್ವರ್ಯ, ಗತಿ ಇವುಗಳಿಗೆ ಕಾರಣನಾದಂಥ **– ಶ್ರೀ ಹರಿಯು**

**೬೬೪. ದೀಪೈಕ್ಯ –**

ಪ್ರಕಾಶಮಾನವಾದ ಎಲ್ಲ ವಸ್ತುಗಳಲ್ಲಿ ವ್ಯಾಪ್ತವಾದ ರೂಪಗಳಲ್ಲಿ ಭೇದವಿಲ್ಲದಂಥ – **ಶ್ರೀಹರಿಯು**

**೬೬೫. ಕ್ಷೋಣಿಪತಿಪತೆ –**

ಕ್ಷೋಣಿ = ಭೂಮಿ, ಕ್ಷೋಣಿಪತಿ = ಅರಸರು

ಅರಸರ ಅರಸ ಅಂದರೆ ಚಕ್ರವರ್ತಿಯಾದ ಶ್ರೀರಾಮಾವತಾರ **– ಶ್ರೀ ಹರಿಯು**

**೬೬೬. ಕ್ಷೌಮರಥ – ಕ್ಷೌಮ = ರೇಶಿಮೆ –**

ರೇಶಿಮೆ ಬಟ್ಟೆಯಿಂದಲೂ ಆಚ್ಛಾದಿತವಾದ ದಿವ್ಯ ರಥವುಳ್ಳಂಥ – ಶ್ರೀ ಹರಿಯು

**೬೬೭. ಕ್ಷಾಂತಿ ಭರಿತ –**

**ತತ್‌ಕ್ಷಮ್ಯತಾಂ ಸಭಗವಾನ್ ಪುರುಷಃ ಪುರಾಣೋ –**

**ನಾರಾಯಣಃ ಸ್ವಪುರುಷ್ತ್ರೇರ್ಯದ ಸತ್ಕ್ರಿತಂ ನಃ ।**

**ಸ್ವಾನುಮಹೋ ನವಿದುಷಾಂರಚಿತಾಮ ಜಲೀನಾಂ**

**ಕ್ಷಾಂತಿರ್ವರೀಮಸಿನಮಃ ಪುರುಷಾಯ ಭೂಮ್ನೇ** ॥ – ಭಾಗವತ – ೬–೩–೩೦

ಶ್ರೀ ಮದ್ಭಾಗವತಸಾರೋದ್ಧಾರದ – ನಾಮಪ್ರಶಂಸಾಪ್ರಕರಣ – ಶ್ಲೋಕ ೩೫೯.

ನನ್ನ ದೂತನಿಂದ ಅರ್ಥಾತ್ ನನ್ನಿಂದ ಉಂಟಾದ ಅಯೋಗ್ಯ ಕಾರ್ಯವನ್ನು ಕ್ಷಮಿಸು. ಅಜ್ಞಾನದಿಂದ ಮಾಡಿದ ಕಾರ್ಯಗಳನ್ನು (ತಪ್ಪುಗಳನ್ನು) ಕ್ಷಮಿಸೆಂದು ಭಕ್ತರು ಕೇಳಿದಾಗ ಕ್ಷಮಿಸುವುದರಲ್ಲಿ ನಿನ್ನ ಸಮಾನರು ಮತ್ತೊಬ್ಬರಿಲ್ಲ. ನೀನು ಗುಣ ಪೂರ್ಣನು. ಅಂಥ ನಿನಗೆ ನಮಸ್ಕರಿಸುತ್ತೇನೆ" ಎಂದು ಅಜಾಮಿಳನನ್ನು ಎಳೆದು ತರಲು ಹೋದ ತನ್ನ ದೂತರಪರವಾಗಿ ಯಮನು ಶ್ರೀ ಹರಿಯನ್ನು ಕುರಿತು ಪ್ರಾರ್ಥಿಸುತ್ತಾನೆ. ಇಂಥ – ಕ್ಷಾಂತಿ ಬರಿತನಾದಂಥ – **ಶ್ರೀಹರಿಯು**

ತಾಳ್ಮೆ ಹಾಗೂ ಕ್ಷಮಾ ಗುಣವುಳ್ಳಂಥ – **ಶ್ರೀಹರಿಯು**

**೬೬೮. ನೃಗೋದ್ಧರ –** ಒಮ್ಮೆ ಸಾಂಬ, ಪ್ರದ್ಯುಮ್ನಾದಿಗಳು ಬಾವಿಯಲ್ಲಿ ಬಿದ್ದಿದ್ದು ಬೃಹದಾಕಾರದ ಕೃಕಲಾಸದ ವಿಷಯವನ್ನು ಕೃಷ್ಣನಿಗೆ ಹೇಳಿದರು.

ನೃಗರಾಜನೆಂಬವನಿಗೆ ಶಾಪದಿಂದ ಕೃಕಲಾಸದೇಹವು ಬಂದಿತ್ತು. ಅದು ವಿಮೋಚನೆಯಾಗುವ ಕಾಲ ಬಂತಾದುದರಿಂದ ಶ್ರೀ ಕೃಷ್ಣನು ಹಾಳು ಬಾವಿಯಿಂದ ಆ ಪ್ರಾಣಿಯನ್ನು ಮೇಲಕ್ಕೆ ತಂದು ದಡ ಮೇಲಿಟ್ಟ ಕೂಡಲೆ ನೃಗರಾಜನಾಗಿ ನಿಂತನು. ಅವನು ಹಿಂದೆ ಒಬ್ಬನಿಗೆ ದಾನ ಮಾಡಿದ ಗೋವು ತಪ್ಪಿಸಿಕೊಂಡು ಬಂದು ಹೊಸ ಗೋವುಗಳ ಗುಂಪಿಗೆ ಸೇರಿತು. ರಾಜನು ಕಾಣದೆ ಆಗೋವನ್ನು ತಿರುಗಿ ದಾನ ಮಾಡಿ ದನು. ದಾನ ತೆಗೆದುಕೊಂಡಿದ್ದ ಇಬ್ಬರೂ ಬ್ರಾಹ್ಮಣರು ಬಂದು ವ್ಯಾಜ್ಯ ಮಾಡಿದಾನ ಕೊಟ್ಟ ರಾಜನಿಗೆ ಕ್ರಕಲಾಪ ಆಗೆಂದು ಶಾಪಕೊಟ್ಟಿದರು. ಶಾಪನಿವೃತ್ತಿ ಹೊಂದಿದ ಮೃಗರಾಜನು ಶ್ರೀ ಕೃಷ್ಣನನ್ನು ತುತಿಸಿ ಸ್ವರ್ಗಕ್ಕೆ ಹೋದನು. ಶ್ರೀ ಕೃಷ್ಣನು ಊರಿಗೆ ಬಂದು ಸಭೆಯಲ್ಲಿ" ವಿಷವು ಅದನ್ನು ಕುಡಿದವನೊಬ್ಬನನ್ನೂ ಮಾತ್ರ ಕೊಲ್ಲುವದು. ಬ್ರಹ್ಮಸ್ವವು ಕುಲವನ್ನೇ ನಾಶಮಾಡುವುದರಿಂದ ಅದು ಮಹಾಘೋರ ವಿಷವು." ಎಂದು ಹೇಳಿ, ಎಂದೆಂದೂ ಬ್ರಾಹ್ಮಣ ದ್ರೋಹವನ್ನು ಮಾಡಬಾರದೆಂದು ತನ್ನವರನ್ನು ಎಚ್ಚರಿಸಿದನು. ಹೀಗೆ ನೃಗೋದ್ಧಾರನಾದ ಕೃಷ್ಣಾವತಾರದ – **ಶ್ರೀ ಹರಿಯು.**

ನಾಮ – ೪೪೮ ನ್ರಗವಿಧ್ರುತಕರ – ನೋಡಿರಿ.

**೬೬೯. ಕ್ಷತ್ತವಲ್ಲಭ –**

ಕೃಷ್ಣಾವತಾರದಲ್ಲಿ, ದುರ್ಯೋಧನನ ರಾಜದೌತಣವನ್ನು ತ್ಯಜಿಸಿ, ದಾಸೀ ಪುತ್ರನಾದ ವಿದುರನ ಆತಿಥ್ಯವನ್ನು ಸ್ವೀಕರಿಸಿದಂಥ ವಿದುರಪ್ರಿಯನಾದ – ಶ್ರೀ ಹರಿಯು

**೬೭೦. ಕ್ಷತ್ರಿಯವೇಶ –**

ಶಿಕ್ಷರಕ್ಷಣೆ; ದುಷ್ಟ ಶಿಕ್ಷೆಗಾಗಿ, ಕ್ಷತ್ರಿಯವೇಶದಿಂದ ಅವತರಿಸಿದ ಶ್ರೀರಾಮಾವತಾರದ – **ಶ್ರೀ ಹರಿಯು**

**ಏಕರಾದ್ ವಿಶ್ವೇಕ–ಕಾರಕ ।**
**ಏಕವ್ಯಾಪಕ ಏಕಸ್ಥಾಪಕ ।**
**ಏಕಭೋಜಕ ಏಕಯೋಜಕ ಏಕಲೋಕಾತ್ಮ ॥**
**ಏಕಸೃಜ್‌ಭುವನೈಕವರ್ಧಕ ।**



**ಏಕಮಾರಕ –ಏಕ– ತಾರಕ ।**
**ಏಕಯಾಚಕ ಏಕಸೂಚಕ, ಏಕಪತ್ರ, ನಮೋ** ॥ ೪೭ ॥

**೬೭೧. ಏಕರಾಡ್ – ಏಕರಾಟ್**

**"ಏಕಸ್ಯಾಸೇ ರಾಟಚ" ಏಕರಾಟ್ = ಏಕರಾಡ್**

**ಏಕಸ್ವಾಮ್ಯವುಳ್ಳಂಥ ಶ್ರೀ ಹರಿಯು**

**ಉತ್ಪತ್ತಿ ಸ್ಥಿತಿ ಸಂಹಾರ ನಿಯತಿಜ್ಞಾನಮಾವೃತಿಃ।**
**ಬಂಧಮೋಕ್ಷಂಚ. ಪುರುಷಾದ್ಯಸ್ಮಾತ್ಸ ಹರೇಕರಾಡಿ"ತಿ ॥**

**– ಸ್ಕಂದ ಪುರಾಣ**

॥ ಓಂ॥ ಓಂ ಜನ್ಮಾದ್ಯಸ್ಯಯತಃ ಓಂ ॥

ಬ್ರಹ್ಮಸೂತ್ರ – ಮೊದಲನೆಯ ಅಧ್ಯಾಯ, ಮೊದಲನೇಯ ಪಾದ ಎರಡನೇ ಸೂತ್ರ – ಇದಕ್ಕೆ ಆನಂದತೀರ್ಥರ ಭಾಷ್ಯ –

**ಉತ್ಪತ್ತಿ :** – ಚತುರ್ವಿಧ ಜಗದುತ್ಪತ್ತಿಯು ಸ್ಥಿತಿ – ಸಂರಕ್ಷಣೆ ಸಂಹಾರ – ಚತುರ್ವಿಧ ಪ್ರಳಯವು ನಿಯತಿ – ಪ್ರೇರಣೆಯ ಜ್ಞಾನಂ ಜ್ಞಾನವು ಆವೃತ್ತಿ : – ಅಜ್ಞಾನವು ಬಂಧ ಸಂಸಾರ ರೂಪಬಂಧನವು ಮೋಕ್ಷಾಂಚ – ಮೋಕ್ಷ ಇವುಗಳು ಯಸ್ಮಾತ್ – ಯಾವ ಸಮಥನಾದ ಪುರುಷಾತ್ – ಪುರುಷ ಶಬ್ದವಾಚ್ಯನಾದದಿಂದಲೇ ಭವತಿ – ಆಗುವದೋ ಸಃ– ಅವನೇ ಹರಿಃ – ಸರ್ವತ್ರಪ್ರಕಾಶ ಮಾನನಾದ ಸ್ವತಂತ್ರನು ಇತಿ – ಹೀಗೆ ಸ್ಕಾಂದೇ – ಸ್ಕಾಂದಪುರಣದಲ್ಲಿ ಹೇಳಿರುತ್ತದೆ.

**೬೭೨. ವಿಶ್ವೇಕಾರಕ –**

ಜಗತ್ತಿನ ಚಾಲನೆಗೆ ಮುಖ್ಯಕಾರಣನಾದಂಥ – **ಶ್ರೀ ಹರಿಯು**

**೬೭೩. ಏಕವ್ಯಾಪಕ –**

ಜಗತ್ತಿನೆಲ್ಲೆಡೆಯಲ್ಲಿಯೂ ವ್ಯಾಪಿಸಿರುವಂಥ – **ಶ್ರೀ ಹರಿಯು**

**೬೭೪. ಏಕಸ್ಥಾಪಕ –** ಜಗತ್ತಿನ ಮುಖ್ಯ ಸ್ಥಾಪಕನಾದಂಥ – **ಶ್ರೀ ಹರಿಯು**

**೬೭೫. ಏಕಭೋಜಕ –** ಮುಖ್ಯಭೋಜಕನಾದಂಥ – **ಶ್ರೀ ಹರಿಯು**

**೬೭೬. ಏಕ ಯೋಜಕ –** ಮುಖ್ಯನಿಯಾಮಕನಾದಂಥ – **ಶ್ರೀ ಹರಿಯು**

**೬೭೭. ಏಕತೋಕಾತ್ಮ –** ತೋಕ – ಬಾಲಕ

ಬಾಲರೂಪಿಯಾದರೂ ಕೂಡಾ ಸರ್ವನಿಯಾಮಕನಾದ ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು.**

**೬೭೮. ಏಕಸೃಜಭುವನ –**

ಯುಗಯುಗಗಳಲ್ಲಿಯೂ ಏಕ ಪ್ರಕಾರವಾದ ಜಗತ್ತನ್ನು ನಿರ್ಮಿಸುವಂಥ – **ಶ್ರೀ ಹರಿಯು**

**೬೭೯. ಏಕ ವರ್ಧಕ –**

ಯುಗಯುಗಗಳಲ್ಲಿಯೂ ಏಕಪ್ರಕಾರವಾಗಿ ಜಗತ್ತನ್ನು ಬೆಳೆಸುವಂಥ – **ಶ್ರೀ ಹರಿಯು**

**೬೮೦. ಏಕಮಾರಕ –**

ಜಗತ್ತನ್ನು ಪ್ರಳಯಗೊಳಿಸಿದಂಥ ಮುಖ್ಯ ಪ್ರಳಯಕರ್ತನಾದ – **ಶ್ರೀ ಹರಿಯು.**

**೬೮೧. ಏಕತಾರಕ –**

ಸಂಕಟಗಳನ್ನು ಮುಖ್ಯವಾಗಿ ನಿವಾರಿಸುವಂಥ – **ಶ್ರೀಹರಿಯು**

**೬೮೨. ಏಕಯಾಚ –**

ಬಲಿಯು ಯಜ್ಞದಲ್ಲಿ ದಾನ ಬೇಡಿ ಭೂವ್ಯಾಕಾಶಗಳನ್ನು ಯಾಚಿಸಿದ – **ಶ್ರೀ ಹರಿಯು**

**೬೮೩. ಏಕಸೂಚಕ –**

ಜಗತ್ತಿನ ಮುಖ್ಯ ಸೂಚಕನಾದ – **ಶ್ರೀಹರಿಯು**

**೬೮೪. ಏಕಪತ್ರ –**

ಪ್ರಳಯಕಾಲದ ಪ್ರಳಯ ಜಲದಲ್ಲಿ ಆಲದೆಲೆಯ ಮೇಲೆ ಮಲಗಿದ ಬಾಲರೂಪೀ – **ಶ್ರೀ ಹರಿಯು**

**೬೮೫. ದ್ವಯಕ್ರಿಯೇಶ್ವರ –**

ಶಾರೀರಿಕ ಮತ್ತು ಮಾನಸಿಕ ಇವೆರಡೂ ಕ್ರಿಯೆಗಳಿಗೆ ಒಡೆಯನಾದಂಥ ಹಾಗೂ ಕೊಡುವವನಿಗೂ ಮತ್ತು ತೆಗೆದುಕೊಳ್ಳುವವನಿಗೂ ಒಡೆಯನಾದಂಥ – **ಶ್ರೀ ಹರಿಯು**

**೬೮೬. ದ್ವಯಪಥೇಶ್ವರ**

ಪ್ರವೃತ್ತಿ ಮಾರ್ಗ ಮತ್ತು ನಿವೃತ್ತಿ ಮಾರ್ಗ ಇವೆರಡೂ ಮಾರ್ಗಾದುಮಾಯಿಗಳಿಗೆ ಒಡೆಯನಾದಂಥ – **ಶ್ರೀಹರಿಯು**

**ದ್ವಯಕ್ರಿಯೇಶ್ವರ ದ್ವಯಪಥೇಶ್ವರ ।**
**ದ್ವಯಸುವಿಸ್ತಾರ ದ್ವಯವಿಗೋಚರ ।**
**ದ್ವಯನಿವಾರಕ ದ್ವಯಪ್ರದಾರಕ–ದ್ವಯಸಮಯಪೂರ್ಣ ॥**
**ದ್ವಯಪ್ರವಾಹಕ ದ್ವಯನಿಯಾಮಕ ।**
**ದ್ವಯನಿರಂತರ ದ್ವಯದ್ವಯೇತರ ।**
**ದ್ವಯಸುಬೋಧಕ ದ್ವಯಪ್ರಸಾದಕ ದ್ವಯಭಯಘ್ನನಮೋ** ॥ ೪೮ ॥

**೬೮೭. ದ್ವಯಸುವಿಸ್ತಾರ**

ಜೀವಿಗಳನ್ನು ಮತ್ತು ಜಡವಸ್ತುಗಳನ್ನು ವಿಸ್ತರಿಸುವಂಥ – **ಶ್ರೀ ಹರಿಯು.**

**೬೮೮. ದ್ವಯ ವಿಗೋಚರ**

ಶ್ರುತಿ ಮತ್ತು ಸ್ಮೃತಿಗಳೆರಡರಿಂದಲೇ ತಿಳಿಯಲ್ಪಡುವಂಥ – **ಶ್ರೀ ಹರಿಯು**



**೬೮೯. ದ್ವಯನಿವಾರಕ** – ಸಿದ್ಧಿ – ಬುದ್ಧಿಗಳೆರಡನ್ನು ನೀಡುವ – **ಶ್ರೀಹರಿಯು.**

**೬೯೦. ದ್ವಯಪ್ರದಾಕಯ;** **೬೯೧. ದ್ವಯಸಮಯಪೂರ್ಣ;**

**೬೯೨. ದ್ವಯ ಪ್ರವಾಹಕ;** **೬೯೩. ದ್ವಯ ನಿಯಾಮಕ;**

**೬೯೪. ದ್ವಯನಿರಂತರ;** **೬೯೫. ದ್ವಯದ್ವಯೇತರ;**

**೬೯೬. ದ್ವಯಸುಬೋಧಕ;** **೬೯೭. ದ್ವಯಪ್ರದಾಯಕ;**

**೬೯೮. ದ್ವಯ ಭಯಘ್ನ**

**ತ್ರಿಯುಗ ತ್ರಿವಿಗ್ರಹ ತ್ರಿಪದ ಕಾ – ಲ – ।**
**ತ್ರಯಗ ತ್ರಿದಿವಪ ತ್ರಿಪಥಗಾಪಿ – ತ್ರಿ – ।**
**ನಯನಾರಿಹನ್ ತ್ರಿಪುರಮೋಹಕ ತ್ರಯತ್ರಿಂಶತ್ ಸುರಪ ॥**
**ತ್ರಿಯುಗುದಿತ ತ್ರಿಗುಣೇಶ ಸಾಗರ ।**
**ತ್ರಿಯಪಪಂಚಕ ತ್ರಿವಿಧಭಾಷ್ಯನಿ_।**
**ಚಯರ ಚಕ ತ್ರಿದಶಾರ್ಚತ್ರಿಜಗದುದ್ಧರಣ ಮಾರ್ಗನಮೋ** ॥ ೪೯ ॥

**೬೯೯. ತ್ರಿಯುಗ**

ಕೃತಯುಗ, ತ್ರೇತಾಯುಗ, ಹಾಗೂ ದ್ವಾಪರಯುಗ ಈ ಮೂರೇ ಯುಗಗಳಲ್ಲಿ ಮಾತ್ರ ಅವತರಿಸುವದರಿಂದ ತ್ರಿಯುಗನಾದಂಥ – **ಶ್ರೀ ಹರಿಯು**

ಹೀಗೆ ಭಕ್ತ ಪ್ರಲ್ಹಾದನು ಶ್ರೀ ನರಸಿಂಹಾವತಾರದ – ಹರಿಯನ್ನು ಪ್ರಾರ್ಥಿಸಿದ್ದಾರೆ.[೨೪೯]

**೭೦೦.ತ್ರಿವಿಗ್ರಹ** ಪರಃ ಪುರುಷ ಏಕ – ಇಹಾಸ್ಯಧತ್ತೇ ಸ್ಥಿತ್ಯಾದಯೇ ಹರಿವಿರಂಚ – ಹರೇತಿ ಸಂಜ್ಞಾಃ । ಭಾಗವತ ೧–೨–೨೪

ಭಗವಂತನು ಜಗತ್ತಿನ ಸ್ಥಿತಿಯ ನಿರ್ವಹಣೆಗಾಗಿ ವಿಷ್ಣು – ನಾಮಕರೂಪವನ್ನೂ, ಸೃಷ್ಟಿಯ ನಿರ್ವಹಣೆಗಾಗಿ ಚತುರ್ಮುಖನಲ್ಲಿ ಬ್ರಹ್ಮನಾಮಕ ರೂಪವನ್ನೂ, ಸಂಹಾರದ ನಿರ್ವಹಣೆಗಾಗಿ ರುದ್ರನಲ್ಲಿ ಶಿವರೂಪವನ್ನೂ ಧರಿಸಿರುವನು. ಹೀಗೆ ವಿಷ್ಣು, ಬ್ರಹ್ಮ ಹಾಗೂ ಈಶ ಈ ಮೂರು ರೂಪಗಳನ್ನು ಧರಿಸುತ್ತ ವಿಗ್ರಹನಾದಂಥ,[೨೫೦] – **ಶ್ರೀ ಹರಿಯು**

**೭೦೧. ತ್ರಿಪದ –**

೧. ಭಗವಂತನ – ಅನಂತಾಸನ ವೈಕುಂಠ ಹಾಗೂ ಪದ್ಮನಾಭ ಎಂಬ ಹೆಸರಿನ ರೂಪಗಳು, ಅನಂತಾಸನ, ವೈಕುಂಠ ಹಾಗೂ ನಾರಾಯಣ ಪುರಗಳಲ್ಲಿ ಇವೆ. ಅಮೃತ, ಕ್ಷೇಮ ಹಾಗೂ ಅಭಯ ಎಂಬುದಾಗಿಯೂ; ನಾರಾಯಣ, ವಾಸುದೇವ ಹಾಗೂ ವೈಕುಂಠ ಎಂಬುದಾಗಿಯೂ ಭಗವಂತನ ಆರೂಪತ್ರಯಗಳು ಕರೆಯಿಸಿಕೊಳ್ಳಲ್ಪಡುವವು.[೨೫೧]

---

೨೫೦. ವಿಷ್ಣುಸಹಸ್ರನಾಮಸ್ತೋತ್ರದ ನಾಮ ೫೩೪ ತ್ರಿಪದ"ಕ್ಕೆ ಉಡುಪಿ ಫಲಿಮಾರು ಮಠದ ಟೀಕೆ ೩ನೇ ಭಾಗ ೪೬೩.

೨೫೧. ಭಾಗವತ ೨–೬–೧೮; ಸತ್ತ್ವೇ (ಭಾ.ಉ.ಭಾ. ೩–೭–೭)

೨. ಜಾಗ್ರದವಸ್ಥಾ ಪ್ರೇರಕನಾದ ಭಗವಂತನು ಬಲಗಣ್ಣಿನ ತುದಿಯಲ್ಲಿ, ಸ್ವಪ್ನ ಪ್ರೇರಕನಾದ ತೈಜಸನು ಮನಸ್ಸಿನಲ್ಲಿ ಅಂದರೆ ಕಂಠದಲ್ಲಿ ಸುಷುಪ್ತಿ ಪ್ರೇರಕನಾದ ಪ್ರಾಜ್ಞನು ಹೃದಯಾಕಾಶ ದಲ್ಲಿಯೂ – ಹೀಗೆ ಪ್ರತಿಯೊಬ್ಬರ ಶರೀರದಲ್ಲೂ ಮೂರು ರೂಪಗಳಿಂದ ಭಗವಂತನು ಇರುವನು; ಎಂದು ಮಾಂಡೂಕ ಉಪನಿಷತ್ತು ಸಂದೇಶಿದೆ.[೨೫೨]

೩. ಗಾಯತ್ರಿಯ ಮೂರು ಪಾದಗಳಿಂದ ಪ್ರತಿ ಪಾದ್ಯಾನಾದುವಂಥವನು ಹೀಗೆ ತ್ರಿಪದನೆನಿಸಿಕೊಳ್ಳುವಂಥ **– ಶ್ರೀ ಹರಿಯು**

**೨೦೨. ಕಾಲತ್ರಯಗ –**

ಭೂತ, ವರ್ತಮಾನ ಹಾಗೂ ಭವಿಷ್ಯ ಈ ಮೂರು ಕಾಲಗಳಲ್ಲಿ ಇರುವಂಥ **– ಶ್ರೀ ಹರಿಯು**

**೨೦೩. ತ್ರಿದಿವಪ –**

ತ್ರಿದಿವ + ಸ್ವರ್ಗ, ಅದನ್ನು ಇಂದ್ರಾಂತರ್ಗತನಾಗಿ ಪಾಲಿಸುವಂಥ **– ಶ್ರೀ ಹರಿಯು**

**೨೦೪. ತ್ರಿಪಥಗಾಪಿತ –**

ಭಾಗೀರಥೀ ತ್ರಿಪಥಗಾ – ಅಮರಕೋಶ.

(i) ತ್ರಿ – ಅಂದರೆಮೂರು – ಸ್ವರ್ಗ ಲೋಕ – ಭೂಲೋಕ – ಮತ್ತು ಪಾತಾಳ ಈ ಮೂರು ಲೋಕಗಳಲ್ಲಿ ಸಂಚರಿಸುವ (ಅಂದರೆ ಪ್ರವಹಿಸುವ) ಭಾಗೀರಥಿಯ ಜನಕನಾದಂಥ ತ್ರಿವಿಕ್ರಮ ರೂಪೀ **– ಶ್ರೀಹರಿಯು.**

(ii) ತ್ರಿ – ಎಂದರೆ ಮೂರಾದಂಥ, ಪಥ – ಜ್ಞಾನಮಾರ್ಗದಿಂದ – ಗಾ– ಎಂದರೆ ನಡೆಯತಕ್ಕವರ, ತ್ರಿವಿಧ ಜ್ಞಾನದಾನದೆಂದರೆ – (i) ಮುಕ್ತಿಯೋಗ್ಯರಂದು – ಹರಿಸರ್ವೋತ್ತಮ; ವಾಯು ಜೀವೋತ್ತಾಮ; ತಾರತಮ್ಯ – ಪಂಚಭೇದ ಸತ್ಯವೆಂಬ ಬೇಧ ಮಾರ್ಗ (ii) ನಿತ್ಯ ಸಂಸಾರಿಗಳದ್ದು – ಪಂಚಭೇದ ಅಂಗೀಕರಿಸಿ ತಾರತಮ್ಯ ಅಂಗೀಕರಿಸಿದ ಮಿಶ್ರಜ್ಞಾನ (iii) ತಮೋಯೋಗ್ಯರದ್ದು – ಮಿಥ್ಯಾಮಾರ್ಗ

ಈ ಮೂರು ಮಾರ್ಗದಿಂದ ನಡೆಯತಕ್ಕವರಿಗೆ – ಪಿತ – ಅಂದರೆ ತಂದೆಯಾದವ ಪರಮಾತ್ಮನಾದ[೨೫೩] **– ಶ್ರೀ ಹರಿಯು**

**೨೦೫. ತ್ರಿನಯನಾರಿಹನ್ –**

ತ್ರಿ + ನಯನ + ಅರಿ + ಹನ್ –

ಮುಕ್ಕಣ್ಣನ ವೈರಿಯಾದ ಭಸ್ಮಾಸುರನನ್ನೂ ಮೋಹಿನೀರೂಪ – ತಾಳಿ ನಾಶಪಡಿಸಿದಂಥ **– ಶ್ರೀ ಹರಿಯು**

**೨೦೬. ತ್ರಿಪುರ ಮೋಹಕ –**

ಅನಂತಾಸನ, ವೈಕುಂಠ ಹಾಗೂ ನಾರಾಯಣ ಪುರಗಳಲ್ಲಿದ್ದು ಆ ಪುರಗಳಿಗೆ ಮೋಹಕನಾದಂಥ **– ಶ್ರೀ ಹರಿಯು.**

೨೫೨. ಮಾ. ಉ. ೧–೧–೭

೨೫೩. ಶ್ರೀ ಜಗನ್ನಾಥ ದಾಸಾರ್ಯವಿರಚಿತ – ಹರಿಕಥಾಮೃತ ಸಾರಕ್ಕೆ – ಶ್ರೀ ಸಂಕರ್ಷಣ ಒಡೆಯರ ಟೀಕೆ – ೧೨ನೇ ನಾಡಿ ಪ್ರಕರಣ ಸಂಧಿಯ ೨೫ನೆಯ ನುಡಿ ಪುಟ ೫೨೪.



**೨೦೭. ತ್ರಯತ್ರಿಂಶತಸುರಪ;** **೨೦೮. ತ್ರಿಯುಗುದಿತ**

ನಾಮ ೬೯೯ – ತ್ರಿಯುಗ ನೋಡಿರಿ

**೨೦೯. ತ್ರಿಗುಣೇಶ ಸಾಗರ ;** **೨೧೦. ತ್ರಿಯಪಪಂಚಕ**

**೨೧೧. ತ್ರಿವಿಧ ಭಾಷ್ಯ ನಿಚಯ ಕಚಕ –**

ದರ್ಶನ, ಗುಹ್ಯಾ ಹಾಗೂ ಅರ್ಥವುಳ್ಳಂಥ ಭಾಷ್ಯ ರಚಿಸಿದ – ಶ್ರೀ ಮಧ್ವಾಂತರ್ಗತ ನಾದ **– ಶ್ರೀ ಹರಿಯು**

**೨೧೨. ತ್ರಿದಶಾರ್ಚ –**

ಮುಕ್ತ ಪಡೆಯುವವರು, ನಿತ್ಯಸಂಸಾರಿಗಳು ಹಾಗೂ ನರರ ಈ ಮೂರು ದಶಾ ಹೊಂದತಕ್ಕವರಿಂದ ಪೂಜಿಸಿಕೊಳ್ಳದಂಥಾ **– ಶ್ರೀಹರಿಯು.**

**೨೧೩. ಜಗದ್ದುದ್ಧರಣ ಮಾರ್ಗ –**

ಜಗತ್ತನ್ನು ಉದ್ಧರಿಸುವ ಕ್ರಿಯಾಸಕ್ತನಾದಂಥ **– ಶ್ರೀ ಹರಿಯು**

**ಚತುರ್ವಿಧಾತ್ಮಾ ಚತುರ್ಭಜಾಂಕಿತ ।**
**ಚತುರ್ಮುಬಾದಿಪ ಚತುರ್ವಿಧಾರ್ಥದ ।**
**ಚತುರ್ವರ್ಣಾಶ್ರಮ ಚತುರ್ಮುಕ್ತಿ ಚತುಷ್ಟಯೇಶ್ವರತಾ॥**
**ಚತುಸ್ಸಮುದ್ರಗ ಚತುರತರಮತಿ ।**
**ಚತುರ್ವಿಧಾಯತ ಚತುರ್ಬಲಾಂಭುದಿ ।**
**ಚತುರ್ವೇದಾರ್ಥಿತಚರಣ ಚತುಶ್ಶಾಸ್ತ್ರಪೂಜ್ಯ ನಮೋ** ॥ ೫೦ ॥

**೨೧೪. ಚತುರ್ವಿಧಾತ್ಮಾ –**

(೧) ಆತ್ಮ (೨) ಅಂತರಾತ್ಮ (೩) ಪರಮಾತ್ಮ (೪) ಜ್ಞಾನಾತ್ಮಗಳೆಂಬ ಶ್ರೀ ಹರಿಯರೂಪಗಳು ಕ್ರಮವಾಗಿ (೧) ಮನಸ್ಸು (೨) ಅಹಂಕಾರ (೩) ಮಹತ್ (೪) ಅವ್ಯಕ್ತಗಳೆಂಬ ತತ್ವಗಳಲ್ಲಿದ್ದು, ಆ ತತ್ವಗಳ ಅಭಿಮಾನೀ ದೇವತೆಗಳ ದ್ವಾರಾ ಸಕಲ ವ್ಯಾಪಾಕಗಳನ್ನು ನಿರ್ವಹಿಸುತ್ತಾನೆ ಇಂಥ ಚತುರ್ವಿಧಾತ್ಮಾನಾದ **– ಶ್ರೀ ಹರಿಯು**

ಚತುರವಿಧ ಪುರುಷಾರ್ಥ ಚತುರಾತ್ಮನೀನಿರಲು
ಇತರ ಪುರುಷಾರ್ಥನಾನೊಲ್ಲೆ । ನಾನೊಲ್ಲೆತ್ವಲ್ಲಾದ
ರತಿ ಭಾಗ್ಯ ನೀನೆ ಕರುಣಿಸೋ – ೨೨– (೨೧೧)

– ಶ್ರೀ ಜಗನ್ನಾಥ ದಾಸಾರ್ಯವಿರಚಿತ – ತತ್ವಸುವ್ವಾಲಿ.

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರಾಷಾರ್ಥ ಸ್ವರೂಪದ ಚತುರಾತ್ಮ – ಅನಿರುದ್ಧ – ಪ್ರದ್ಯುಮ್ನ – ಸಂಕರ್ಷಣ ಹಾಗೂ ವಾಸುದೇವ ರೂಪಗಳೆಂಬ ನಾಲ್ಕು ರೂಪಗಳುಳ್ಳ **– ಶ್ರೀ ಹರಿಯು.**[೨೫೪]

೨೫೪. ಶ್ರೀ ಜಗನ್ನಾಥ ದಾಸಾರ್ಯವಿರಚಿತ "ತತ್ವಸುವ್ವಾಲಿಗೆ" ಟೀಕಾಗ್ರಂಥ – ಶ್ರೀ ಹರಿದಾಸ ಭಾರತಿಯ ವಿಜಯಾಂಕರತ್ನ – ೭ " ೪ ಪುಟ ೨೦೩.

ಪ್ರಳಯಕಾಲದಲ್ಲಿ ನಾರಾಯಣವೆಂಬ ಒಂದೇ ರೂಪದಿಂದ ಇದ್ದ ಭಗವಂತನು ಸೃಷ್ಟಿಗಾಗಿ ಸಂಕಲ್ಪಿಸಿ, ತನ್ನ ಭಕ್ತರಿಗೆ ಮೋಕ್ಷವನ್ನು ನೀಡುವ 'ವಾಸುದೇವ" ಎಂಬ ರೂಪವನ್ನೂ, ಸಂಹಾರಕ್ಕಾಗಿ,–"ಸಂಕರ್ಷಣ" ವೆಂಬ ರೂಪವನ್ನೂ, ಸೃಷ್ಟಿಗಾಗಿ – "ಪ್ರದ್ಯುಮ್ನ" ರೂಪವನ್ನೂ, ಪಾಲನೆಗಾಗಿ–"ಅನಿರುದ್ಧ" ರೂಪವನ್ನು ತೆಗೆದುಕೊಳ್ಳುವನು.[೨೫೫]

**೭೧೫. ಚತುರ್ಭುಜಾಂಕಿತ –**

ನಾಲ್ಕೂ ಕೈಗಳನ್ನು ಹೊಂದಿದಂಥ – **ಶ್ರೀ ಹರಿಯು**

**೭೧೬. ಚತುರ್ಮುಖಬಾದಿಪ –**

ಚತುರ್ಮುಖ + ಆದಿ + ಪ.

ಚತುರ್ಮುಖನಾದ ಬ್ರಹ್ಮನನ್ನು ಮೊದಲ್ಗೊಂಡು ಎಲ್ಲರನ್ನೂ ರಕ್ಷಿಸುವಂಥ – **ಶ್ರೀ ಹರಿಯು.**

**೭೧೭. ಚತುರ್ವಿಧಾರ್ಥದ –**

(i) ಧರ್ಮ (ii) ಅರ್ಥ (iii) ಕಾಮ ಇಚ್ಛೆ ಹಾಗೂ (iv) ಮೋಕ್ಷ ಈ ನಾಲ್ಕು ವಿಧದ ಸಂಪತ್ತನ್ನು ದಯಪಾಲಿಸುವಂಥ – **ಶ್ರೀ ಹರಿಯು**

**೭೧೮. ಚತುರ್ವರ್ಣಾಶ್ರಮ –**

(i) ಬ್ರಾಹ್ಮಣ (ii) ಕ್ಷತ್ರಿಯ (iii) ವೈಶ್ಯ ಮತ್ತು (iv) ಶೂದ್ರ ಈ ನಾಲ್ಕೂ ವರ್ಣಾಶ್ರಮಗಳನ್ನು ಪಾಲಿಸುವಂಥ – **ಶ್ರೀ ಹರಿಯು**

**೭೧೯. ಚತುರ್ಮುಕ್ತಿ –**

ಮಾಧ್ವ ಸಾಂಪ್ರದಾಯದ ಪ್ರಕಾರ, ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಹಾಗೂ ಸಾಯುಜ್ಯ ಇವು ಮುಕ್ತಿಯ ನಾಲ್ಕು ಬಗೆಗಳು ಶ್ರೀ ಹರಿಯಲ್ಲಿ ಪ್ರವೇಶವನ್ನು ಪಡೆಯುವದು ಸಾಯುಜ್ಯ; ಶ್ರೀ ಹರಿಯ ವಾಸಸ್ಥಳಗಳಾದ ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ ವಾಸಿಸುವದು ಸಾಲೋಕ್ಯ; ಈ ಸ್ಥಾನಗಳ ಸುತ್ತಲೂ ಇರುವ ಕ್ಷೀರಸಾಗರ ಮೊದಲಾದ ಸ್ಥಳಗಳಲ್ಲಿ ವಾಸಿಸುವದು ಸಾಮೀಪ್ಯ ಮುಕ್ತಿ, ಶ್ರೀ ಹರಿಯ ವಿಶಿಷ್ಟ ಲಾಂಛನಗಳಾದ – ಶ್ರೀ ವತ್ಸ, ಕೌಸ್ತುಭಗಳ ವಿನಃ ಉಳಿದಂತೆ ಶ್ರೀ ಹರಿಗೆ ಸದೃಶವಾದ ರೂಪವನ್ನು ಪಡೆಯುವದು – ಸಾರೂಪ್ಯ ಮುಕ್ತಿ. ಹೀಗೆ ಅವುಗಳನ್ನು ಸ್ಥೂಲವಾಗಿ ಅರ್ಥೈಸಬಹುದು, ಸಾಯುಜ್ಯವೆಂದರೆ ಶ್ರೀ ಹರಿಯೊಂದಗಿನ ಐಕ್ಯವಲ್ಲ; ಕೇವಲ ಸಂಬಂಧ ಮಾತ್ರ.[೨೫೬]

**೭೨೦. ಚತುಷ್ಟಯೇಶ್ವರತಾ –**

**ಅನಿತ್ಯತ್ವಂ ದೇಹಾದಿರ್ದುಃಖಪ್ರಾಪ್ತಿರಪೂರ್ಣತಾ ।**

**ನಾಶಶ್ಚತುರ್ವಿಧೋಜ್ಞೇಯಸ್ತರಭಾವೋಹರೇಸ್ಸದಾ ॥**

೨೫೫. (i) ಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೧ ಶ್ಲೋಕ ೬–೭–೮ ಹಾಗೂ ಶ್ರೀ ವಿಷ್ಣು ಸಹಸ್ರನಾಮಸ್ತೋತ್ರಕ್ಕೆ – ಉಡುಪಿ ಫಲಿಮಾರು ಮಠದ ಟೀಕೆ ನಾಮ – ೧೪೧–ಚತುರಾತ್ಮ ಈ ನಾಮಕ್ಕೆ ಪುಟ ೫೦೬

೨೫೬. ಶ್ರೀ ಜಗನ್ನಾಥ ದಾಸರ ಕೃತಿಗಳು – ಕೀರ್ತನೆ ೧೮, ನುಡಿ ೧ ಇದಕ್ಕೆ ಟಿಪ್ಪಣಿ – ಕನ್ನಡ ಅಧ್ಯಯನ ಸಂಸ್ಥೆ ಮೈಸೂರ – ಹರಿದಾಸ ಸಾಹಿತ್ಯ ಮಾಲೆಯ ಗ್ರಂಥ –



ಅನಿತ್ಯತ್ವ ದೇಹನಾಶ, ದುಃಖ ಪ್ರಾಪ್ತಿ ಹಾಗೂ ಅಪೂರ್ಣತ್ವ ಹೀಗೆ ಈ ನಾಲ್ಕು ವಿಧನಾಶವು ಶ್ರೀ ಹರಿಗೆ ಇಲ್ಲದಿರುವುದರಿಂದ ಈ ನಾಲ್ಕು ನಾಶಗಳಿಗೂ ಸ್ವಾಮಿತ್ವಪಡೆಂಥ – **ಶ್ರೀ ಹರಿಯು**

**೭೨೧.ಚತುಸ್ಸಮುದ್ರಗ; ೭೨೨. ಚತುರತರಮತಿ; ೭೨೩.ಚತುರ್ವಿಧಾಯತಾ;**
**೭೨೪. ಚತುರ್ಬಲಾಂಬುಧಿ; ೭೨೫. ಚತುರ್ವೇದಾರ್ಥಿಚರಣ**

ಋಕ್ – ಸಾಮ – ಯಜುಃ ಹಾಗೂ ಅಥರ್ವಣ ಈ ನಾಲ್ಕು ವೇದಗಳಿಂದ ಪೂಜಿಸಲ್ಪಡುವಂಥ – **ಶ್ರೀ ಹರಿಯು**

**೭೨೬.ಚತುಶ್ಶಾಸ್ತ್ರ ಪೂಜ್ಯ** – ನಾಲ್ಕು ಶಾಸ್ತ್ರಗಳಿಂದ ಪೂಜೆಗೊಳ್ಳುವಂತಹ – **ಶ್ರೀಹರಿಯು**

**ಪಂಚಮುಖ ಮುಖಪಂಚ ಮುಖನುತ ।**
**ಪಂಚಜನರಿಪು ಪಂಚ ಮೋಕ್ಷದ ।**
**ಪಂಚಪಾಂಡವಪ್ರಾಣವರ ಪಂಚಾಕೃತವ್ರಾತ ॥**
**ಪಂಚಶರಪಿತ ಪಂಚವ್ಯೂಹ ಸು –।**
**ಪಂಚಭೇದಮತ ಪಂಚಪರ್ವಹ ।**
**ಪಂಚ ಕಾಲಜ್ಞಜ್ಞ ಸಂಭೃತ ಪಂಚಬಾಣ ನಮೋ** ॥ ೫೧ ॥

**೭೨೭. ಪಂಚಮುಖ –**

**ಮಖ = ಯಜ್ಞ –**

ಅನಿರುದ್ಧ ಶರೀರದಿಂದ ಯುಕ್ತನಾದ ಜೀವಿಯನ್ನು ಭಗವಂತನು ಆದಿಯಲ್ಲಿ ಆಕಾಶದಲ್ಲಿರುಸುತ್ತಾನೆ, ನಂತರದಲ್ಲಿ ಮೇಘ ಮಂಡಲದಲ್ಲಿ ಇರಿಸಿ, ವೃಷ್ಟಿದ್ವಾರಾ ಭೂಮಿಯಲ್ಲಿ ಬೆಳೆಯುವ ಧಾನ್ಯಾದಿಗಳಲ್ಲಿಡುವನು. ಪುನಃ ಅಲ್ಲಿಂದ ಪುರುಷನ ತೇಜೋಮಯವಾದ ರೇತಸ್ಸಿನಲ್ಲಿ ಕೆಲವು ಕಾಲವಿಟ್ಟು, ಆ ಪುರುಷನ ರೇತೋದ್ವಾರಾಸ್ತ್ರಿ ಗರ್ಭದಲ್ಲೇ ಇಡುವನು. ಜನಿಸುವ ಆ ಜೀವಿಗೆ ಮಾತ್ರ ಗರ್ಭದಲ್ಲಿ ಶ್ರೀ ಹರಿಯು ಅನಿರುದ್ಧಾದಿ ಪಂಚರೂಪಗಳಿಂದ ಸ್ಥೂಲ ಶರೀರವನ್ನು ಕರುಣಿಸುವನು. ಇಲ್ಲಿ ಗಗನ, ಮೇಘ, ಭೂಮಿ, ಪುರುಷ, ಹಾಗೂ ಸ್ತ್ರೀ ಐದು ಅಗ್ನಿಗಳು. ಈ ಐದು ಅಗ್ನಿಗಳಲ್ಲಿ ಮರೆಯದೇ ಜೀವಿಗಳನ್ನು ದೇವತೆಗಳು ಶ್ರೀಹರಿಯಲ್ಲಿ ಹೋಮಿಸುವರು; ಎಂದು ತಿಳಿಸುವ ಕ್ರಮಕ್ಕೆ ಪಂಚಮಹಾಯಜ್ಞ"ವೆಂದು ಹೆಸರು. ದೇವತೆಗಳಿಂದ ಈ ಬಗೆಯ ಪಂಚ ಮಹಾಯಜ್ಞವನ್ನೂ ಸ್ವೀಕರಿಸುವಂಥ – **ಶ್ರೀ ಹರಿಯು.**[೨೫೭]

**೭೨೮. ಮುಖಪಂಚ –**

ಸಿಂಹದ ಮುಖವೂ ಮಾನವಶರೀರವೂ ಉಳ್ಳಂಥ – ನಾರಸಿಂಹಾವತಾರದ – **ಶ್ರೀ ಹರಿಯು**

**೭೨೯. ಮುಖನುತ –**

ಮುಖ = ಶಿವ = ರುದ್ರ – ಶಿವನಿಂದ ಪೂಜೆಗೊಂಡಂಥ – **ಶ್ರೀ ಹರಿಯು**

ನಾಮ – ಗಿರಿಜಾಪತಿನಮಿತ – ನೋಡಿರಿ.

೨೫೭. ಶ್ರೀ ಗುರು ಜಗನ್ನಾಥ ದಾಸರ ಕೃತಿ ರತ್ನಮಾಲಾ "ಸಂಪಾದಕ ಕೆ. ಅಪರ್ಣಾಚಾರ್ಯ ಸ್ಪೆಶಲ್ ಆಫೀಸರ – ದಾಸಸಾಹಿತ್ಯ ಪ್ರೊಜೆಕ್ಟ್ ಟಿ.ಟಿ.ಡಿ. ತಿರುಪತಿ. ಹಾಗೂ ಛಾಂದೋಗ್ಯ ಉಪನಿಷತ್ ಅಧ್ಯಾಯ ೫, ಖಂಡ ೪, ೫, ೬, ೭, ೮, ೯

**೭೩೦. ಪಂಚಜನರಿಪು –**

ಪಂಚಜನು ಹಿರಣ್ಯ ಕಶ್ಯಪನ ಎರಡನೇ ಮಗನಾದ – ಸಲ್ಹಾದನ – ಮಗ – ಇವನು ಶ್ರೀ ಕೃಷ್ಣನ ಗುರುವಾದ ಸಾಂದೀಪ ಮುನಿಯ ಪುತ್ರನನ್ನು ಅಪಹರಿಸಿ ಸಮುದ್ರದಲ್ಲಡಗಿದ್ದನು. ಬಲರಾಮ ಕೃಷ್ಣರು ವಿದ್ಯಾಭ್ಯಾಸವನ್ನು ಮುಗಿಸಿ, “ಗುರು ದಕ್ಷಿಣೆಯನ್ನು ಸ್ವೀಕರಿಸಬೇಕೆನ್ನಲು ಸಾಂದೀಪ ಮುನಿಯು, “ಮೃತನಾದ ಪುತ್ರನನ್ನು ತಂದು ಕೊಡಬೇಕು– “ಅಂತಾ ಹೇಳಿದರು. ರಾಮಕೃಷ್ಣರು ಸಮುದ್ರರಾಜ ನಿಂದ – ಪಂಚಜನರೆಂಬ ರಾಕ್ಷಸರು ಗುರು – ಪುತ್ರನನ್ನು ಅಪಹರಿಸಿ ತನ್ನಲ್ಲಿ ಅಡಗಿದ್ದಾನೆಂದು ಕೇಳಿ ತಿಳಿದು ಸಮುದ್ರವನ್ನು ಪ್ರವೇಶಿಸಿ ಆ ಪಂಚಜನನ್ನು ಕೊಂದು ಅವರ ಶರೀರದಲ್ಲಿ ಗುರುಪುತ್ರನನ್ನು ಕಾಣದೆ, ಪಂಚಜನ್ಯನೆಂಬ ಶಂಖವನ್ನು ಪಡೆದುಕೊಂಡು, ಯಮನ ಪಟ್ಟಣವಾದ – ಸಂಯಮನಿಗೆ ಹೋಗಿ ಅಲ್ಲಿದ್ದ ಗುರುಪುತ್ರನನ್ನು ಕರೆತಂದು ಗುರುವಿಗೊಪ್ಪಿಸಿದರು. ಹೀಗೆ ಪಂಚಜನರಿಪು ವಾದಂಥ – ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು.**[೨೫೮]

**೭೩೧. ಪಂಚಮೋಕ್ಷದ –**

ಐದು ಪ್ರಕಾರದ ಮೋಕ್ಷಗಳು – (೧) ಸಾಲೋಕ್ಯ ಭಗವಂತನ ಸಮಾನ ಲೋಕಪ್ರಾಪ್ತಿ (೨) ಸಾಷ್ಟಿ – ಯೋಗ್ಯತಾನುಸಾರೇಣ ಐಶ್ವರ್ಯ ಪ್ರಾಪ್ತಿ. (೩) ಸಾಮೀಪ್ಯ – ಭಗವಂತನ ಸಮೀಪಸ್ಥಾನ ಪ್ರಾಪ್ತಿ (೪) ಸಾರೂಪ್ಯ – ಭಗವಂತನ ಸಮಾನ ಸ್ವರೂಪ ಪ್ರಾಪ್ತಿ. (೫) ಸಾಯುಜ್ಯ – ಭಗವಂತನಲ್ಲಿಯೇ ಲಯಪ್ರಾಪ್ತಿ. ಇಂಥ ಮುಕ್ತಿ ದಯಪಾಲಿಸುವಂಥ – **ಶ್ರೀಹರಿಯು**
ವಿ.ವಿ. ನಾಮ ೭೧೯ – ಚತುರ್ಮುಕ್ತಿ – ನೋಡಿರಿ.

**೭೩೨. ಪಂಚಪಾಂಡವ ಪ್ರಾಣವರ –**

“ಮಮ ಪ್ರಾಣಾಃ ಪಾಂಡವಾಃ “ ಅಂತಾ ನುಡಿದು ಐದೂಜನ ಪಾಂಡವರನ್ನೂ – ಅವರಿಗೆ ಬಂದೊದಗಿದ ಪ್ರತಿಯೊಂದೂ ಆಪತ್ತಿನಲ್ಲಿ ಕಾಪಾಡಿದ ಶ್ರೀಕೃಷ್ಣಾವತಾರದ – **ಶ್ರೀಹರಿಯು**

**೭೩೩. ಪಂಚಾಕೃತವ್ರಾತ –**

ವ್ರಾತ=ಸಮುದಾಯ

ರಾಕ್ಷಸರ ಸಮುದಾಯವನ್ನು ಪಂಚತ್ವವನ್ನು ಗೈಯ್ಯುವವನು ಅಂದರೆ ಕೊಲ್ಲುವವನು ಆದಂಥ – **ಶ್ರೀಹರಿಯು**

**೭೩೪. ಪಂಚ–ಶರಪಿತ –**

(೧) ಅರವಿಂದ (೨) ಅಶೋಕ (೩) ಚೂತ (೪) ನವಮಲ್ಲಿಕಾ ಹಾಗೂ (೫) ನೀಲೋತ್ಪಲ ಎಂಬ ಐದು ಬಣ್ಣಗಳುಳ್ಳ ಪಂಚಾಕರ ಅಂದರೆ ಮನ್ಮಥ – ಕಾಮದೇವನು ಮುಕ್ಕಣ್ಣನ ಉರಿಗಣ್ಣಿನಿಂದ ಸುಟ್ಟು ಭಸ್ಮನಾದ ಬಳಿಕ ಶ್ರೀ ಕೃಷ್ಣಾವತಾರದಲ್ಲಿ ಕಾಮದೇವನಿಗೆ ತಂದೆಯಾದಂಥ – **ಶ್ರೀಹರಿಯು.**[೨೫೯]

---

೨೫೮. ಪುರಾಣ ಭಾರತಕೋಶ – ಪುಟ ೩೪೬. ಹಾಗೂ ಶ್ರೀಮದ್ – ಭಾಗವತ – ದಶಮಸ್ಕಂಧಪೂರ್ವಾರ್ಧ ೪೨ ನೇ ಅಧ್ಯಾಯ.

೨೫೯. ಶ್ರೀಮದ್ ಭಾಗವತ ದಶಮಸ್ಕಂಧ, ಉತ್ತರಾರ್ಧದ ಅರವತ್ತೆಂಟನೆಯ ಅಧ್ಯಾಯ.



**೭೩೫. ಪಂಚವ್ಯೂಹ**

ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಹಾಗೂ ನಾರಾಯಣ ರೂಪೀ ಪಂಚವ್ಯೂಹನಾದಂಥ – **ಶ್ರೀಹರಿಯು**

**೭೩೬. ಪಂಚಭೇದಮತ –**

(i) ಜೀವ – ಜೀವ ಭೇದ, (ii) ಜೀವ – ಜಡಭೇದ (iii) ಜೀವ – ಈಶ ಭೇದ (iv) ಜಡ – ಜಡಭೇದ (V) ಜಡ – ಈಶಭೇದ – ಎಂದು ಪಂಚಭೇದಗಳನ್ನು ತಿಳಿಸಿರುವ ಭೇದಮತದಲ್ಲಿಯೇ ಅಭಿಮತಉಳ್ಳಂಥ – **ಶ್ರೀಹರಿಯು**

ನಾಮ – ೪೯೩ – ಭೇದವಾದೀಶಾ” ನೋಡಿರಿ

**೭೩೭. ಪಂಚಪರ್ವಹ –**

(೧) ತಾಮಿಸ್ರ (೨) ಅಂಧ ತಾಮಿಸ್ರ (೩) ಮೋಹ (೪) ಮಹಾಮೋಹ (೫) ನಿಧನ ಅಥವಾ (೧) ಮಾಯೆ (೨) ಅವಿದ್ಯೆ (೩) ಭ್ರಾಂತಿ (೪) ಅಜ್ಞಾನ (೫) ಸಂವೃತಿ ಅಥವಾ (೧) ಮೋಹನ (೨) ವಶೀಕರಣ (೩) ಉಚ್ಚಾಟಣೆ (೪) ವಿದ್ವೇಷಣ (೫) ಮಾರಣ – ಇವುಗಳನ್ನು ನಾಶಮಾಡುವಂಥ ಪಂಚಪರ್ವಹನಾದ – **ಶ್ರೀ ಹರಿಯು.**[೨೬೦]

**೭೩೮. ಪಂಚಕಲಾಜ್ಞಜ್ಞ –**

(i) ಅಭಿಗಮನ (ii) ಉಪಾದಾನ (iii) ಇಜ್ಯಾ (iv) ಸ್ವಾಧ್ಯಾಯ ಮತ್ತು (V) ಯೋಗ – ಈ ಐದು ಕಾಲಗಳಲ್ಲಿ ಶ್ರೀಹರಿಯನ್ನು ಪೂಜಿಸುವದು.

**(i) ಅಭಿಗಮನ –**

ಬೆಳಗಿನ ಝಾವ ಸುಮಾರು ಬೆಳಗ್ಗೆ ನಾಲ್ಕೂವರೆ ಗಂಟೆಗೆ ಎದ್ದು ಶೌಚಾದಿಗಳನ್ನು ಮುಗಿಸಿ, ಸ್ನಾನ, ಸಂಧ್ಯಾ, ಜಪಗಳನ್ನು ತ್ರಿಕರಣ ಶುದ್ಧಿಯಿಂದ ನಡೆಸುವದು.

**(ii) ಉಪಾದಾನ –**

ಎರಡನೇ ಪ್ರಹರ ಅಂದರೆ ಬೆಳಗ್ಗೆ ೯–೦೦ ಗಂಟೆಯಿಂದ ೧೨–೦೦ ಗಂಟೆಯವರೆಗೆ ಭಗವದಾರಾಧನೆಗೆ ಅವಶ್ಯವಾದ ಪುಷ್ಪ, ಫಲ ಮೊದಲಾದವುಗಳನ್ನು ಸಂಗ್ರಹಿಸುವದು.

**(iii) ಇಜ್ಯಾ –**

ಮೂರನೇಯ ಪ್ರಹರದಲ್ಲಿ – ಮಧ್ಯಾಹ್ನ ೧೨–೦೦ ಗಂಟೆಯಿಂದ ಭಗವದಾರಾಧನೆಗೆ ತಂದ ಪದಾರ್ಥಗಳಿಂದ ಭಗವರಾಧನೆ ಮಾಡುವದು;

**(iv) ಸ್ವಾಧ್ಯಾಯ –**

ನಾಲ್ಕನೇಯ ಪ್ರಹರದಲ್ಲಿ ಪವಿತ್ರ ಗ್ರಂಥಗಳನ್ನು ಪರಿಕಲಿಸುವದು; ಪ್ರವಚನಗಳನ್ನು ಶ್ರವಣ ಮಾಡುವದು; ಚಿಂತಿಸುವದು; ಅಧ್ಯಯನ; ವ್ಯಾಖ್ಯಾನ, ಮತ್ತು ಪಾಠ ಪ್ರವಚನಗಳನ್ನು ನಡೆಸುವದು.

---

೨೬೦. ಮೈಸೂರ ವಿಶ್ವವಿದ್ಯಾಲಯದ – ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯ ಮಾಲೆಯ ಗ್ರಂಥ – ಶ್ರೀ ಗೋಪಾಲದಾಸರ ಕೃತಿಗಳು – ಪುಟ – ೩೬೯.

**(V) ಯೋಗ –**

ರಾತ್ರಿ ಮತ್ತೆ ಭಗವತ್ಪೂಜೆಮಾಡಿ ಪ್ರಾಣಾಯಾಮ, ಮತ್ತು ಧ್ಯಾನಾದಿ ಅಷ್ಟಾಂಗ ಯೋಗವನ್ನು ಅಭ್ಯಾಸ ಮಾಡಿ ವಿಶ್ರಾಂತಿ ಪಡೆಯುವದು ಈ ಬಗೆಯಿಂದ ಆರಾಧಿಸುವವರಿಗೆ ವಿಷಯನಾದಂಥ – ಶ್ರೀ ಹರಿಯು, ಪಂಚರಾತ್ರಾಗಮ –

**೭೩೯. ಸಂಭೃತ – ಪಂಚಬಾಣ –**

(i) ಸಂಭೃತ : ಪಂಚಬಾಣಂಯೇನ ಸಃ – ಸಂಭೃತ ಪಂಚಬಾಣಃ ಕಾಮನನ್ನು ಪೋಶಿಸಿ ಸಂರಕ್ಷಿಸಿದಂಥ– ಕಾಮಪಿತನಾದ ಶ್ರೀ ಕೃಷ್ಣಾವತಾರದು – **ಶ್ರೀ ಹರಿಯು.**

(ii) ಪಂಚಾತ್ಮಕ ಮಾರುತ ಏವ ಬಾಣಃ – ತಾತ್ಪರ್ಯನಿರ್ಣಯ ಪಂಚಬಾಣ ರೂಪರಾದ ವಾಯುದೇವರನ್ನು ಪೋಷಿಸುವಂಥ – **ಶ್ರೀ ಹರಿಯು.**

**ಷಟ್ಸಹೋದರ ಷಟ್ಚರಣಚರ**
**ಷಟ್ಪತ್ನಾನ್ಹನ್ ಷಡೂರ್ಮಿಹರ ।**
**ಷಟ್ಶಕ್ತ್ಯಾತ್ಮಕ ಷಡ್ಗುಣೇಶ್ವರ ಷಡೃತಪ್ರವಹ ॥**
**ಷಟ್ಕರಾಭಿದ ಷಟ್ಪರೋಕ್ಷದ ।**
**ಷಟ್ಕ್ರಿಗ ಷಟ್ಶಾಸ್ತ್ರಪ್ರಿಯ ತಮ – ।**
**ಷಟ್ಕಸಹಗ********ನಮೋ** ॥ ೫೨ ॥

(ಈ ನುಡಿಯಲ್ಲಿಯ ಕೊನೆಯ ಪಾದದ ಕೊನೆಯ ಎರಡು ನಾಮಗಳು ಮಾತ್ರ ದೊರೆತಿಲ್ಲ)

* ೫೩ನೇ ನುಡಿ ದೊರೆತಿಲ್ಲಾ.

**೭೪೦. ಷಟ್ಸಹೋದರ –**

"ಶ್ರೀಕೃಷ್ಣನೇ! ನೀನೇ ನಾರಾಯಣನು. ನಿನ್ನಲ್ಲಿ ನಾನು ಶರಣು ಬಂದಿಹೆನು ಹಿಂದೆ ಮೃತನಾಗಿದ್ದ ಗುರು ಪುತ್ರನನ್ನು ಬದುಕಿಸಿ ಗುರುವಿಗೆ ಕೊಟ್ಟಿರುವೆ. ಹಾಗೆಯೇ ಸತ್ತು ಹೋಗಿರುವ ನನ್ನ ಆರುಮಂದಿ ಪುತ್ರರು – ನಿನ್ನ ಅಣ್ಣಂದಿರು. ಅವರನ್ನು ಬದುಕಿಸಿ ತಂದು ತೋರಿಸು", ಎಂದು ದೇವಕಿಯು ಕೇಳಿಕೊಂಡದ್ದಕ್ಕೆ ಶ್ರೀ ಕೃಷ್ಣನು ಆಗಲಿಯೆಂದು ಹೇಳಿ, ಸುತಳಲೋಕದಲ್ಲಿದ್ದ ಬಲಿ ರಾಜನ ಬಳಿಗೆ ಬಂದನು ಬಲಿಯು ಅವನನ್ನು ಭಕ್ತಿಯಿಂದ ಪೂಜಿಸಿ, "ಸ್ವಾಮಿಯೇ! ನಾವು ನಿನ್ನನ್ನು ದ್ವೇಷಿಸುವ ದೈತ್ಯ ಕುಲದವರು. ಆದರೂ ನನಗೆ ದರ್ಶನ ಕೊಟ್ಟು ಉದ್ಧಾರ ಮಾಡಿದೆ" ಎಂದು ಸ್ತುತಿಸಿದನು. ಆಗ ಶ್ರೀಕೃಷ್ಣನು, "ಬಲಿರಾಜನೇ! ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಪುತ್ರ ಮರೀಚಿಗೆ ಊರ್ಣಾ ಎಂಬ ಪತ್ನಿಯಲ್ಲಿ ಆರು ಮಂದಿ ಪುತ್ರರು ಹುಟ್ಟಿದರು. ಅವರು ದೇವಲರನ್ನು ಹಾಸ್ಯ ಮಾಡಿದುದರಿಂದ ಶಾಪ ಹೊಂದಿ ಕಾಲನೇಮಿ ಎಂಬ ದೈತ್ಯನ ಮಕ್ಕಳಾಗಿ ಹುಟ್ಟಿದರು. ಹಿರಣ್ಯ ಕಶಿಪುವಿನ ಶಾಪದಿಂದ ದುರ್ಗಾದೇವಿಯು ಅವರನ್ನು ದೇವಕಿಯ ಗರ್ಭದಲ್ಲಿ ತಂದಳು. ಅವರು ಹುಟ್ಟಿದೊಡನೆಯೇ ಕಂಸನಿಂದ ಹತರಾದರು. ಆರು ಮಂದಿಯೂ ನಿನ್ನ ಬಳಿ ಇರುವರು. ತಾಯಿಯ ದುಃಖ ಪರಿಹಾರಕ್ಕಾಗಿ ಅವರನ್ನು ನಾನೀಗ ಒಯ್ಯುವೆನು. ಸ್ಮರ, ಉದ್ಗೀಥ, ಪರಿಷ್ವಂಗ, ಕುದ್ರಭುಕ್ ಮತ್ತು ಘೃಣಿ. 'ಎಂಬ ಹೆಸರಿನ ಈ ಆರು ಮಂದಿಯೂ ನನ್ನ ಅನುಗ್ರಹದಿಂದ ಮುಂದೆ ಮುಕ್ತಿಯನ್ನು ಹೊಂದುವರು' ಎಂದು ಹೇಳಿದನು.



ಹೀಗೆ ಹೇಳಿ, ಶ್ರೀ ಕೃಷ್ಣನು ಹಿಂದೆ ಹುಟ್ಟಿದಾಗ ಇದ್ದಂತೆ ಶಿಶು ದೇಹಗಳನ್ನು ಕೊಟ್ಟು, ದೇವಕಿಯ ಬಳಿಗೆ ಅವರನ್ನು ತೆಗೆದುಕೊಂಡು ಬಂದನು. ಆಗ ಕೃಷ್ಣಸ್ತನ್ಯವನ್ನು ದೇವಕಿಯು ಆ ಮಂದಿಗೂ ಕೊಟ್ಟಳು. ಆ ಪ್ರಸಾದದಿಂದಲೂ ಶ್ರೀ ಕೃಷ್ಣನ ಸ್ಪರ್ಶದಿಂದಲೂ ಆ ಆರು ಮಂದಿಗೂ ಮೂಲ ರೂಪಗಳು ಬಂದು ತಮ್ಮ ಮಂದಿರಕ್ಕೆ ಹೋದರು. ಈ ಪ್ರಕಾರ ಷಟ್ಸಹೋದರನಾದಂಥ – **ಶ್ರೀ ಕೃಷ್ಣಾವತಾರದ – ಶ್ರೀ ಹರಿಯು.**[೨೬೧]

**೭೪೧. ಷಟ್ರಣಚರ –**

(೧) ಮಲ್ಲಯುದ್ಧ (೨) ಗದಾಯುದ್ಧ (೩) ಬಾಣ ಯುದ್ಧ (೪) ಖಡ್ಗಯುದ್ಧ ಇವೇ ಮೊದಲಾದ ಆರು ಪ್ರಕಾರದ ಯುದ್ಧಗಳಲ್ಲಿ ಪ್ರವೀಣನಾದಂಥ – **ಶ್ರೀ ಹರಿಯು**

**೭೪೨. ಷಟ್ಸಪತ್ನಾನ್ಹನ್ –**

ಕಾಮ, ಕ್ರೋಧಾದಿ ಆರು ವೈರಿಗಳನ್ನು ನಿಯಂತ್ರಿಸುವಂಥ – **ಶ್ರೀ ಹರಿಯು**

**೭೪೩. ಷಡೂರ್ಮೀಹರ –**

(೧) ಹಸಿವು (೨) ನೀರಡಿಕೆ ೯೩) ಶೋಕ (೪) ಮೋಹ (೫) ರಾಗ ಮತ್ತು ದ್ವೇಷ ಈ ಆರೂ ತೊಂದರೆಗಳನ್ನು ನಿವಾರಿಸುವಂಥ – ಶ್ರೀ ಹರಿಯು "ಜ್ಞಾನಾಯ ಜಾಪ್ರತಿನಿವೃತ್ತ ಗುಣೋರ್ವಿಚಕ್ರ" – ಭಾಗವತ ೨–೩–೧೨.

**೭೪೪. ಷಟ್ಶಕ್ತ್ಯಾತ್ಮಕ –, ೭೪೫. ಷಡ್ಗುಣೇಶ್ವರ –**

ನಾಮ – (೨೯) ಬಲಪೂರ್ಣ ನಾಮ – (೪೫೩) ಸುಗುಣನೋದಧೆ – ನೋಡಿರಿ

**೭೪೬. ಷಡೃತಪ್ರವಹ –**

ವಸಂತ – ಗ್ರೀಷ್ಮ ಮೊದಲಾದ ಆರು ಋತುಗಳನ್ನು ಕಾಲಕ್ಕೆ ಸರಿಯಾಗಿ ಪ್ರವರ್ತಿಸುವಂಥ – **ಶ್ರೀ ಹರಿಯು**

**೭೪೭– ಷಟ್ಕರಾಭಿಪ** – ಆರು ಕೈಗಳುಳ್ಳಂಥ – **ಶ್ರೀ ಹರಿಯು**

**೭೪೮– ಷಟ್ಪರೋಕ್ಷದ –** ಪರೋಕ್ಷ = ದರ್ಶನ

ಆರು ವಿಧವಾದ ಪರೋಕ್ಷ ದರ್ಶನಗಳನ್ನು ದಯಪಾಲಿಸಿದಂಥ – **ಶ್ರೀ ಹರಿಯು**

**೭೪೯. ಷಟ್ಕ್ರಯಗ –**

ಅಧ್ಯಯನ – ಅಧ್ಯಾಪನ – ಯಜನ – ಯಾಜನ; ದಾನ – ಪ್ರತಿಗ್ರಹ ಈ ಆರೂ ಕರ್ಮ (ಕ್ರಿಯೆ)ಗಳನ್ನು ತಾನು ಶರೀರಂತಸ್ಥಿತನಾಗಿ ಮಾಡಿ–ಮಾಡಿಸುವಂಥ,[೨೬೨] – **ಶ್ರೀ ಹರಿಯು**

**೭೫೦. ಷಟ್ಶಾಸ್ತ್ರ ಪ್ರಿಯ**

ಭಗವಂತನು ವೇದವ್ಯಾಸ ಅವತಾರ ತಾಳಿ, ಅಧಿಕಾರಿಗಳು ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ, ತತ್ವಜ್ಞಾನ, ವೈದಿಕ ಪದಗಳ ಸಂಸ್ಕಾರ. ಹಾಗೂ ಆ ಮೂಲಕ ಉತ್ತಮ

---

೨೬೧. ಶ್ರೀಮದ್ಭಾಗವತದ ದಶಮಸ್ಕಂಧ ಪೂರ್ವಾರ್ಧದ ಎಪ್ಪತ್ನಾಲ್ಕನೇಯ ಅಧ್ಯಾಯ.
೨೬೨. ಕನ್ನಡ ರತ್ನಕೋಶ ಪುಟ ೩೦೬.

ಲೋಕಗಳ ಪ್ರಾಪ್ತಿ ಇವುಗಳನ್ನು ಪಡೆಯುವಂತಾಗಲೆಂದು ನಾಲ್ಕು ವೇದಗಳು, ಐದನೇಯ ವೇದವೆಂದು ಪ್ರಸಿದ್ಧವಿರುವ ಇತಿಹಾಸ ಮತ್ತು ಪುರಾಣ ಹಾಗೂ ನಿರ್ಣಾಯಕ ಶಾಸ್ತ್ರವೆನಿಸಿರುವ ಬ್ರಹ್ಮಸೂತ್ರ ಹೀಗೆ ಆರು ಶಾಸ್ತ್ರಗಳನ್ನು ರಚಿಸಿ – ಷಟ್‌ಶಾಸ್ತ್ರಪ್ರಿಯ – ಎಂದೆನಿಸಿಕೊಂಡಂಥ – ಶ್ರೀ ವೇದವ್ಯಾಸಾವತಾರದ – **ಶ್ರೀ ಹರಿಯು.**[೨೬೩]

**೭೫೧. ತಮಷಟ್ಕಸಹಕ –**

ನಾಮ – ೩೫೩ "ಕಟುಮತಿಘ್ನ" ನೋಡಿರಿ.

**೭೫೨. ಹಾಗೂ ೭೫೩ ಈ ಎರಡು ನಾಮಗಳು ಈ ೫೨ ನುಡಿಯಲ್ಲಿ ಇನ್ನು ದೊರೆಯಬೇಕಾಗಿದೆ.**

**ಅಷ್ಟಕಾರಣ ಶಿಷ್ಟಮಹಿಷೆಯ ।**<br>
**ರಷ್ಟಕಾಶ್ರಮ ಅಷ್ಟಮದಹರ ।**<br>
**ಅಷ್ಟಕಾಷ್ಟಗ ಅಷ್ಟಭೂತದಾವ್ಯಷ್ಟಸೃತ್ಯಹ ॥**<br>
**ಅಷ್ಟದಳ ಅಕ್ಷೋಪುಜಹರ ।**<br>
**ಅಷ್ಟನಾಗಪ ಅಷ್ಟಭುಜಧರ ।**<br>
**ಅಷ್ಟಾಯುಧಸಂಭೃತಾಷೋಪಧ ತ್ರಿಭಾಂಗ ನಮೋ** ॥ ೫೪ ॥

**೭೫೪. ಅಷ್ಟಕಾರಣ–**

ನಾಮ – ೧೬೯ 'ಸೃಷ್ಟ್ಯಾದ್ಯಷ್ಟಕಾರಣ" ನೋಡಿರಿ

**೭೫೫. ಶಿಷ್ಟ್ಯಮಹಿಷೇಯರಷ್ಟಕಾಶ್ರಯ**

ಅಷ್ಟಶಿಷ್ಟ ಮಹಿಷೆಯರ ಆಶ್ರಯ (೧) ರುಕ್ಮಿಣಿ (೨) ಜಾಂಬುವತಿ (೩) ಸತ್ಯಭಾಮೇ (೪)ಕಾಳಿಂದಿ (೫) ಮಿತ್ರವಿಂದೆ (೬) ನೀಲಾ (ಸತ್ಯಾ) (೭) ಭದ್ರಾ ಹಾಗೂ (೮) ಲಕ್ಷಣಾ – ಈ ಎಂಟು ಶ್ರೇಷ್ಠ ಪಟ್ಟ ಮಹಿಷಿಯರಿಗೆ ಆಶ್ರಯದಾತನಾದ – ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು**

**೭೫೬. ಅಷ್ಟಮದಹರ**

(೧) ಧನ (೨) ಕುಲ (೩) ವಿದ್ಯಾ (೪) ರೂಪ (೫) ಯೌವ್ವನ (೬) ಬಲ (೭) ಪರಿವಾರ (೮) ಅಧಿಕಾರ – ಕನ್ನಡ ರತ್ನಕೋಶ ಪುಟ ೨೯೭

ಅಥವಾ – (೧) ಅನ್ನಮದ (೨) ಅರ್ಥಮದ (೩) ಅಹಂಕಾರ ಮದ (೪) ವೈಭವಮದ (೫) ಸಾಹಸಮದ (೬) ಧಾತ್ರಿವಶಮದ (೭) ಪ್ರಾಯಮದ ಹಾಗೂ ಮೋಹಮದ[೨೬೪]

ಇಂಥ ಮದಗಳನ್ನು ತಳೆದ ದೈತ್ಯರನ್ನು ನಾಶಮಾಡಿದಂಥ – **ಶ್ರೀ ಹರಿಯು**

**೭೫೭. ಅಷ್ಟಕಾಷ್ಟಗ –**

ಎಂಟೂ ದಿಕ್ಕುಗಳಲ್ಲಿ ವ್ಯಕ್ತನಾಗುವಂಥ – **ಶ್ರೀ ಹರಿಯು**

---

೨೬೩. ಶ್ರೀ ವಿಷ್ಣುಸಹಸ್ರನಾಮಸ್ತೋತ್ರಕ್ಕೆ ಉಡುಪಿಟೀಕೆ ನಾಮ – ೪– ವಷಟ್ಕಾರ : "ಇದಕ್ಕೆ ಪುಟ ೧೩.



**೭೫೮. ಅಷ್ಟಭೂತಿದ –**

ತನ್ನ ಭಕ್ತರಿಗೆ ಅಷ್ಟೈಶ್ವರ್ಯಗಳನ್ನು ದಯಪಾಲಿಸುವಂಥ – **ಶ್ರೀ ಹರಿಯು**

**೭೫೯. ಅವ್ಯಷ್ಟವ್ಯತ್ಯಹ**

ಅಷ್ಟೈಶ್ವರ್ಯರಹಿತವಾದ ಸಂಸಾರವನ್ನು ದೂರಮಾಡುವಂಥ – **ಶ್ರೀ ಹರಿಯು**

**೭೬೦. ಅಷ್ಟದಶ ಅಕ್ಷೋಹಿಣಿ ಪ್ರಜಹರ –**

ಭೂಭಾರ ಹರಣಾರ್ಥವಾಗಿ ಅವತಾರ ತಾಳಿದ ಶ್ರೀಕೃಷ್ಣ ಪರಮಾತ್ಮನು – ಪಾಂಡವ ಕೌರವರಲ್ಲಿ ಯುದ್ಧವೆಸಗಿದಾಗ, ಪಾಂಡವರ ಪಕ್ಷ ವಹಿಸಿ ಕುರುಕ್ಷೇತ್ರದ ಯುದ್ಧದಲ್ಲಿ ಹದಿನೆಂಟು ದಿನಗಳಲ್ಲಿ ಹದಿನೆಂಟು ಅಕ್ಷೋಹಿಣಿ ಸೈನ್ಯವು ಸಮೂಲ ನಾಶವಾಗುವಂತೆ ವ್ಯವಹರಿಸಿದ – ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು**

**೭೬೧. ಅಷ್ಟನಾಗಪ –** **(ನಾಗ = ಗಜ)**

(೧) ಐರಾವತ (೨) ಪುಂಡಲೀಕ (೩) ವಾಮನ (೪) ಕುಮುದ (೫) ಅಂಜನ (೬) ಪುಷ್ಪದಂತ (೭) ಸಾರ್ವಭೌಮ (೮) ಸುಪ್ರತೀಕ[೨೬೪]

ಈ ಎಂಟೂ ಅಷ್ಟದಿಗ್ಗಜ ಅಂದರೆ ಅಷ್ಟನಾಗಗಳನ್ನು ಪಾಲಿಸುವಂಥ – **ಶ್ರೀ ಹರಿಯು.**

**೭೬೨. ಅಷ್ಟಭುಜಧರ –**

**೭೬೩. ಅಷ್ಟಾಯಧಾ ಸಂಭೃತ –**

ಶ್ರೀ ಹರಿಯು ಎಂಟು ಭುಜಗಳನ್ನು ಧರಿಸಿದ್ದು, ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಒಂದೊಂದು ಆಯುಧ ಧರಿಸಿದರುವನು ಅವರ ವಿವರ –

(೧) ಧರ್ಮಜ್ಞಾನಾದಿ ಗುಣ ಸಮೇತವಾದ ಸತ್ವಗುಣ

– ಶ್ರೀದೇವಿಯೆಂಬ – ಪದ್ಮ

(೨) ಓಜಸ್ಸಹೋಬಲಯುತವಾದ ಪ್ರಾಣವೆಂಬ – ಗದೆ

(೩) ಜಲತತ್ವದ ......................................................ಶಂಖ

(೪) ತೇಜಸ್ತತ್ವದ......................................................ಚಕ್ರ

(೫) ಆಕಾಶ ತತ್ವದ..................................................ಖಡ್ಗ

(೬) ತಮಸ್ತುತ್ವದ......................................................ಗುರಾಣಿ

(೭) ಕಾಮರೂಪವಾದ ..........................................ಶಾರ್ಙ್ಗಧನಸ್ಸು

(೮) ಪುಣ್ಯ ಕರ್ಮವಾದ.............................ತೂಣೀರ

ಈ ಪ್ರಕಾರ ಅಷ್ಟಭುಜನಾಗಿ ಅಷ್ಟಾಯುದಗಳನ್ನು ಧರಿಸಿದಂಥ – **ಶ್ರೀ ಹರಿಯು.**[೨೬೫]

---

೨೬೪. ಕನ್ನಡ ರತ್ನಕೋಶ ಪುಟ ೨೯೭.

೨೬೫. ಶ್ರೀಮದ್ ಭಾಗವತ – ದ್ವಾದಶಸ್ಕಂದ – ಕ್ರಿಯಾಯೋಗ– ಮಾನಸಪೂಜಾ ವಿಭಾಗ.

**೭೬೪. ಅಷ್ಟೌಷಧ –**

(೧) ಆಸವ (೨) ಅರಿಷ್ಟ (೩) ಚೂರ್ಣ (೪) ಮಾತ್ರೆ (೫) ಭಸ್ಮ (೬) ಅಂಜನ (೭) ಲೇಹ್ಯ (೮) ಧೂಪ – ಇವೇ ಮೊದಲಾದ ಎಂಟು ವಿಧ ಪ್ರಕಾರದ ಔಷಧಗಳಲ್ಲಿ ಸ್ಥಿತನಾದ ಧನ್ವಂತರೀರೂಪದ – **ಶ್ರೀ ಹರಿಯು**

**೭೬೫. ತ್ರಿಭಾಂಗ –**

(೧) ಸ್ವ–ಪ್ರಕಾಶ (೨) ಪರ – ಪ್ರಕಾಶ (೩) ಉಭಯ ಪ್ರಕಾಶಗಳೆಂಬ ಮೂರು ವಿಧವಾದ ಪ್ರಕಾಶಯುಕ್ತವಾದಂಥ – **ಶ್ರೀಹರಿಯು**

**ನವಸುರತ್ನಾಭರಣಯುಕ–ತ್ರಿ–।**
**ರ್ನವಕಪ್ರಿಯ ನವದ್ವಾರಪುರಪ್ರಭೇಂ।**
**ನವಶಕ್ತ್ಯಾತ್ಮಕ ನವಗ್ರಹ ನವದಯಾಗುಣ ॥**
**ನವರಸೇಶ್ವರ ನವಪ್ರಜೇಶಪ ।**
**ನವನಿಧೀಶ ನವಾರ್ದನೆ ದಾ–।**
**ನವರಿಪುವೆ ನವಕೋಟ್ಯಮರರಿಂನಮಿತ ಚರಣ ನಮೋ ॥ ೫೫ ॥**

**೭೬೬. ನವರತ್ನಾಭರಣಯುಕ್ –**

(೧) ಮೌಕ್ತಿಕಾ (೨) ಮಾಣಿಕ್ಯ (೩) ವೈಡೂರ್ಯ (೪) ಗೋಮೇದ (೫) ವಜ್ರ (೬) ವಿಡ್ರೂಮ (೭) ಪದ್ಮರಾಗ (೮) ಮರಕತ ಹಾಗೂ (೯) ನೀಲ[೨೬೬]

ಈ ನವರತ್ನಗಳಿಂದ ನಿರ್ಮಿಸಿದಂಥ ಆಭರಣಗಳನ್ನು ಧರಿಸಿದಂಥ – **ಶ್ರೀ ಹರಿಯು**

**೭೬೭. ತ್ರಿರ್ನವಕಪ್ರಿಯ –**

(೩x೯) ಅಂದರೆ ೨೭ ತತ್ವಗಳಲ್ಲಿ ಸನ್ನಿವಿಷ್ಟನಾಗಿ ಪ್ರಿಯನಾದ – **ಶ್ರೀ ಹರಿಯು**

**೭೬೮. ನವದ್ವಾರಪುರ ಪ್ರಭೇಂ –**

ಪುರಂಜನವೆನಿಸುವ ಈ ಶರೀರಕ್ಕೆ ಒಂಭತ್ತು ದ್ವಾರಗಳು. ಮೇಲಿನಿಂದ ಏಳು ಬಾಗಿಲುಗಳು ಎರಡು ಕಿವಿ ಎರಡು ಕಣ್ಣು, ಎರಡು ಮೂಗಿನ ಹೊರಳೆ ಮತ್ತು ಒಂದು ಬಾಯಿ; ಕೆಳಗಿನಿಂದ ಪುನಃ ಎರಡು ಬಾಗಿಲುಗಳು – ಮಲ ಮೂತ್ರ ದ್ವಾರಗಳು ಇಂಥ ಪುರ ಅಂದರೆ ಪಟ್ಟಣದಲ್ಲಿ ಜೀವಾತ್ಮನ ಜೊತೆ ಗೂಡಿ ಶರೀರದೊಳಗಿದ್ದು; ಬಿಂಬರೂಪವಾಗಿದ್ದ ಪರಮಾತ್ಮನು ತನ್ನ ಪ್ರಭೆ ಅಂದರೆ ಬೆಳಕಿನಿಂದ ಪ್ರಕಾಶಿಸುವಂಥ – **ಶ್ರೀ ಹರಿಯು.**[೨೬೭]

(ನಾರದರು ಪ್ರಾಚೀನ ಬಹುಗೆ ಹೇಳಿದ ಪುರಂಜನೋಪಾಖ್ಯಾನದ ಕತೆ ಇದು)

**೭೬೯. ನವಶಕ್ತ್ಯಾತ್ಮಕ –**

ವಿಮಲಾ, ಉತ್ಕರ್ಷಿಣಿ ಇತ್ಯಾದಿ ಶಕ್ತಿ ರೂಪನಾದಂಥ – **ಶ್ರೀ ಹರಿಯು**

---

೨೬೬. ಕನ್ನಡ ರತ್ನಕೋಶ ಪುಟ ೩೦೩.
೨೬೭. ಶ್ರೀಮದ್ – ಭಾಗವತ – ನಾಲ್ಕನೇಯ ಸ್ಕಂಧ ಅಧ್ಯಾಯ ೨೪, ೨೫, ೨೬, ೨೭, ಹಾಗೂ ೨೯.



**೭೭೦. ನವಗ್ರಹ –**

(೧) ಸೂರ್ಯ (೨) ಚಂದ್ರ (೩) ಅಂಗಾರಕ (೪) ಬುಧ (೫) ಗುರು (೬) ಶುಕ್ರ (೭) ಶನಿ (೮) ರಾಹು (೯) ಕೇತು – ಈ ಒಂಭತ್ತು ಗ್ರಹಗಳ ಅಂತರ್ಯಾಮಿಯಾಗಿದ್ದು ಕೊಂಡು ಅವುಗಳ ನಿಯಾಮಕನಾಗಿರುವಂಥ – **ಶ್ರೀ ಹರಿಯು**

**೭೭೧. ಭವದಾಯಾಗುಣ; ೭೭೨. ನವರಸೇಶ್ವರ –**

(೧) ಶೃಂಗಾರ (೨) ಹಾಸ್ಯ (೩) ಕರುಣ ೯೪) ರೆಂದ್ರ ೯೫) ವೀರ (೬) ಭಯಾನಕ (೭) ಭೀಭತ್ಸ (೮) ಅಧ್ಭುತ ಹಾಗೂ (೯), ಶಾಂತ [೨೬೮] ಈ ನವರಸಗಳ ಒಡೆಯನಾದಂಥ – **ಶ್ರೀ ಹರಿಯು.**

**೭೭೩. ನವ ಪ್ರಜೇಶಪ –**

ನವ + ಪ್ರಜೀಶ + ಪ –

ಬ್ರಹ್ಮದೇವರು ತಮ್ಮ ಅವಯವಗಳಿಂದ ನವ ಪ್ರಜೇಶ್ವರರನ್ನು ಸೃಷ್ಟಿಸಿದರು – ಅದರ ವಿವರ –

(೧) ಮನಸ್ಸಿನಿಂದ – ಮರೀಚಿ
(೨) ಅಂಗುಷ್ಟದಿಂದ – ದಕ್ಷ
(೩) ಪ್ರಾಣದಿಂದ – ವಸಿಷ್ಟರು
(೪) ಚರ್ಮದಿಂದ – ಭೃಗು
(೫) ಕೈಯಿಂದ – ಕ್ರತು
(೬) ನಾಭಿಯಿಂದ – ಪುಲಹ
(೭) ಕಿವಿಗಳಿಂದ – ಪುಲಸ್ತ್ಯ
(೮) ಮುಖದಿಂದ – ಅಂಗಿರಾಋುಷಿ
(೯) ಕಣ್ಣುಗಳಿಂದ – ಅತ್ರಿ

ಈ ಬ್ರಹ್ಮಸೃಷ್ಟರಾದ ಪ್ರಜೇಶ್ವರರನ್ನು ಪಾಲಿಸುವಂಥ,[೨೬೯] – **ಶ್ರೀ ಹರಿಯು**

**೭೭೪. ನವಿನಿಧೀಶ –**

(೧) ಮಹಾಪದ್ಮ (೨) ಪದ್ಮ (೩) ಶಂಖ (೪) ಮಕರ (೫) ಕಚ್ಛಪ (೬) ಮುಕುಂದ (೭) ಕುಂದ ಅಥವಾ ನಂದಕ (೮) ನೀಲ (೯) ವರ ಅಥವಾ ಖರ್ಗ – (ಕನ್ನಡ ರತ್ನಕೋಶ ಪುಟ ೩೦೩೦) ಈ ನವನಿಧಿಗಳ ಒಡೆಯನಾದಂಥ – **ಶ್ರೀ ಹರಿಯು**

---

೨೬೮. ಶಾಂತ ಕನ್ನಡ ರತ್ನಕೋಶ ಪುಟ ೩೦೩
೨೬೯. ಶ್ರೀಮದ್ ಭಾಗವತ ಮೂರನೇಯ ಸ್ಕಂಧ ಹದಿಮೂರನೇಯ – ಅಧ್ಯಾಯ

**೭೭೫. ನವಾರ್ದನ –**

ನವವಿಧಭಕ್ತಿಯಂತೆ ಒಂಭತ್ತು ವಿಧವಾದದೋಷಗಳನ್ನು ನಾಶಮಾಡುವಂಥ – **ಶ್ರೀ ಹರಿಯು**

ನವವಿಧ ಭಕ್ತಿಯ – ವಿರುದ್ಧ ಭಗವಂತನನ್ನು ದೋಷಿಸುವ ಕ್ರಿಯೆಗಳು – ನವದೂಷಣೆಗಳ ವಿವರಣೆ – ಶ್ರೀಮದ್ ಭಾಗವತದಲ್ಲಿ ಹಾಗೂ ಶ್ರೀ ವಿಷ್ಣು ತೀರ್ಥರ ಭಾಗವತ ಸಾರೋದ್ಧಾರದಲ್ಲಿ ಬಂದಿವೆ.

**ದಶಶತಾನನ ದಶಶತಾಂಬಕ –।**
**ದಶಶತಸುತೋರ್ದಂಡ ಧರಖಳ।**
**ದಶದಶಾಭಿದ ದಶಶತಾಭಿದ ಖಗಾಮರಪ ॥**
**ದಶವರೂಥಜ ದಶಮುಖಘ್ನ ತ್ರಿ –।**
**ದಶಬಯಾಂತಕ ದಶಕಕುಭಹಸತ್–।**
**ದಶನ ದಶಮತಿಭಾಷ್ಯ ರತದರ್ಶನೀ ಶದ್ರಕ್ಷ ನಮೋ** ॥ ೫೬ ॥

**೭೭೬. ದಾನವರಿಪುವೆ –**

ದಾನವವೈರಿಯಾದಂಥ – **ಶ್ರೀ ಹರಿಯು**

**೭೭೭. ನವಕೋಟ್ಯಾಮರರಿಂನಮಿತ ಚರಣ –**

ನವಕೋಟಿದೇವತೆಗಳಿಂದ ವಂದಿತನಾದನಂಥ – **ಶ್ರೀ ಹರಿಯು**

**೭೭೮. ದಶಶತಾನನ** – (ಆನನ = ಮುಖ)

ಸಾವಿರಾರು ಮುಖ ಉಳ್ಳಂಥ – **ಶ್ರೀ ಹರಿಯು**

ಸಹಸ್ರ ಶೀರ್ಷಾಪುರುಷಃ – ಪುರುಷಸೂಕ್ತ

**೭೭೯. ದಶಶತಾಂಬಕ** – ಅಂಬಕ = ಕಣ್ಣಿ)

ಸಾವಿರಾರು ಕಣ್ಣುಳ್ಳಂಥ – ಶ್ರೀ ಹರಿಯು

**೭೮೦. ದಶಶತಸುತ** – (ಸುತ = ಮಕ್ಕಳು)

ಸಾವಿರಾರು ಮಕ್ಕಳುಳ್ಳಂಥ ಶ್ರೀ ಕೃಷ್ಣಾವತಾರದ – **ಶ್ರೀಹರಿಯು**

**೭೮೧. ಓರ್ದಂಡಧರಖಳ –**

ಉನ್ಮತ್ತರಾವ ರಕ್ಕಸರನ್ನು ದಂಡಿಸಿ ಸಂಹರಿಸಿದಂಥ – **ಶ್ರೀ ಹರಿಯು**

**೭೮೨. ದಶದಶಾಭಿದ –**

ದಶಾವತಾರಗಳಿಗೆ ಹೆಸರು ಪಡೆದಂಥ – **ಶ್ರೀಹರಿಯು**

**೭೮೩. ದಶಶತಾಭಿದ –**

ಸಹಸ್ರನಾಮ ಪ್ರತಿಪಾದ್ಯನಾದಂಥ – **ಶ್ರೀ ಹರಿಯು**



**೭೮೪. ಖಗಾಮರಪ –**

ಹಕ್ಕಿ ಪಕ್ಷಿಗಳನೊಳಗೊಂಡು ದೇವತೆಗಳವರೆಗೆ ಎಲ್ಲರನ್ನು ರಕ್ಷಿಸುವಂಥ – **ಶ್ರೀಹರಿಯು**

**೭೮೫. ದಶವರೂಥಜ – (ವರೂಥ=ರಥ)**

ದಶರಥನಪುತ್ರನಾದಂಥ – ಶ್ರೀರಾಮಾವತಾರದ – **ಶ್ರೀ ಹರಿಯು**

**೭೮೬. ದಶಮುಖಘ್ನ –**

ಶ್ರೀಹರಿಯ ಪರ್ಷ್ವದರಾದ ಜಯವಿಜಯರು ತಮ್ಮ ಎರಡನೇಯ ಜನ್ಮದಲ್ಲಿ ರಾವಣ – ಕುಂಭಕರ್ಣರಾಗಿ ಹುಟ್ಟಿ ಶ್ರೀಹರಿಯ ದ್ವೇಶಿಗಳಾಗಿ ಮದಾಂಧರಾಗಿ ವರ್ತಿಸಿ – ಶ್ರೀ ಸೀತಾದೇವಿಯನ್ನು ಅಪಹರಿಸಿದ್ದರಿಂದ ಶ್ರೀ ರಾಮಾವತಾರದಲ್ಲಿ ಹತ್ತು ತಲೆಯ ರಕ್ಕಸ – ರಾವಣನನ್ನು ಸಂಹರಿಸಿದಂಥ – **ಶ್ರೀಹರಿಯು**

**೭೮೭. ತ್ರಿದಶಭಯಾಂತಕ –**

ತ್ರಿ+ದಶ=ತ್ರಿದಶ ಅಂದರೆ ದೇವತೆಗಳು ದೇವತೆಗಳ ಭಯ ಹಾಗೂ ಬಲಿ ಮೊದಲಾದ ದಾನವರೊಡ್ಡಿದ ತೊಂದರೆಗಳನ್ನೂ ಹೋಗಲಾಡಿಸಿದಂಥ – **ಶ್ರೀಹರಿಯು**

ತ್ರಿದಶ = ದೇವತೆಗಳು ಇದಕ್ಕೆ ಶ್ರೀ ಜಗನ್ನಾಥ ದಾಸ ಕವಿ ವಿರಚಿತ ಹರಿಕಥಾ ಮೃತಸಾರದ ೧೨ನೇ ಸಂಧಿ ೨೫ನೇ ನುಡಿಗೆ ಶ್ರೀ ಸಂಕರ್ಷಣ ಒಡೆಯರ ಟೀಕೆ.

**೭೮೮. ದಶಕರುಭಹಸತ್ ದಶನ –**

ದಶ = ಹತ್ತು; ಕರುಭ = ದಿಕ್ಕು, ಹಸತ್ + ನಗುವ, ದಶದ = ಹಲ್ಲು ದಶದಿಕ್ಕುಗಳಲ್ಲಿವಿರಾಜಮಾನವಾಗಿ ನಗುತ್ತಿರುವಂಥ – **ಶ್ರೀಹರಿಯು**

**೭೮೯. ದಶಮತಿಭಾಷ್ಯರತ –ದರ್ಶನ –**

ದಶಮತಿ = ಚುರುಕು ಬುದ್ಧಿಯುಳ್ಳ = ಮಧ್ವಾಚಾರ್ಯರು, ಮಧ್ವಾಚಾರ್ಯರು ಬರೆದ ಭಾಷ್ಯಗಂಥಗಳಿಗೆ ಪ್ರೀತನಾದಂಥ – **ಶ್ರೀಹರಿಯು**

**೭೯೦. ಈಶದ್ರಕ್ಷ –**

ರುದ್ರದೇವರನ್ನು ರಕ್ಷಿಸಿದಂಥ – **ಶ್ರೀ ಹರಿಯು**

**ಶತಸುಖಾರ್ಥಿತ ಶತಾಬ್ಧಿಶಯನಸು –।**
**ಶತಮಖಾರ್ಚಿತ ಶತಗೋಪೀಪತೆ।**
**ಶತಸೋಮಪ ನೃಪಶತಕ ಸ್ಥಾಪಕ ಶತಶತಾಂಶಧರಾ ॥**
**ಶತಕುಂಜಹನ್ ಶತಕುಲೋದ್ಧರ।**
**ಶತಾಯುಃಪ್ರದ ಶತಾಪರಾಧಪ।**
**ಶತಸಹಸ್ರಾರ್ಕಾಭಿ ಶತಪತ್ರಾಕ್ಷಸುಖದ ನಮೋ** ॥ ೫೭ ॥

**೭೯೧. ಶತಸುಖಾರ್ಥಿತ –**

ಶತಸುಖ = ಬ್ರಹ್ಮ; ಆರ್ಥಿತ = ಆರಾಧಿತ

ಬ್ರಹ್ಮದೇವರಿಂದ ಆರಾಧಿತನಾಗುವಂಥ – **ಶ್ರೀ ಹರಿಯು**

**೭೯೨. ಶತಾಬ್ಧಿಶಯನ –**

ನೂರು ವರ್ಷಗಳ ಪ್ರಳಯ ಜಲದಲ್ಲಿ ಶಯನ ಮಾಡಿದಂಥ – **ಶ್ರೀ ಹರಿಯು**

**೭೯೩. ಸುಶತಮಖಾರ್ಚಿತ –**

೩ನೂರು ಯಜ್ಞಗಳನ್ನು ಮಾಡಿದ ಇಂದ್ರನಿಂದ ಪೂಜಿತನಾದಂಥ – ಕೃಷ್ಣಾವತಾರದ – **ಶ್ರೀ ಹರಿಯು**

**೭೯೪. ಶತಗೋಪೀಪತೆ –**

ನೂರಾರು ಗೋಪಿಕಾಸ್ತ್ರಿಯರ ಪತಿಯಾದ – ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು**

**೭೯೫. ಶತಸೋಮಪ –**

ನೂರು ಜನ ಸೋಮ ಪಾನಾರ್ಹರಾದ ದೇವತೆಗಳನ್ನು ಪಾಲಿಸುವಂಥ – **ಶ್ರೀ ಹರಿಯು**

**೭೯೬. ನೂರು ಜನಸ್ತೋಮಪಾಸಾಹರರು**

| ಅ.ನಂ. | ಹೆಸರು | ಸಂಖ್ಯೆ |
|---|---|---|
| ೧) | ಮರುತ್ತರು | ೪೯ |
| ೨) | ಅಶ್ವಿನೀದೇವತೆಯರು | ೨ |
| ೩) | ವಿಶ್ವೇದೇವತೆಯರು | ೧೦ |
| ೪) | ರುದ್ರಗಣ | ೧೧ |
| ೫) | ಆದಿತ್ಯರು | ೧೨ |
| ೬) | ಬ್ರಹಸ್ಪತ್ಯಾಚಾರ್ಯರು | ೧ |
| ೭) | ಪಿತೃದೇವತೆಯರು | ೩ |
| ೮) | ವಸುಗಳು | ೮ |
| ೯) | ಪ್ರಧಾನ ವಾಯುದೇವರು | ೧ |
| ೧೦) | ಭಾರತೀದೇವಿ | ೧ |
| ೧೧) | ಪೃಥ್ವೀದೇವತೆ | ೧ |
| ೧೨) | ಋಭು | ೧ |
| **ಒಟ್ಟು ಶತಸ್ಥರು** | | **೧೦೦** |

ವಿ.ವಿ. ಜಗನ್ನಾಥ ದಾಸರ – ಹರಿಕಥಾಮೃತಸಾರದ ೨೯ನೇ – ಅಣುತಾರತಮ್ಯಸಂಧಿ.

**೭೯೭. ನೃಪಶತ–ಕಸ್ಥಾಪಕ –**

ಪ್ರಿಯವೃತ, ಮಾಂಧಾತ, ಬಲಿ, ಹಯ ಹಯಃ ಈ ಮೊದಲಾದ ನೂರಾರು ರಾಜರಿಗೆ ಸ್ಥಾನಕೊಟ್ಟಂಥ – **ಶ್ರೀ ಹರಿಯು**

**೭೯೮. ಶತಶತಾಂಶಧರಾ –**

ಅನೇಕ ಅಂಶಗಳನ್ನೂ ಧಾರಣ ಮಾಡಿದಂಥ – **ಶ್ರೀ ಹರಿಯು**



**೭೯೯. ಶತಕುಂಜಹನ್ –**

ಶತಕುಂಜನೆಂಬರಕ್ಕಸನ್ನು ಸಂಹರಿಸಿದಂಥ – **ಶ್ರೀ ಹರಿಯು**

**೮೦೦. ಶತಕುಲೋದ್ಧರ –** (ಶತ = ಬಹಳ)

ಕಂಸನ ಉಪಟಳಕ್ಕಾಗಿ ದೇಶ ಬಿಟ್ಟು ಹೋದವರನೆಲ್ಲ ದ್ವಾರಕೆಗೆ ತಂದು ನೆಲಗಟ್ಟು ಮಾಡಿಸಿದ – ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು**

**೮೦೧. ಶತಸಹಸ್ರಾರ್ಕಾಭಿ (ಅರ್ಕ=ಸೂರ್ಯ)**

ಸಾವಿರಾರು ಸೂರ್ಯರು ಏಕಕಾಲಕ್ಕೆ ಉದಯವಾದರೆ ಪಸರಿಸುವಕಾಂತಿಗಿಂತಲೂ ಮಿಗಿಲಾದ ಕಾಂತಿಯುಳ್ಳಂಥ – **ಶ್ರೀ ಹರಿಯು**

**೮೦೨. ಶತಾಯುಃಪುದ –**

ಮನುಷ್ಯ ಜೀವಿಗಳಿಗೆ ಒಂದು ನೂರು ವರ್ಷಗಳವರೆಗೆ ಆಯಸ್ಸನ್ನಿತ್ತು ತುಂಬ ಜೀವನವನ್ನು ಸಾಗಿಸುವಂತೆಯೂ, ಸಾಧನೆಯನ್ನೂ ಮಾಡಿಕೊಂಡು ಉತ್ತಮ ಲೋಕಗಳನ್ನು ಗಳಿಸಿಕೊಳ್ಳುವಂತೆ ಅನುಗ್ರಹಿಸಿದಂಥ – **ಶ್ರೀ ಹರಿಯು**

**೮೦೩. ಶತಾಪರಾಧಿಪ –**

ನಾಮ – ೧೮೮ – ದೂಷರ್ಣಾಂತಕ" ನೋಡಿರಿ

**೮೦೪. ಶತಪತ್ರಾಕ್ಷಸುಖದ –**

ಶತಪತ್ರ – ಕಮಲ ; ಅಕ್ಷ – ಕಣ್ಣಿ

**ಕಮಲದಂತೆ ಕಣ್ಣುಳ್ಳ –** ಶ್ರೀ ಲಕ್ಷ್ಮೀದೇವಿಯನ್ನು ತನ್ನ ಅರ್ಧಾಂಗಿಯಾಗಿಯೂ, ಭಾರತಿ – ಸರಸ್ವತಿಯರೂ ತನ್ನ ಸೊಸೆಯರೆಂದೂ ಅವರಿಗೆ ಸಕಲ ಸೌಭಾಗ್ಯವನ್ನು ದಯಪಾಲಿಸಿ ತುಂಬ ಸುಖವನ್ನು ಕೊಡುವಂಥ – **ಶ್ರೀ ಹರಿಯು**

**ಕ್ಷಿತಿಪ್ಲವೋದ್ಧರ ಕ್ಷಿತಿಭೃಲೋದ್ಧರ ।**
**ಕ್ಷಿತಿತಲೋದ್ಧರ ಕ್ಷಿತಿಚಲನಕರ ।**
**ಕ್ಷಿತಿತ್ರಿಪದಧರಕ್ಷಿತಿ ಪಕ್ಷಯಕರಕ್ಷಿತಿಕನ್ಯಾಂಸಕರ ॥**
**ಕ್ಷಿತಿಜನಾಕರ ಕ್ಷಿತಿಖಳ ಮೋಹಕ ।**
**ಕ್ಷಿತಿಬರಾರ್ದಕ ಕ್ಷಿತಿಪಾಲನಕರ ।**
**ಕ್ಷಿತಿವಲಯಚರ ಕ್ಷಿತಿಜನೇತರ ಕ್ಷಿತಿ ಸುರೇಶನಮೋ** ॥ ೫೮ ॥

**೮೦೫. ಕ್ಷಿತಿಪ್ಲವೋದ್ಧರ –, ೮೦೬. ಕ್ಷಿತಿಭೃತೋದ್ಧಾರ –, ೮೦೭. ಕ್ಷಿತಿತಲೋದ್ಧರ –,**

**೮೦೮. ಕ್ಷಿತಿಚಲನಕಾರ –**

ಭೂಮಿಯು ತನ್ನ ಕಕ್ಷೆಯಲ್ಲಿ ಚರಿಸುವಂತೆ ಮಾಡುವಂಥ – **ಶ್ರೀ ಹರಿಯು**

**೮೦೯. ಕ್ಷಿತಿತ್ರಿಪದದರ –**

ಭೂಮಿಯನ್ನು ಮೂರು ಪಾದಗಳಿಂದ ಅಳತೆಗೊಳಿಸುವಂಥ ತ್ರಿವಿಕ್ರಮಾವಂತರಾದ – **ಶ್ರೀ ಹರಿಯು**

**೮೧೦. ಕ್ಷಿತಿಪಕ್ಷಯಕರ –; ೮೧೧ ಕ್ಷಿತಿಕನ್ಯಾಂಸಕರ – ; ೮೧೨. ಕ್ಷಿತಿಜನಾಕರ – ;**

ಭೂಮಿಯಲ್ಲಿ ಜನರು ವಾಸಿಸುವಂತೆ ಮಾಡುವಂಥ – **ಶ್ರೀ ಹರಿಯು**

**೮೧೩. ಕ್ಷಿತಿಖಳಮೋಹಕ –**

ಭೂಮಿಯ ಮೇಲಿನ ದುಷ್ಟರಕ್ಕಸರನ್ನು ಮೋಸಗೊಳಿಸುವಂಥ – **ಶ್ರೀ ಹರಿಯು**

**೮೧೪. ಕ್ಷಿತಿಸುರೇಶ –**

ಕ್ಷಿತಿ ಭೂಮಿ ಸುರ – ದೇವತೆಗಳು ಈಶ – ಪ್ರಭು. ಭೂಮಿಯ ಮೇಲಿನ ದೇವತೆಗಳು ಅಂದರೆ ಬ್ರಾಹ್ಮಣರು ಅವರ ಪ್ರಭುವಾದಂಥ – **ಶ್ರೀ ಹರಿಯು**

**ಅಂಬುಗಮನ ಪಯೋಂಬುಮಥನ ಲ –।**
**ಯಾಂಬು ತಳಗಾರುಣಾಂಬು ಸಟಬಾ –।**
**ಹ್ಯಾಂಬುಪ್ರವಾಹಕ ಅಂಬುಶೋಷಕ ಅಂಬುಧಿಮದಘ್ನ ॥**
**ಅಂಬುಗೃಹ ಮಹಾಂಬುಧೆ – ದ –।**
**ರ್ಮಾಂಬುಶ್ರೀಮತ್ ಅಂಬುಜೇಶ ಸು –।**
**ಧಾಂಬುಧಿ ಸಮಾನೋದರಾಂಬುದಗಾತ್ರಕಪಿತನಮೋ ॥ ೫೯ ॥**

**೮೧೫. ಅಂಬುಗಮನ –**

ಬ್ರಹ್ಮಜನಿತ ಹಿರಣ್ಯಾಕ್ಷನನ್ನೂ, ಕಶ್ಯಪಪತ್ನಿ ದಿತಿಯಜನಿತನಾದ ಹಿರಣ್ಯಾಕ್ಷನನ್ನು ಭೂ ಅಪಹರಣಕ್ಕಾಗಿ ವರಾಹವಾತರದಿಂದ ಜಲದಲ್ಲಿ ಹೊಕ್ಕು ಅವರನ್ನು ಸಂಹರಿಸಿದಂಥ – **ಶ್ರೀಹರಿಯು**

ನಾಮ – ೭೨ – 'ವರಹ' ನೋಡಿರಿ

**೮೧೬. ಪಯೋಂಬುಮಥನ –**

ಅಮೃತವನ್ನೇಪೇಕ್ಷಿಸಿ ಕ್ಷೀರಸಾಗರವನ್ನು ದೇವಾಸುರರು ಕೂಡಿ ಮಂದಾರ ಪರ್ವತವನ್ನು ಕಡೆ ಗೋಲಾಗಿ ಮಾಡಿಕೊಂಡು ಮಥಿಸುವ ಕಾಲಕ್ಕೆ ಪರ್ವತವು ಕೆಳಗೆ ಇಳಿಯ ತೊಡಗಿದಾಗ ಕೂರ್ಮನಾಗಿ ಆ ಪರ್ವತವನ್ನು ತನ್ನ ಬೆನ್ನ ಮೇಲೆ ಹೊತ್ತುಕೊಂಡು, ಇನ್ನೊಂದು ಅಜಿತ ರೂಪದಿಂದ ಸಮುದ್ರವನ್ನು ದೇವತೆಗಳೊಡಗೂಡಿ ಮಥನಮಾಡಿದಂಥ,[೨೭೦] – **ಶ್ರೀಹರಿಯು**

**೮೧೭. ಲಯಾಂಬುತಳಗ; ೮೧೮. ಅರುಣಾಂಬುಸಟ**

**೮೧೯. ಬಾಹ್ಯಾಂಬುಪ್ರವಾಹಕ –**

**ನಾಮ – ೩೫೦ – ಕ.ಟಾ ಹಭಂಜಕ ನೋಡಿರಿ**

**೮೨೦. ಅಂಬು ಶೋಷಕ –**

(ಪ್ರಳಯ ಕಾಲದಲ್ಲಿ) ಸರ್ವಸಂಹಾರದಲ್ಲಿ ತೊಡಗಿರುವ ಭಗವಂತನು ನರಸಿಂಹ ರೂಪದಿಂದ ಸಮುದ್ರದ ಮಧ್ಯದಲ್ಲಿದ್ದು, ಅಲ್ಲಿಯ ಅಗಾಧ ಜಲರಾಶಿಯನ್ನು ಭಸ್ಮೀಕರಿಸುವನೆಂದು ವೈಹಾಯಸ ಸಂಹಿತೆ ತಿಳಿಸಿದೆ.[೨೭೧]

೨೭೦. ಶ್ರೀ ಜಗನ್ನಾಥ ದಾಸಾರ್ಯಣ ವಿರಚಿತ "ತತ್ವಸುವ್ವಾಲಿ" ಇದಕ್ಕೆ ಟಿಪ್ಪಣಿ ಗ್ರಂಥ – ಶ್ರೀಹರಿದಾಸ ಭಾರತೀಯ – "ವಿಜಯಾಂಕ ರತ್ನ – ೭" ರ ಪುಟ ೧೭೪.

೨೭೧. (ವೈಹಾಯಸಸಂಹಿತೆ) ಕರ್ಮ ನಿರ್ಣಯ (೬–೨) ಹಾಗೂ ಶ್ರೀ ವಿಷ್ಣು ಸಹಸ್ರನಾಮಸ್ತೋತ್ರಕ್ಕೆ ಉಡುಪಿಟೀಕೆ. ನಾಮ – ೨೧ = "ನಾರಸಿಂಹವಪು" ಕ್ಕೆ ಪುಟ – ೮೫



ಹೀಗೆ ನೀರನ್ನು ಶೋಷಿಸುವಂಥ ನರಸಿಂಹಾವತಾರದ – **ಶ್ರೀಹರಿಯು**

**೮೨೧. ಅಂಬುಧಿ ಮದಘ್ನ –**

ನಾಮ – ೪೮ – "ವನಧಿಬಂಧವಿಹಾರ" ನೋಡಿರಿ.

**೮೨೨. ಅಂಬುಗೃಹ –**

ಅಂಬು = ಜಲ ; ಗೃಹ = ಮನೆ

ಕ್ಷೀರಸಾಗರವನ್ನೇ ತನ್ನ ಮನೆಯಾಗಿ ಮಾಡಿಕೊಂಡು, ಶೇಷ ದೇವರ ಹಾಸಿಗೆಯ ಮೇಲೆ ಮಲಗಿಕೊಂಡು ಶ್ರೀದೇವಿಯಿಂದ ಓಲೈಸಿಕೊಳ್ಳುವಂಥ – **ಶ್ರೀಹರಿಯು**

**೮೨೩. ಮಹಾಂಬುಧೇ; ೮೨೪. ಅಂಬಜೇಶ –**

**ಅಂಬು** – ಸಮುದ್ರಜ = **ಹುಟ್ಟಿದವಳು** = **ಈಶ** = ಪತಿ ಸಮುದ್ರಸುತೆಯಾದ ಶ್ರೀ ಲಕ್ಷ್ಮೀ ದೇವಿಯ ಪತಿಯಾದಂಥ – **ಶ್ರೀ ಹರಿಯು**

**೮೨೫. ಸುಧಾಂಬುಧಿ ಸಮಾನೋದರ –**

**ಸುಧಾ** – ಹಾಲು, **ಅಂಬುಧಿ** – ಸಮುದ್ರ = ಕ್ಷೀರಸಾಗರ ಹಾಲಿನ ಸಮುದ್ರವಾದ ಕ್ಷೀರಸಾಗರಕ್ಕೆ ಸಮಾನವಾದ ಹೊಟ್ಟೆಯುಳ್ಳಂಥ – **ಶ್ರೀ ಹರಿಯು**

**೮೨೬. ಅಂಬುದಗಾತ್ರಕಪಿತ –**

**ಅಂಬು** = ನೀರು, **ದ** = ಕೊಡುವ; ಅಂದರೆ – ಕಪ್ಪು ಮೋಡ. ಕ = ಬ್ರಹ್ಮ ಪಿತ = ತಂದೆ; ಅಂದರೆ – **ಶ್ರೀ ಹರಿಯು** ಮಳೆಸುರಿಸುವ ದಟ್ಟಮೋಡದಂತೆ ನೀಲವರ್ಣನಾದ ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು**

**ಅಗ್ನಿಬಿಭ ಅಬ್ಧ್ಯಾಗ್ನಿ ಸಹಚರ ।**
**ಅಗ್ನಿಮಯ ಪ್ರಳಯಯಾಗ್ನಿಲೋಚನ ।**
**ಅಗ್ನಿ ಕಾರ್ಯಾಜ್ಞಾಗ್ನಿಪೂಜಿತ ಅಗ್ನಿಹೋತ್ರಯುತಾ ॥**
**ಅಗ್ನಿರುಧ ಅನ್ನಾಗ್ನಿ ಕೋಪನ ।**
**ಅಗ್ನಿಸ್ಥಾಪಕ ಅಗ್ನಿವ್ಯಾಪಕ –।**
**ಅಗ್ನಿವರ್ಧಕ ಅಗ್ನಿದೀಪಕ ಅಗ್ನಿವರ್ಣನಮೋ ॥ ೬೦ ॥**

**೮೨೭.ಅಗ್ನಿನಿಭ; ೮೨೮ ಅಬ್ಧ್ಯಾಗ್ನಿ ಸಹಚರ; ೮೨೯ ಅಗ್ನಿಮಯ;**

**೮೩೦. ಪ್ರಳಯಾಗ್ನಿಲೋಚನ –**

ನಾಮ (i) ೩೫೧ ನಿಟಿಲದೃಕ್ (ii) ೮೨೦ ಅಂಬುಶೋಷಕ – ನೋಡಿರಿ

**೮೩೧ ಅಗ್ನಿಕಾರ್ಯಜ್ಞ; ೮೩೨ ಅಗ್ನಿಪೂಜಿತ;**

**೮೩೩ ಅಗ್ನಿಹೋತ್ರಯುತಾ ೮೩೪ ಅಗ್ನಿರುಧ**

**೮೩೫ ಅನ್ನಾಗ್ನಿಕೋಪನ –**

**"ವೈಶ್ವಾನರೋಭೂತ್ವಾ ಪ್ರಾಣಿನಾಂದೇಹಮಾಶ್ರಿತಃ ।**
**ಪ್ರಾಣಾಪಾನಸಮಾನಯುಕ್ತಾಃ ಪಚಾಮ್ಯನ್ನಂಚತುರ್ವಿಧಾಂ॥"**

ಜೀವಾತ್ಮಲ್ಲಿದ್ದುಕೊಂಡು ಅವರ ಜಠರಾಗ್ನಿಯನ್ನು ಪ್ರಕೋಪನಗೊಳಿಸುವಂಥ – **ಶ್ರೀಹರಿಯು**

**೮೩೬ ಅಗ್ನಿ ಸ್ಥಾಪಕ – ೮೩೭ ಅಗ್ನಿವರ್ಧಕ – ೮೩೮ ಅಗ್ನಿದೀಪಕ –**

**೮೩೯ ಅಗ್ನಿವರ್ಣ –**

ಅಗ್ನಿಯಾತೆ ತಾಮ್ರವರ್ಣೀಯನಾದಂಥ – **ಶ್ರೀ ಹರಿಯು**

**ವಾತಜನಕ ಚಕ್ರ ವಾತಸಮಭ್ರಮ ।**
**ವಾತಾಗ್ರಜ ನಾಸಿಕಜಲಯ –।**
**ವಾತಸಮಕ್ವಾಶಾಂಕ ವಾತಭ್ರಾತೃಹಿತಕರಣೌ ॥**
**ವಾತಸಖಿಗತವಾತಭವನುತ ।**
**ವಾತಸುತಮತ ವಾತರಶನಸು –।**
**ವಾತಸಮ ಹರಿಗಮನ ಸೂತ್ರವಾತ ಜನಕ ನಮೋ ॥ ೬೧ ॥**

**೮೪೦. ವಾತಜನಕ –**

ನಾಮ – ೮೪೮ **"**ಸೂತ್ರ ಸುವಾತಜನಕ**"** ನೋಡಿರಿ.

**೮೪೧. ಚಕ್ರವಾತಸಮಭ್ರಮ –**

**೮೪೨. ವಾತಾಗ್ರಜ ನಾಸಿಕಜಃ**

ಚಕ್ರವಾತದಂತೆ ಸಂಚಾರ ಮಾಡುವಂಥ – **ಶ್ರೀಹರಿಯು.**

ವಾತಾಗ್ರಜ + ನಾಸಿಕ + ಜ

ವಾಯುದೇವರ ಹಿರಿಯಣ್ಣನಾದ – ಬ್ರಹ್ಮ – ಆತನ ನಾಸಿಕ ಅಂದರೆ ಮೂಗು ಅಲ್ಲಿಂದ ಜ ಅಂದರೆ ಪ್ರಾದುರ್ಭವಿಸಿದಂಥ – ಮಹಾವತಾರದ – ಶ್ರೀ ಹರಿಯು

ನಾಮ – ೭೨ – ವರಹ – ಹಾಗೂ ಮೂಗಸಂಭವ"

**೮೪೩. ಲಯವಾತಸಮಾಕ್ವಾಶಕ –**

ಲಯವಾತದಲ್ಲಿಯ ವಾಯುದೇವರಿಗೆ ಸಮರಾದ – ಕ – ಅಂದರೆ ಬ್ರಹ್ಮದೇವರ ಆಶೆಗಳಿಗೆ ವಿಷಯನಾದಂಥ – **ಶ್ರೀ ಹರಿಯು**

**೮೪೪. ವಾತಭ್ರಾತೃಹಿತಕರಣೌ –**

ಭೀಮಸೇನದೇವರ ತಮ್ಮನಾದ ಅರ್ಜುನನಿಗೆ ಹಿತವನ್ನುಂಟು ಮಾಡಿದ – **ಶ್ರೀ ಕೃಷ್ಣಾವತಾರದ – ಶ್ರೀ ಹರಿಯು**

**ವಾತಸಖಿಗತ** – ವಾತಸಖಿ = ಅಗ್ನಿ – ಅಗ್ನಿಯಲ್ಲಿರುವಂಥ – **ಶ್ರೀಹರಿಯು**

**೮೪೫. ವಾತಭವನುತ –**

ವಾತಪುತ್ರನಾದ ಹನುಮಂತನಿಂದ ಸೇವೆಕೈಕೊಂಡ – ಶ್ರೀರಾಮವತಾರದ – **ಶ್ರೀಹರಿಯು**



ವಾತಪುತ್ರನಾದ ಭೀಮಸೇನನಿಂದ ಸೇವೆ ಕೈಕೊಂಡ – ಶ್ರೀ ಕೃಷ್ಣಾವತಾರದ – **ಶ್ರೀಹರಿಯು**

ವಾಯ್ವಾತಾರಿಯಾದ ಶ್ರೀ ಮಧ್ವಾಚಾರ್ಯರಿಂದ ಸೇವೆ ಕೈಕೊಂಡಂಥ – ಶ್ರೀ ವ್ಯಾಸಾವತಾರದ – **ಶ್ರೀ ಹರಿಯು**

**೮೪೬. ವಾತಸುತಮತ –**

**"**ಹನುಮನಮತವೇ ಹರಿಯಾಮತವು**"** – ಪುರಂದರದಾಸರು.

ವಾತಸುತ–ಹನುಮ–ಭೀಮ–ಮಧ್ವ–ಈ ಮಧ್ವ–ಮತಪ್ರಿಯನಾದಂಥ – **ಶ್ರೀ ಹರಿಯು**

**೮೪೭. ವಾತರಶನ –**

ಮಧ್ವಮತವಿರೋಧಿಯಾದ ಬೌದ್ಧಾವತಾರದ – **ಶ್ರೀ ಹರಿಯು**

**೮೪೮. ಸುವಾತಸಮಹರಿಗಮನ** – ಹರಿ = ಗರುಡ

ಒಳ್ಳೇ ಗಾಳಿಯ ವೇಗದಿಂದ ಸಂಚರಿಸುವಂಥ ಗರುಡ–ಗಮನನಾದಂಥ – **ಶ್ರೀ ಹರಿಯು**

**೮೪೯. ಸೂತ್ರಸುವಾತಜನಕ –**

ಸೃಷ್ಟೀ ಉತ್ಪತ್ತಿಕಾಲದಲ್ಲಿ ಸಂಕರ್ಷಣ ರೂಪಿಯಾದ ಪರಮಾತ್ಮನು, ತನ್ನ ಭಾರ್ಯೆ – ಶ್ರೀಲಕ್ಷ್ಮೀಯ ರೂಪವಾದ ಜಯಾದೇವಿಯಲ್ಲಿ ಜ್ಞಾನ, ಬಲಗಳಿಂದ ಕೂಡಿದ ವಾಯುವೆಂಬ ಪುತ್ರನನ್ನೂ ಪಡೆದರು, ಆ ವಾಯುದೇವರಿಗೆ ಸೂತ್ರ ಎಂದೂ ಕೂಡಾ ಕರೆಯುವದುಂಟು.[೨೨] ಇಂಥ ಸೂತ್ರನೆಂಬವಾತನ ಜನಕನಾದ ಸಂಕರ್ಷಣ ರೂಪೀ – **ಶ್ರೀಹರಿಯು**

**ಅಂಬರಮಣಜಾರ್ಚಿತ ನವಾಂಬರ ।**
**ಅಂಬರಕ್ರೀಡಾಂಬರಾಳಕ –।**
**ಸಂಭಜಿತಸ್ವಾಂಬರಭರಿತಪದಅಂಬಾರೇಣುಕನ್ ॥**
**ಅಂಬರಗವಂಕೇಂದ್ರ ದ್ವಾಂಬರಾಪಹರಾಂಬರ**
**ಅಂಬರಗ ಹಯಗಾಂಬರಪಂ ಪಾಂಬಕಸ ನಾಭಿನಮೋ ॥ ೬೨ ॥**

**೮೫೦. ಅಂಬರಮಣಜಾರ್ಚಿತ –**

ಅಂಬ+ರಮಣ + ಜ +ಅರ್ಚಿತ.

ಪಾರ್ವತಿ ಪತಿ ಶಂಕರನ ಮಗನಾದ ಗಜವದನನಿಂದ ಪೂಜೆ ಕೈಕೊಂಡಂಥ – **ಶ್ರೀ ಹರಿಯು**

**೮೫೧. ನವಾಂಬರ – (ನವ+ಅಂಬರ)**

ನೂತನವಾದ ಅಂಬರ (ಅಂದರೆ = ವಸ್ತ್ರ) ಪೀತಾಂಬರ ಧರಿಸಿದಂಥ – **ಶ್ರೀ ಹರಿಯು**

**೮೫೨. ಅಂಬರಕ್ರೀಡಾ**

– ಅಂಬರ = ಆಕಾಶ ಆಕಾಶದಲ್ಲಿ ಕ್ರೀಡಿಸುವಂಥ – **ಶ್ರೀ ಹರಿಯು**

---

೨೨. – ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೩

**೮೫೩. ಅಂಬರಾಳಕಸಂಭಜಿತ** – ಅಂಬರಾಳಕ = ರುದ್ರ ದೇವರು, ರುದ್ರ ದೇವರಿಂದ ಪೂಜೆಗೊಳ್ಳುವಂಥ – **ಶ್ರೀ ಹರಿಯು**

**೮೫೪. ಸ್ವಾಂಬಕ ಭರಿತಪದ –**

ಸ್ವ+ಅಂಬರ+ಭರಿತ+ಪದ –

ತನ್ನಿಂದಲೇ ನಿರ್ಮಿತವಾದ ಆಕಾಶವನ್ನೆಲ್ಲ ತನ್ನ ಒಂದೇ ಪಾದ ಅಳತೆಯಲ್ಲಿ ವ್ಯಾಪಿಸಿದಂಥ – ತ್ರಿವಿಕ್ರಮ ರೂಪಿಯಾದಂಥ – **ಶ್ರೀ ಹರಿಯು**

**೮೫೫. ಅಂಬಾರೇಣುಕಹನ್ –**

ತಾಯಿಯಾದ ರೇಣುಕಾ ದೇವಿರನ್ನು ತಂದೆಯಾದ ಜಮದಗ್ನಿ ಮುನಿಯ ಆಜ್ಞೆಯಂತೆ ಸಂಹರಿಸಿದಂಥ – ಪರಶುರಾಮಾವತಾರದ – **ಶ್ರೀಹರಿಯು**

ನಾಮ – ೩೬೩ – ಭೃಗುಜ” ನೋಡಿರಿ.

**೮೫೬. ಅಂಬರಗವಂಶೇಂದ್ರ** – ಅಂಬರ+ಗ+ವಂಶ+ಇಂದ್ರ

ಆಕಾಶದಲ್ಲಿ ಚಲಿಸುವ ಸೂರ್ಯ ಹಾಗೂ ಚಂದ್ರ ವಂಶಗಳಲ್ಲಿ ಜನಿಸಿ, ಶ್ರೇಷ್ಠರೆನಿಸಿ ಕೊಂಡಂಥ – ಶ್ರೀರಾಮಾವತಾರದ ಹಾಗೂ ಕೃಷ್ಣಾವತಾರದ – **ಶ್ರೀ ಹರಿಯು**

**೮೫೭. ಗೋಪವಧ್ವಾಂಬರ್ಗಹರಾ –**

ಗೋಪವಧ್ವಾ+ಅಂಬರ+ಅಪಹರಾ ಗೋಪಿಕಾಸ್ತ್ರೀಯರ ಬಟ್ಟೆಗಳನ್ನು ಅಪಹರಿಸಿದ ಶ್ರೀಕೃಷ್ಣಾವತಾರದ – **ಶ್ರೀ ಹರಿಯು**

**೮೫೮. ಅಂಬಾರಂಬರ –** (ಅಂಬರ = ಆಕಾಶ)

ಆಕಾಶದಲ್ಲಿದ್ದ ವಾಯುದೇವರ ಪತ್ನಿಯಾದ – ದ್ರೌಪದಿ ದೇವಿಗೆ ಅಕ್ಷಯವಾದ ವಸ್ತ್ರವನ್ನೂ ದಯಪಾಲಿಸಿದ – ಶ್ರೀಕೃಷ್ಣಾವತಾರದ – **ಶ್ರೀ ಹರಿಯು**

**೮೫೯. ಅಂಬರಗಹಯಗಾ –**

(ಅಂಬರ=ಆಕಾಶಃ ಗ = ಹೋಗುವ; ಹಯ = ಕುದುರೆ ಗಾ = ಪಡೆದ) (ರಥಕ್ಕೆ) – ಶೈಖ್ಯ; ಸುಗ್ರೀವ, ಮೇಘಪುಷ್ಪ, ಬಲಾಹಕ; ಎಂಬ ನಾಲ್ಕು ಗಗನ ಸಂಚಾರಿ ಕುದುರೆಯುಳ್ಳಂಥ – ಶ್ರೀಕೃಷ್ಣಾವತಾರದ – ಶ್ರೀ ಹರಿಯು.

[ಬ್ರಾಹ್ಮಣ ಮಕ್ಕಳನ್ನು ಉಳಿಸಲು ಅಸಮರ್ಥನಾದ ಅರ್ಜುನನು ಪ್ರಾಯಶ್ಚಿತ್ತವಾಗಿ ಅಗ್ನಿಪ್ರವೇಶ ಮಾಡಲು ಅನುವಾದಾಗ ಶ್ರೀ ಕೃಷ್ಣನು ತಾನೇ ಸ್ವತಃ ಇಂಥ ದಿವ್ಯ ರಥವನ್ನೇರಿ ಆ ಬ್ರಾಹ್ಮಣನ ಮಕ್ಕಳನ್ನು ತಂದುಕೊಟ್ಟನು].

**೮೬೦. ಅಂಬರ –**

ಆಕಾಶತತ್ವದಂತೆ ನಿರ್ಲಿಪ್ತವಾದಂಥ – ಶ್ರೀಹರಿಯು – ವೇದ

**೮೬೧. ಪಂಪಾಂಬಕಸನಾಭಿ –**

ಪಂಪಾಕ್ಷೇತ್ರದಲ್ಲಿ ದೃಷ್ಟಿಯುಟ್ಟ ರುದ್ರದೇವರ ಅಣ್ಣ, ದತ್ತಾ, ದುರ್ವಾಸ (ರುದ್ರ) ಸೋಮನು; ಅತ್ರಿಯಮಕ್ಕಳಾದಾಗ ಇರುವಂಥ – **ಶ್ರೀ ಹರಿಯು**



**ಶಬ್ದಬೋಧಕ ಶಬ್ದಕಾರಕ ।**
**ಶಬ್ದ ಘರ್ಘರ ಶಬ್ದಹೂಕರ ।**
**ಶಬ್ದಪಾರಗ ಶಬ್ದವೀರಗಂಭೀರ ಶಬ್ದಾಂಕಾ ॥**
**ಶಬ್ದಶೋಧಕ ಶಬ್ದದೂಷಕ ।**
**ಶಬ್ದಸ್ಥಾಪಕ ಶಬ್ದವಿಸ್ತೃತ ।**
**ಶಬ್ದಬ್ರಹ್ಮಾಜ್ಞೇಶ ಶಬ್ದಾತೀತಶಬ್ದ ನಮೋ** ॥ ೬೩ ॥

**೮೬೨. ಶಬ್ದಬೋಧಕ**
**೮೬೩. ಶಬ್ದಕಾರಕ**
**೮೬೪. ಶಬ್ದಘರ್ವರ**
**೮೬೫. ಶಬ್ದಪಾರಗ**
**೮೬೬. ಶಬ್ದ ವೀರಭೀರ ಕಬ್ದಾಂಕಾ**
**೮೬೭. ಶಬ್ದಕೋಧಕ**
**೮೬೮. ಶಬ್ದದೂಷರ್**
**೮೬೯. ಶಬ್ದಸ್ಥಾಪಕ**
**೮೭೦. ಶಬ್ಧ ವಿಸ್ತೃತ**
**೮೭೧. ಶಬ್ದಬ್ರಹೇಜ್ಞೀಕ**
**೮೭೨. ಶಬ್ದಾತೀತ**

**ವೃಷಭಗೇಷ್ಟಮಿಥುನಮ**ರ್ದಕ ।
ವಿಷಯ **ಕರ್ಕಶ** ಮೃತ್ಯು ಕರಿ**ಹರಿ** ।
ವಿಷರದನ **ಕನ್ಯಾಪತಿಸಖ ವೃಶ್ಚಿಕಾ**ಭಾಂಗಾ ॥
ವಿಷಪ**ಧನ**ಹರ **ಮಕರ**ಕುಂಡಲ ॥
ವಿಷ**ಕುಂಭ** ಸ್ತನಪಾನತತ್ಪರ ।
ವಿಷಯಸುಖಮಯ **ಮೀನ ಮೇಷಾ**ರೂಢ ವಿಷಯ ನಮೋ ॥ ೬೪ ॥

**೮೭೩. ಪ್ರಷಭಗೇಷ್ಟ –**

ವೃಷಭಾರೂಢನಾಗಿ ಸಂಚರಿಸುವ ಮಹಾದೇವರಿಗೆ ಇಷ್ಟ ಅಂದರೆ ಸಂತುಷ್ಟ ನಾಗಿರುವಂಥ – **ಶ್ರೀ ಹರಿಯು.**

ನಾಮ – ೭೯. **“ಗಿರಿಜಾರ್ಚಿತ ಪದಾಬ್ಜ”** ನೋಡಿರಿ

ಸಮಗ್ರ ವೈದಿಕ ವಾಙ್ಮಯವನ್ನು ಋಗ್ವೇದವು ವೃಷಭವೆಂದು ವರ್ಣಿಸಿದೆ. ಅಂಥ ವೃಷಭ ಅಂದರೆ ವೈದಿಕ ವಾಙ್ಮಯವನ್ನು ಅಭ್ಯಸಿಸುವ ಅಥವಾ ಬೋಧಿಸುವ ಬ್ರಾಹ್ಮಣರಿಗೆಲ್ಲ ಸಂತುಷ್ಟನಾದಂಥ. **ಶ್ರೀ ಹರಿಯು.**[೨೭೩]

**೮೭೪. ಮಿಥುನಮರ್ದಕ**

**ಮಿಥುನ = ಅವಳಿಜವಳಿಯಾದ ಹಿರಿಣ್ಯಾಕ್ಷ – ಹಿರಣ್ಯಕಶ್ಯಪರನ್ನು ಮರ್ದಿ**ಸಿದ – **ಶ್ರೀಹರಿ**

**೮೭೫.ವಿಷಯ ಕರ್ಕಕ–ತನ್ನಲ್ಲಿ ವೈರತಾಳಿದ ರಕ್ಕಸರಲ್ಲಿ ಕಠೋರತ್ವ ಆಚರಿಸಿದ – ಶ್ರೀಹರಿ**

**೮೭೬. ಮೃತ್ಯುಕರಿ ಹರಿ** – ಹರಿ = ಸಿಂಹ.

---

೨೭೩. ಋಗ್ವೇದ ೪–೫೮–೩ ಹಾಗೂ ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರಕ್ಕೆ – ಉಡುಪಿ ಟೀಕೆ ನಾಮ – ೮ – “ಭೂತಾತ್ಮಾ” ಕ್ಕೆ ಪುಟ – ೩೨

ಮರಣವೆಂಬ ಆನೆಗೆ ಶತ್ರುರೂಪಿಯಾದ ಸಿಂಹದಂತಿರುವ – **ಶ್ರೀ ಹರಿಯು**

**೮೭೭. ವಿಷರದನ ಕನ್ಯಾ ಪತಿ ಸಖ –**

ರದನ = ಹಲ್ಲು, ವಿಷರದನಕನ್ಯಾ – ನಾಗಕನ್ಯಾ. ನಾಗಕನ್ಯೆಯಾದ – ಉಲುಪಿ'ಯ ಪತಿಯಾದ ಅರ್ಜುನನ ಸಖನಾದ – ಶ್ರೀ ಕೃಷ್ಣಾವತಾರದ – **ಶ್ರೀ ಹರಿಯು.**

**೮೭೮. ವೃಶ್ಚಿಕಾಭಾಂಗ** – ವೃಶ್ಚಿಕ = ಚೇಳು

ಶಂಶುಪಾಲ ರೂಪಿಯಾದ – **ಶ್ರೀಹರಿಯು.**

**೮೭೯. ವಿಷಪಧನ ಹರ –**

ವಿಷವನ್ನೇ ತಮ್ಮ ಧನವನ್ನಾಗಿಟ್ಟುಕೊಂಡಂಥ ಸರ್ಪದ ವಿಷವನ್ನು ಹರಣ ಮಾಡಿದಂಥ ಹಾಗೂ ಕಾಲಿಮರ್ದನ ಮಾಡಿದಂಥ – ಶ್ರೀಕೃಷ್ಣಾವತಾರದ – **ಶ್ರೀ ಹರಿಯು**

ನಾಮ – (i) ೪೪೬ ನಾಗಗರ್ವಹನ್ ಹಾಗು ನಾಮ (ii) ೨೩೦. ಫಣಿಮದಹರ – ನೋಡಿರಿ.

**೮೮೦. ಮಕರಕುಂಡಲ –**

ತನ್ನ ಕರ್ಣಭೂಷಣಾರ್ಥವಾಗಿ ಮಕರ ಕುಂಡಲಗಳನ್ನು ಧರಿಸಿಕೊಂಡಂಥ – **ಶ್ರೀ ಹರಿಯು.**

**೮೮೧. ವಿಷಕುಂಭ ಸ್ತನಪಾನ ತತ್ಪರ –**

ಸ್ತನರೂಪೀ ಕುಂಭಗಳಲ್ಲಿ ವಿಷವನೇ ತುಂಬಿಕೊಂಡು ಬಂದು ಬಾಲಕೃಷ್ಣನನ್ನು ಮುದ್ದಾಡಿ ಕೃತಕ ಮಮತೆಯನ್ನು ತೋರಿ, ಸ್ತನಪಾನ ಮಾಡಿಸಬಯಸಿದ "ಪೂತನಿ" ಎಂಬ ಕಂಸ ಭೃತ್ಯಳನ್ನು ಪಾನತತ್ಪರನಂತೆ ತೋರುತ್ತ ಶ್ರೀ ಕೃಷ್ಣ ಪರಮಾತ್ಮನು ಅವಳ ಪ್ರಾಣವನ್ನೇ ಹೀರಿದಂಥ – **ಶ್ರೀ ಹರಿಯು**

ನಾಮ – ೫೨ **"ಪೂತನಾಂತಕ"** ನೋಡಿರಿ.

**೮೮೨. ವಿಷಯ ಸುಖಮಯ ಮೀನ –**

ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಅಧಿಪತಿಯಾದ ಸೂರ್ಯಪುತ್ರ – ಶ್ರಾದ್ಧದೇವನು ಚಾಕ್ಷುಷ ಮನ್ವಂತರವು (ಈ ಮನ್ವಂತರ ಹಿಂದಿನದು) ಮುಗಿಯುವ ಕಾಲದಲ್ಲಿ, **"ಸತ್ಯವೃತ"** ನೆಂಬ ಹೆಸರಿನ ಅರಸನಾಗಿದ್ದನು. ಚಾಕ್ಷುಷ ಮನ್ವಂತರವು ಮುಗಿಯಲು ಜಲಪ್ರಳಯವಾಗಿ (ಮನ್ವಂತರ ಪ್ರಳಯ) ಸಮುದ್ರವು ಭೂಮಿಯನ್ನೆಲ್ಲ ಆವರಿಸಿತು. ಎಲ್ಲ ಪ್ರಾಣಿಗಳು ನಾಶವಾದವು. ಸ್ವಲ್ಪ ದಿನಗಳ ಮೊದಲು ಮತ್ಸರೂಪದಿಂದ ಸತ್ಯವೃತ ರಾಜನಿಗೆ ದರ್ಶನವಿತ್ತು. ಶ್ರೀ ಹರಿಯು ಪ್ರಳಯ ಜಲದಿಂದ ಪಾರಾಗುವ ಮಾರ್ಗವನ್ನು ಉಪದೇಶಿಸಿದ್ದನು. ಅದರಂತೆ ಸತ್ಯವೃತನು ನಾವೆಯೊಂದರಲ್ಲಿ ಕುಳಿತು, ಪ್ರಕ್ಷುಬ್ಧವಾದ ಸಮುದ್ರದಲ್ಲಿ ತಲ್ಲಣಗೊಳ್ಳುತ್ತಿರಲು, ಮತ್ಸರೂಪೀ ಶ್ರೀ ಹರಿಯು ಆ ನಾವೆಯನ್ನು ರಕ್ಷಿಸಿ, ಮನ್ವಂತರಾಧಿಪನಾಗುವ ಆ ಮನುವಿಗೆ, ಅವಶ್ಯವಾದ ಜ್ಞಾನೋಪ ದೇಶ ಮಾಡಿದನು.



ತತ್ರ ರಾಜರ್ಷಿಃ ಕಶ್ಚಿತ್ ನಾಮ್ನಾ ಸತ್ಯವೃತೋ ಮಹಾನ್ ।
ಯೋಸೇ ಅಸ್ಮಿನ್ ಮಹಾಕಲ್ಪೇ ಮನುತ್ವೇ ಹರಿಣಾರ್ಷಿತಃ ॥ – **ಶ್ರೀ ಮದ್ಭಾಗವತ**

[ಮಹಾಕಲ್ಪವೆಂದರೆ ಇಲ್ಲಿ ದಿನಕಲ್ಪವೆಂದರ್ಥ, ಮನುಕಲ್ಪ ವಿವಕ್ಷೆಯಿಂದ ಮಹತ್ತರವಾದುದು ದಿನಕಲ್ಪ. ಒಂದು ದಿನ ಕಲ್ಪದಲ್ಲಿ ಹದಿನಾಲ್ಕು ಮನುಕಲ್ಪಗಳಾಗುತ್ತೇವೆ].

ಹೀಗೆ ಮನ್ವಂತರಾಧಿಪನನ್ನು ಮನ್ವಂತರ ಜಲದಲ್ಲಿ ಕಾಪಾಡಿ, ಅವನಿಗೆ ಜ್ಞಾನೋಪದೇಶವನ್ನು ಕರುಣಿಸಿದಂಥ – **ಶ್ರೀ ಹರಿಯು.**[೨೭೪]

**೮೮೩.ಮೇಷಾರೂಢಿವಿಷಯ–ಅಗ್ನಿಯಲ್ಲಿ ಯೋಗಿಗಳಿಗೆ ಕಾಣಿಸಿಕೊಳ್ಳುವಂಥ – ಶ್ರೀಹರಿಯು**

**ಅಶ್ವರೂಪ ಮಹಾಭರಣಿ ಸಖ ।**
**ವಿಶ್ವಕೃತ್ತಿಕಾಯಂಗಿವರರೋಹಿ – ।**
**ಣೀಶ್ವರೋದ್ಭವ ಮೃಗಮದಾಂಕಾರಿದ್ರವಿಣಹರಣಾ ॥**
**ನಿಸ್ವಜನ ಪುನರ್ವಸುದ ಗುರೋರ್ಗುರೋ – ।**
**ಹೀಶ್ವರಾಸನ ಪಿತೃಚಯಾರ್ಚಿತ ।**
**ಸ್ವಸ್ವಭಾಗ್ಯ ಸುಪೂರ್ಣಾಮೃತಮಯೋರ್ತ್ತರಸುಹಸ್ತ ನಮೋ** ॥ ೬೫ ॥

**೮೮೪. ಅಶ್ವರೂಪ**

**ಅಶ್ವರೂಪಿಯಾದ – ಹಯವದನಾವತಾರದ – ಶ್ರೀಹರಿಯು**

**೮೮೫. ಮಹಾಭರಣಿಸುಖ** – ಶ್ರೀಮಹಾಲಕ್ಷ್ಮಿಗೆ ಸಖತ್ವ ಇರುವ – **ಶ್ರೀಹರಿ**

**೮೮೬. ವಿಶ್ವಕೃತ್ತಿಕಾಯಂಗೀವರ –**

ವಿಶ್ವ (ಜಗತ್ತು) + ಕೃತ್ತಿಕಾಮಂಗೀ (ಕೃತಿ ಎಂಬುವಳ)+ವರ (ಗಂಡ). ಜಗತ್ತಿನ ಸೃಷ್ಟಿಕರ್ತ – ಕೃತಿರಮಣನಾದ – ಪ್ರದ್ಯುಮ್ನನು. ಸೃಷ್ಟಿ ಪ್ರಾರಂಭದಲ್ಲಿ ನಾರಾಯಣನ ಉದರದಲ್ಲೇ ಅನಂತ ಜೀವರಾಶಿಗಳು ಅಸೃಜ್ಯಾವಸ್ಥೆಯಲ್ಲಿ ಇರುತ್ತವೆ. ವಾಸುದೇವನು ಅವುಗಳನ್ನೂ ತೆಗೆದು ಅನಿರುದ್ಧನ ಕೈಗೆ ಕೊಡುತ್ತಾನೆ. ಅನಿರುದ್ಧನು ಅವುಗಳಿಗೆ ಅನಿರುದ್ಧ ದೇಹವನ್ನು ಕೊಡುತ್ತಾನೆ. ಇದೇ **"ಸೂಕ್ಷ್ಮ – ಸೃಷ್ಟೀ"**. ಲಿಂಗದೇಹ ಭಂಗವಾಗುವವರೆಗೆ ಈ ದೇಹ ಎಲ್ಲರಿಗೂ ಇರುತ್ತದೆ.

ನಂತರ ಅನಿರುದ್ಧನು ಈ ಬ್ರಹ್ಮಕಲ್ಪದಲ್ಲಿ ಸಾಧನೆಯದ್ವಾರಾ ಮುಕ್ತಿಗೆ ಅರ್ಹರಾದ ಜೀವರನ್ನೂ ಪ್ರದ್ಯುಮ್ನನಿಗೆ ಕೊಡುತ್ತಾನೆ. ಪ್ರದ್ಯುಮ್ನನು ಕೃತಿಯನ್ನೊಡಗೂಡಿ ಅವರಿಗೆ ಸ್ಥೂಲ ಶರೀರವನ್ನು ಕೊಡುತ್ತಾನೆ. ಹಾಗೂ ಸೃಷ್ಟಿ ತರುತ್ತಾನೆ. ಇದುವೇ – **ಸ್ಥೂಲಸೃಷ್ಟಿ**

ಬ್ರಹ್ಮಾಂಡದ ಹೊರಗೆ ಚೇತನರಿಗೆ ಸೂಕ್ಷ್ಮ ದೇಹವನ್ನೂ ಹೊಂದಿಸಿ ಅನಿರುದ್ಧನು ಸೃಷ್ಟಿಸಿದ ಚೇತನರನ್ನು ಬ್ರಹ್ಮಾಂಡದ ಒಳಗೆ ಸ್ಥೂಲ ದೇಹವನ್ನೂ ಹೊಂದಿಸಿ ಕೃತಿಯನ್ನೊಡ ಗೂಡಿ ಸೃಷ್ಟಿಸುವವನು ಇಂಥ ಪ್ರದ್ಯುಮ್ನನು ಕಾಮಾಂತರ್ಯಾಮಿ ಆಗಿರುವ ಪ್ರದ್ಯುಮ್ನನ್ನು

೨೭೪. ಶ್ರೀ ಜಗನ್ನಾಥ ದಾಸಾರ್ಯ ವಿರಚಿತ "ತತ್ವಸುವ್ವಾಲಿಗೆ" ಟಿಪ್ಪಣೆಗ್ರಂಥ "ವಿಜಯಾಂಕ ರತ್ನ– ೭" ರ ಪುಟ ೧೭೨ ಹಾಗೂ ೧೭೩.

